ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–142

ಮಹಾಕವಿ

ಷಡಕ್ಷರದೇವ ವಿರಚಿತ

# ಶಬರಶಂಕರ ವಿಳಾಸಂ

ಗದ್ಯಾನುವಾದ :

ದಿಬ್ಬೂರು ಶ್ರೀನಿವಾಸರಾವ್





ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–18

1979

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–142

ಮಹಾಕವಿ
ಷಡಕ್ಷರದೇವ ವಿರಚಿತ

# ಶಬರಶಂಕರ ವಿಳಾಸಂ

ಗದ್ಯಾನುವಾದ :
ದಿಬ್ಬೂರು ಶ್ರೀನಿವಾಸರಾವ್



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-18
1979

SABARASHANKARA VILASAM by Shadakshara deva. Original with Prose rendering by. Sri Dibburu Sreenivasa Rao. First Published in 1979 by Kannada Sahitya Parishat, Chamarajpet, Bangalore-18.
Pages : XIV+208, Price : Rs. 6-50



ಮೊದಲ ಮುದ್ರಣ : 1979



ಬೆಲೆ : ಆರು ರೂಪಾಯಿ ಐವತ್ತು ಪೈಸೆ

ಪ್ರಕಾಶಕರು :

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560 018



ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570 001.

# ಅನುವಾದದ ಯೋಜನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತು ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆ ಯಲ್ಲಿ ದೊರೆಯುವಂತೆ ಮಾಡುವುದು, ಇವು ಆ ಯೋಜನೆಯ ಮುಖ್ಯ ಅಂಶಗಳು. ಅಲ್ಲದೆ,

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯ ದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

ಹಳಗನ್ನಡ : ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಳಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭಪುರಾಣ, ಉದ್ಭಟಕಾವ್ಯಂ, ಕುಸಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿನಾಥಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿಚರಿತೆ.

ನಡುಗನ್ನಡ : ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದುವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗೆ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದ ಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತ ಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ.ನಂತೆ ಸಂಭಾವನೆ ನೀಡ ಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15 ರಷ್ಟನ್ನು ಸಂಭಾವನೆಯಾಗಿ ಕೊಡ ತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕಾರ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟು ಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸ ಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ, ಪುಸ್ತಕ ಪ್ರಕಟಣೆಯಾದಮೇಲೆ. ಅನುವಾದಕರಿಗೆ ಈ ಗ್ರಂಥದ ಹತ್ತು ಪ್ರತಿಗಳನ್ನು, ಅನುವಾದಕ ಮಂಡಲಿ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ

ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ಈಚೆಗೆ ಧಾರವಾಡದಲ್ಲೂ ಅನುವಾದ ಕಾರ್ಯ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿವಹಿಸಿ ಅನುವಾದ ಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ.

ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಹಳಗನ್ನಡ ಗದ್ಯಾನುವಾದ ಮಾಲೆಯಲ್ಲಿ ಷಡಕ್ಷರ ಕವಿಯ ಶಬರಶಂಕರ ವಿಲಾಸ ಒಂದು. ಈ ಅನುವಾದವನ್ನು ಶ್ರೀ ದಿಬ್ಬೂರು ಶ್ರೀನಿವಾಸರಾಯರು ಮಾಡಿ ಕೊಟ್ಟಿದ್ದಾರೆ. ಅವರು ಕನ್ನಡದಲ್ಲಿ ಮತ್ತು ಸಂಸ್ಕೃತದಲ್ಲಿ ಪಂಡಿತರು. ಅವರು ವೃತ್ತಿಯಲ್ಲಿ ಕಾರ್ಖಾನೆಯ ಕೆಲಸಗಾರರಾದರೂ, ಸಾಹಿತ್ಯಾಭ್ಯಾಸದಲ್ಲಿ ಪುರಾತನ ಸಂಪ್ರದಾಯವನ್ನು ಅನುಸರಿಸಿ ಕಾವ್ಯಾಭ್ಯಾಸವನ್ನು ಮಾಡಿದ್ದಾರೆ. ಹಳಗನ್ನಡ ನಡುಗನ್ನಡ ಕಾವ್ಯಗಳ ಗಮಕ ವಾಚನದಲ್ಲಿ ವ್ಯಾಖ್ಯಾನಕಾರರಾಗಿ ಪ್ರಸಿದ್ಧರಾಗಿದ್ದಾರೆ. ರಾಜಶೇಖರ ವಿಳಾಸವನ್ನು ಕುರಿತು ಅನೇಕ ತಿಂಗಳು ಪಾಠ ಹೇಳಿದ್ದಾರೆ, ಶಬರಶಂಕರ ವಿಳಾಸವೂ ಅವರ ಅಭ್ಯಾಸದ ಒಂದು ಕೃತಿ. ಅದನ್ನು ಗದ್ಯಾನುವಾದ ಮಾಡಿ ಪರಿಷತ್ತಿನ ಅನುವಾದ ಮಾಲೆಯಲ್ಲಿ ಸೇರಿಸಿಕೊಳ್ಳಲು ಸಹಾಯ ಮಾಡಿದ್ದಾರೆ. ಅವರಿಗೆ ನಮ್ಮ ಹಾರ್ದಿಕ ವಂದನೆಗಳು.

ಷಡಕ್ಷರ ರಚಿತ ಕಾವ್ಯಗಳಲ್ಲಿ ಇದು ಸಣ್ಣದೇ ಎಂದು ಹೇಳಬೇಕು. ಆದರೂ ಅವನ ರಚನೆ ಹಳಗನ್ನಡ ಕಾವ್ಯರಚನಾ ಕಾಲದ ಪಾಂಡಿತ್ಯವನ್ನು ಮೀರಿಸುವಂತಿದೆ. ಅವನಿಗೆ ಹನ್ನೊಂದನೆಯ ವರ್ಷದಲ್ಲಿಯೇ ಕವಿತಾಶಕ್ತಿ ತುಂಬಿ ಬಂದಿತಂತೆ. ಅಲ್ಲಿಂದಲೂ ಅದನ್ನು ಬೆಳಸಿಕೊಂಡು ಬಂದ ಅವನ ಸಾಧನೆ ಅದ್ಭುತವಾದದ್ದು. ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಮೇಲೆ ಅವನ ಹತೋಟಿ ಆಶ್ಚರ್ಯಕರವಾದದ್ದು. ಈ ತನ್ನ ಕಾವ್ಯ ಸಂಪತ್ತನ್ನು, ಭಾಷಾಶಕ್ತಿಯನ್ನು ಅವನು ಶಿವನ, ಶಿವಭಕ್ತರ ಮಹಿಮೆಯನ್ನು ಹೊಗಳುವುದಕ್ಕೆ ಸರಾಗವಾಗಿ ಬಳಸಿಕೊಂಡ ಭಕ್ತ ಕವಿ, ಆತ. ಹರಿಹರ ಅವನ ಅಪರೋಕ್ಷ ಗುರು. ಅವನ ಜೀವನದ ಗುರಿಯೇ ಷಡಕ್ಷರನದು ಕೂಡ. ಕಾವ್ಯ ಗಂಭೀರವಾಗಿರಬೇಕಾದರೆ, ಅದಕ್ಕೆ ಅರ್ಥಗೌರವ ಬರಬೇಕಾದರೆ ಪ್ರಾಚೀನ ಮಾರ್ಗವೇ ಉತ್ಕೃಷ್ಟವೆಂದು ನಂಬಿದವನು.

'ಅರ್ಜುನ-ಈಶ್ವರ' ಇವರ ಒಂದು ಆಖ್ಯಾಯಿಕೆ ಮಹಾಭಾರತದಲ್ಲಿ ಬರುತ್ತದೆ. ಅರ್ಜುನ ಶಿವನನ್ನು ಆರಾಧಿಸುವ ರೀತಿಯೇ ಒಂದು ಹೊಸ ವಿಧಾನ. ಶೂರನಾದವನು ತನ್ನ ಪೌರುಷಪ್ರದರ್ಶನದಿಂದ ಎದುರಾಳಿಯನ್ನು ಮೆಚ್ಚಿಸುವ ಸಂಪ್ರದಾಯ ಇದು. ತಪಸ್ಸಿನಲ್ಲಿದ್ದ ಅರ್ಜುನ ಧನುರ್ಧಾರಿಯಾಗಿ ಕಿರಾತವೇಷಧಾರಿಯಾದ ಶಿವನನ್ನು ಸೋಲಿಸಿದ್ದು ಕಥಾ ಪ್ರಸಂಗ. ಅರ್ಜುನನ ಗೆಲುವಿನ ಹಿಂದೆ, ಅವನ ಶೌರ್ಯದ ಮರೆಯಲ್ಲಿ ಭಕ್ತಿಯ ಶಕ್ತಿ ತುಂಬಿದೆ. ಇಂಥ ಪ್ರಸಂಗವನ್ನು ಮೆಚ್ಚಿಕೊಂಡ ನಮ್ಮ ಅನೇಕ ಕವಿಗಳು ಈ ವಿಷಯವನ್ನು ಕುರಿತು ಕಾವ್ಯವನ್ನು ಬರೆದಿದ್ದಾರೆ. ಸಂಸ್ಕೃತದಲ್ಲಿ ಭಾರವಿ

'ಕಿರಾತಾರ್ಜುನೀಯ' ಎಂಬ ಹೆಸರಿನಿಂದ ಒಂದು ಉತ್ಕೃಷ್ಟ ಕಾವ್ಯವನ್ನು ರಚಿಸಿ 'ಭಾರವೇರರ್ಥ ಗೌರವಂ' ಎಂಬ ಕೀರ್ತಿಗೆ ಭಾಜನನಾಗಿದ್ದಾನೆ. ಶಿವಪುರಾಣದಲ್ಲಿ, ಚೆನ್ನಬಸವ ಪುರಾಣದಲ್ಲಿ,ವಿಕ್ರಮಾರ್ಜುನ ವಿಜಯದಲ್ಲಿ, ಕಡೆಗೆ ಕುಮಾರವ್ಯಾಸ ಮಹಾಭಾರತದಲ್ಲಿ ಈ ಪ್ರಸಂಗಗಳು ಬರುವುದುಂಟು. ಷಡಕ್ಷರಿ ಈ ಸಂದರ್ಭಗಳನ್ನೆಲ್ಲ ಬಲ್ಲವನಾಗಿದ್ದಾನೆ. ತನ್ನ ಹೊಸದೃಷ್ಟಿಯಿಂದ, ಕಾವ್ಯದೃಷ್ಟಿಯಿಂದ, ಭಕ್ತಿದೃಷ್ಟಿಯಿಂದ ಶಬರಶಂಕರ ವಿಳಾಸವನ್ನು ರಚಿಸಿದ್ದಾನೆ. ಇಲ್ಲಿ ಅವನಿಗೆ ಅರ್ಜುನನ ವ್ಯಕ್ತಿತ್ವವಾಗಲಿ ಪೌರುಷವಾಗಲಿ ಪ್ರಧಾನವಲ್ಲ. ಶಂಕರ ಶಂಬರನ ವೇಷದಲ್ಲಿ ನಡೆಸಿದ ಒಂದು ವಿಲಾಸ. ಅದೊಂದು ಶಿವಲೀಲೆ. ಷಡಕ್ಷರನಂಥ ಕವಿಯ ಕೈಲಿ ಕಥಾಪ್ರಸಂಗ ಚಂಪೂಶೈಲಿಯ ಪ್ರೌಢಿಮೆಯಲ್ಲಿ ಬಂದಿದೆ.

ಇದನ್ನು ಸರಳವಾಗಿ ಅನುವಾದಿಸಿಕೊಟ್ಟ ಅನುವಾದಕರಿಗೂ, ಅದನ್ನು ಪರಿಶೀಲಿಸಿ ಕೊಟ್ಟ ಅನುವಾದಕ ಮಂಡಲಿ ಅಧ್ಯಕ್ಷರಿಗೂ ಪರಿಷತ್ತಿನ ಕೃತಜ್ಞತೆಗಳು ಸಲ್ಲುತ್ತವೆ.

ಬೆಂಗಳೂರು
24–8–1979

ವಿ. ಕೃ. ಗೋಕಾಕ
ಪ್ರಧಾನ ಸಂಪಾದಕರು

# ಪ್ರಸ್ತಾವನೆ

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ಗ್ರಂಥ ಪ್ರಕಟಣೆ ಒಂದು ಪ್ರಮುಖವಾದ ಚಟುವಟಿಕೆ. ಪ್ರಾರಂಭದಲ್ಲಿ ಪರಿಷತ್ತು ತನ್ನ ಆರ್ಥಿಕಸ್ಥಿತಿಯನ್ನು ಅವಲಂಬಿಸಿ ಕೆಲವೇ ಪುಸ್ತಕಗಳನ್ನು ಪ್ರಕಟಿಸಿತು. ಆದರೆ ಆ ಪುಸ್ತಕಗಳು ಅತ್ಯಂತ ಅಮೂಲ್ಯದವೂ ಅಪೂರ್ವದವೂ ಅತ್ಯುಪಯುಕ್ತದವೂ ಆಗಿವೆ. 1969ರಿಂದ ಈಚೆಗೆ ಪರಿಷತ್ತು ತನ್ನ ಚಟುವಟಿಕೆಗಳನ್ನು ಯೋಜನಾಬದ್ಧವಾಗಿ ರೂಪಿಸಿಕೊಂಡು ತ್ರೈವಾರ್ಷಿಕ ಯೋಜನೆಯಲ್ಲಿ 100 ಪುಸ್ತಕಗಳನ್ನೂ ಪಂಚವಾರ್ಷಿಕ ಯೋಜನೆಯಲ್ಲಿ 150 ಪುಸ್ತಕ ಗಳನ್ನೂ ಹೊರತರಲು ಆಲೋಚಿಸಿತು. ಅದರಂತೆ ತ್ರೈವಾರ್ಷಿಕ ಯೋಜನೆಯ 100 ಪುಸ್ತಕಗಳೂ, ಪಂಚವಾರ್ಷಿಕ ಯೋಜನೆಯ 141 ಪುಸ್ತಕಗಳೂ ಈಗಾಗಲೆ ಪ್ರಕಟ ವಾಗಿವೆ. ಉಳಿದವು ಪ್ರಕಟಣೆಯ ಬೇರೆ ಬೇರೆ ಹಂತದಲ್ಲಿವೆ.

ಪರಿಷತ್ತು ಈಗ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಕ್ರಮಗಳನ್ನು ಆರಂಭಿಸಿದೆ. ಈ ಯೋಜನೆಯಲ್ಲೂ ಪುಸ್ತಕ ಪ್ರಕಟಣೆಯ ಚಟುವಟಿಕೆಯನ್ನೇ ಪ್ರಧಾನ ಕಾರ್ಯವನ್ನಾಗಿ ರೂಪಿಸಿಕೊಂಡಿದೆ. ಆದರೆ ಕಾಲವನ್ನು ಅನುಸರಿಸಿ ಆಯಾ ಕಾಲದ ಕನ್ನಡ ಸಾಹಿತ್ಯದ ಎಲ್ಲಾ ಆಯಾಮಗಳನ್ನೂ ಸಾಹಿತ್ಯಧೋರಣೆಯನ್ನೂ ಗಮನದಲ್ಲಿಟ್ಟು ಕೊಂಡು ಪ್ರಕಟಣೆಗೆ ಪುಸ್ತಕಗಳನ್ನು ಆಯ್ದುಕೊಳ್ಳುತ್ತಿದೆ, ಅದೆಂದರೆ ಪರಿಷತ್ತು ಪ್ರಕಟಿಸುವ ಗ್ರಂಥಗಳನ್ನೂ ಒಂದು ಗ್ರಂಥ ಪ್ರಕಟಣಾ ಸಲಹಾಸಮಿತಿ ಪರಿಶೀಲಿಸಿ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸುವಾಗ ಪುಸ್ತಕಗಳ ವಿಷಯವನ್ನು ಕುರಿತು ಕೆಲವೊಮ್ಮೆ ಆಯಾ ವಿಷಯದಲ್ಲಿ ತಜ್ಞರಾದವರ ಅಭಿಪ್ರಾಯವನ್ನು ಪಡೆಯುತ್ತದೆ.

24-7-78 ರಿಂದ ಹೊಸ ಪದಾಧಿಕಾರಿಗಳು ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಹೊಸ ದೃಷ್ಟಿಯಿಂದ ಗ್ರಂಥಪ್ರಕಟಣ ಸಲಹಾಸಮಿತಿಯನ್ನು ರಚಿಸಿದೆ. ಈ ಸಮಿತಿಯ ಸಲಹೆ ಸಹಕಾರಗಳಿಂದ ಇಂದಿನ ಪುಸ್ತಕಗಳು ಹೊರಬರುತ್ತಿವೆ. ಈ ಪುಸ್ತಕಗಳಲ್ಲಿ ಅಚ್ಚಾಗದ ಪ್ರಾಚೀನ ಗ್ರಂಥಗಳು, ಅವಶ್ಯಕವಾದ ಪ್ರಾಚೀನ ಗ್ರಂಥಗಳ ಪುನರ್ಮುದ್ರಣ, ಕವಿಕಾವ್ಯ ಪ್ರಶಸ್ತಿ ಗ್ರಂಥಗಳು, ಭಾಷಾಂತರ ಕೃತಿಗಳು, ಜನಸಾಮಾನ್ಯರಿಗಾಗಿ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ, ಜನಪದಸಾಹಿತ್ಯ, ನಿಘಂಟುಗಳು ಇರುತ್ತವೆ. ಈ ಸಮಿತಿಯ ಪ್ರಧಾನ ಸಂಪಾದಕತ್ವದ ಸ್ಥಾನವನ್ನು ಡಾ. ವಿ. ಕೃ. ಗೋಕಾಕರು ವಹಿಸಿಕೊಂಡಿದ್ದಾರೆ. ಆ ಸಮಿತಿಯಲ್ಲಿ ಈ ಕೆಳಕಂಡ ವಿದ್ವಾಂಸರು ಸಾಹಿತಿಗಳು ಸದಸ್ಯರಾಗಿದ್ದಾರೆ.

ಡಾ. ಡಿ. ಜವರೇಗೌಡ
ಡಾ. ಬಿ. ಎಸ್. ಕುಲಕರ್ಣಿ
ಶ್ರೀ ಎ. ಸೀ. ಹಿತ್ತಲಮನಿ
ಶ್ರೀ ಜಿ. ನಾರಾಯಣ
ರಾಜ್ಯ ಪಠ್ಯ ಪುಸ್ತಕ ಸಮಿತಿಯ ನಿರ್ದೇಶಕರು

ಡಾ. ಜಿ. ಎಸ್. ಶಿವರುದ್ರಪ್ಪ
ಶ್ರೀ ಜಿ. ಎಚ್. ನಾಯಕ
ಶ್ರೀ ವೈ. ಎನ್. ಕೃಷ್ಣಮೂರ್ತಿ
ರಾಜ್ಯ ಗ್ರಂಥಾಲಯಾಧಿಕಾರಿಗಳು

ಅಲ್ಲದೆ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಡಿ. ಲಿಂಗಯ್ಯ, ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರು ಅಧಿಕಾರ ನಿಮಿತ್ತ ಸದಸ್ಯರಾಗಿರುತ್ತಾರೆ.

ಕನ್ನಡ ಜನತೆಗೆ ಒಳ್ಳೆಯ ಸಾಹಿತ್ಯವನ್ನು ಸುಲಭ ಬೆಲೆಗೆ ಒದಗಿಸಬೇಕು, ಕಾಲ ಕಾಲಕ್ಕೆ ಜನತೆಯ ಆಶೋತ್ತರಗಳನ್ನು ಪೂರೈಸುವಂತೆ ವೈಚಾರಿಕ, ವೈಜ್ಞಾನಿಕ ಸಾಹಿತ್ಯ ವನ್ನು ನೀಡಬೇಕು, ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಶ್ರೇಷ್ಠ ಕೊಡುಗೆಗಳನ್ನು ಪರಿಷತ್ತು ಜನತೆಗೆ ನೀಡಬೇಕು ಎಂಬ ಪರಿಷತ್ತಿನ ಧ್ಯೇಯ ಧೋರಣೆಗಳನ್ನು ಗಮನಿಸಿ ಕರ್ನಾಟಕ ರಾಜ್ಯ ಸರ್ಕಾರದವರು ಉದಾರ ಸಹಾಯ ನೀಡಿದ್ದಾರೆ ಮತ್ತು ನೀಡುತ್ತಿದ್ದಾರೆ.

ಪರಿಷತ್ತು ಈಗ ತನ್ನ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಗಳನ್ನು ಆರಂಭಿಸಿದೆ. ಆ ಅವಧಿಯಲ್ಲಿ ಮೇಲೆ ತಿಳಿಸಿದಂತೆ ಅನೇಕ ಹೊಸ ಪುಸ್ತಕಗಳನ್ನು ಹೊಸದಾಗಿ ಹಾಕಿಕೊಂಡ ಧ್ಯೇಯ ಧೋರಣೆಗಳಿಗನುಸಾರವಾಗಿ ಹೊರತರಲು ಯತ್ನಿಸುತ್ತದೆ ಎಂಬ ನಂಬಿಕೆ ನನಗಿದೆ. ಈ ಕಾರ್ಯದಲ್ಲಿ ಗ್ರಂಥಪ್ರಕಟಣ ಸಲಹಾಸಮಿತಿ ಸದಸ್ಯರು, ಲೇಖಕರು, ಸಾಹಿತ್ಯ ವಿದ್ವಾಂಸರು ಮತ್ತು ಸರ್ಕಾರ ಸಹಕಾರ ನೀಡುತ್ತಿದ್ದಾರೆ. ಅವರಿಗೆಲ್ಲ ಪರಿಷತ್ತು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪರಿಷತ್ತಿನ ಪ್ರಕಟಣೆಗಳು ಕನ್ನಡಿಗರಿಗೆ ಲಾಭದಾಯಕವಾಗುವುದರಲ್ಲಿ ಸಂದೇಹ ವಿಲ್ಲ. ಈ ಲಾಭವನ್ನು ಅವರು ಪಡೆದು ನಾಡನುಡಿಯ ಸೇವೆಯಲ್ಲಿ ಪಾಲುದಾರರಾಗ ಬೇಕೆಂದು ಪ್ರಾರ್ಥಿಸುತ್ತೇನೆ.

ಹಂಪ. ನಾಗರಾಜಯ್ಯ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಬಿನ್ನಹ

ಹಳೆಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಈಚೆಗೆ ಧಾರವಾಡದಲ್ಲಿ ಒಂದು ಅನುವಾದ ಮಂಡಲಿಯನ್ನು ರಚಿಸಿಕೊಳ್ಳಲಾಗಿದೆ. ಬೆಂಗಳೂರಿನ ಅನುವಾದ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿದ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಟ್ಟಿದ್ದಾರೆ.

ತಾ. 2-12-73 ರಂದು ಬೆಂಗಳೂರು ಅನುವಾದ ಮಂಡಲಿಯು ಸಾಹಿತ್ಯ ಪರಿಷತ್ತಿನಲ್ಲಿ ಸಭೆ ಸೇರಿ, ಅನುವಾದದ ವಿಧಾನವನ್ನು ಚರ್ಚಿಸಿತು. ಕೆಲವು ನಿರ್ಣಯಗಳು ಸರ್ವಾನುಮತದಿಂದ ಅಂಗೀಕೃತವಾದವು. ಮಾರ್ಗದರ್ಶಕವಾದ ಈ ನಿರ್ಣಯಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಿದೆ.

1. ಹಲವಾರು ವಿಶೇಷಣಗಳಿರುವ ದೀರ್ಘಕಾವ್ಯವನ್ನು ಒಡೆದು ಚಿಕ್ಕವಾಕ್ಯಗಳನ್ನಾಗಿ ಪರಿವರ್ತಿಸಬೇಕು. ಮೊದಲು ವಿಶೇಷವಾಕ್ಯವನ್ನು ಬರೆದು ಅನಂತರ ವಿಶೇಷಣ ವಾಕ್ಯಗಳನ್ನು ಬರೆಯುವುದು ಉತ್ತಮ.

2. ಮೂಲ ಗ್ರಂಥದಲ್ಲಿದ್ದು ಯಾವ ವಿಷಯವನ್ನೂ ಹೊಸದಾಗಿ ಸೇರಿಸಬಾರದು. ಅಭಿಪ್ರಾಯದ ಸ್ಪಷ್ಟತೆಯು ಆವಶ್ಯಕವೆನಿಸಿದರೆ ಕಂಸದಲ್ಲಿ ನಿರೂಪಿಸಬೇಕು. ಹೆಚ್ಚಿನ ವಿಷಯವಿದ್ದರೆ ಅಡಿಟಿಪ್ಪಣಿಯಲ್ಲಿ ಬರೆಯಬೇಕು.

3. ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು.

4. ವಿರೋಧಾಭಾಸ, ಪರಿಸಂಖ್ಯಾ ಮುಂತಾದ ಅಲಂಕಾರಗಳಿರುವ ಸಂದರ್ಭದಲ್ಲಿ ಅರ್ಥದ್ವಯವನ್ನು ಅನುವಾದದಲ್ಲಿಯೇ ಬರೆಯಬೇಕು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನುವಾದಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದವು. ಹೀಗೆ ಹಂತ

ಷಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅದನ್ನು ಪರಿಶೀಲಿಸಿ ಯಥಾಮತಿ ಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು.

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರು) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪ್ರತಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯಸಾಧ್ಯವಲ್ಲ, ಅಪೇಕ್ಷಣೀಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆ ನೋಡುವುದು ಕಠಿಣವೇ. ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸ ವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನ ಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು ಯಶಸ್ವಿ ಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನೂ ಅಭಿನಂದಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನ ದಿಂದ ಪ್ರೋತ್ಸಾಹಿಸಿದ್ದಾರೆ. ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆ ಗಳನ್ನು ಅರ್ಪಿಸುತ್ತೇನೆ. ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಎಸ್. ರಂಗನಾಥಶರ್ಮಾ
ಅಧ್ಯಕ್ಷ
ಬೆಂಗಳೂರು ಅನುವಾದಕ ಮಂಡಲಿ
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
ದಿನಾಂಕ 20–10–1978

# ವಿಷಯ ಸೂಚಿ

# ಉಪೋದ್ಘಾತ

ಶಬರಶಂಕರ ವಿಳಾಸವು ಷಡಕ್ಷರ ಮಹಾಕವಿಯ ಒಂದು ಸುಂದರ ಚಂಪೂ ಕಾವ್ಯ. ಈ ಖಂಡಕಾವ್ಯದಲ್ಲಿ ಐದು ಆಶ್ವಾಸಗಳೂ ಒಟ್ಟು ನಾನ್ನೂರ ಅರವತ್ತೇಳು ಪದ್ಯಗಳೂ, ವಚನಗಳೂ ಇವೆ. ಕನ್ನಡ ಸಾಹಿತ್ಯದಲ್ಲಿ ಷಡಕ್ಷರನೆಂಬ ಹೆಸರುಳ್ಳ ನಾಲ್ಕು ಮಂದಿ ಕವಿಗಳು ಆಗಿಹೋಗಿರುವರು. ಅವರಲ್ಲಿ,

1. ಮೈಸೂರು ಜಿಲ್ಲಾ ಎರಗಂಬಳ್ಳಿ ಮಠಾಧ್ಯಕ್ಷರಾಗಿ ಶಂಭುಲಿಂಗನ ಬೆಟ್ಟದಲ್ಲಿ ಬಹಳ ಕಾಲ ತಪಸ್ವಿಯಾಗಿದ್ದ ಮುಪ್ಪಿನ ಷಡಕ್ಷರಸ್ವಾಮಿಗಳು. ಇವರ ಕಾಲ ಸುಮಾರು ಕ್ರಿ.ಶ. ೧೬೦೦. ಇವರ ಕೃತಿ ಸುಬೋಧಸಾರವೆಂಬ ವೈರಾಗ್ಯಪ್ರದವಾದ ಪದಗಳು.

2. ಕೆಳದಿಯ ರಾಜನಾದ ಬೂದಿ ಬಸವಪ್ಪ ನಾಯಕನ ಆಸ್ಥಾನದಲ್ಲಿ ಅಮಾತ್ಯ ನಾಗಿದ್ದು 'ವೀರಶೈವಧರ್ಮಶಿರೋಮಣಿ' ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿ ಪ್ರಖ್ಯಾತನಾಗಿರುವ ಷಡಕ್ಷರಮಂತ್ರಿ. ಈತನ ಕಾಲ ಸುಮಾರು ಕ್ರಿ.ಶ. ೧೭೪೦,

3. ಪ್ರಕೃತ ಶಬರಶಂಕರ ವಿಳಾಸವೇ ಮೊದಲಾದ ಕಾವ್ಯಗಳ ಕರ್ತೃ ಕನ್ನಡ ಸಾಹಿತ್ಯದಲ್ಲೇ ಪ್ರಸಿದ್ಧನಾದ ಯಳಂದೂರು ಷಡಕ್ಷರ ಮಹಾಕವಿ. ಈತನ ಕಾಲ ಕ್ರಿ.ಶ. ೧೬೫೫.

4. ಶಿವಪೂಜಾಷ್ಟಕ ಮತ್ತು ಶಿವಯೋಗಾಷ್ಟಕಗಳನ್ನು ಬರೆದ ವಿರಕ್ತ ಷಡಕ್ಷರಿ. ಈತನ ಕಾಲ ಕ್ರಿ.ಶ. ೧೭೫೦.

## ಕವಿಯ ಸ್ಥಳ, ಕಾಲ ಮತ್ತು ಕಾವ್ಯಗಳು

ಷಡಕ್ಷರದೇವನು ಕರ್ನಾಟಕ ರಾಜ್ಯದ ಮಳವಳ್ಳಿ ತಾಲೂಕಿನ ದನುಗೂರಿನಲ್ಲಿ ಜನಿಸಿದವನು. ಮತ್ತು ಅಲ್ಲಿನ ವೀರಸಿಂಹಾಸನ ಮಠದ ಅಧ್ಯಕ್ಷನಾಗಿದ್ದವನು. ದನುಗೂರಿನಲ್ಲಿಯೇ ತನ್ನ ಗುರುವಾಗಿದ್ದ ಚಿಕವೀರದೇಶಿಕರಲ್ಲಿ ವಿದ್ಯಾಭ್ಯಾಸಮಾಡಿ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿ ಮುಂದೆ ಅರಮನೆಯ ಆಹ್ವಾನವನ್ನು ಮನ್ನಿಸಿ ಯಳಂದೂರಿಗೆ ಬಂದು ಆ ಮಠದ ಸ್ವಾಮಿಯಾಗಿಯೇ ನೆಲಸಿದನು.

ಷಡಕ್ಷರಿಯ ಜನ್ಮದಿನವಾಗಲೀ ಶಿವೈಕ್ಯನಾದ ಕಾಲವಾಗಲೀ ತಿಳಿದಿಲ್ಲ. ಇವನು ತನ್ನ ಮೊದಲನೆಯ ಮಹಾಕಾವ್ಯವಾದ ರಾಜಶೇಖರ ವಿಳಾಸವೆಂಬ ಚಂಪೂಕಾವ್ಯವನ್ನು ಶಾಲಿವಾಹನ ಶಕ ೧೫೭೬ ನೆಯ ಜಯ ಸಂವತ್ಸರದ ಮಾಘ ಶುದ್ಧ ತೃತೀಯಾ ಬುಧವಾರ ಎಂದರೆ ಕಿ.ಶ. ೧೬೫೫ ರಲ್ಲಿಯೂ, ವೃಷಭೇಂದ್ರವಿಜಯ ಅಥವಾ ಬಸವರಾಜ

ವಿಜಯ ಮಹಾಪುರಾಣವನ್ನು ಶಾಲಿವಾಹನ ಶಕ ೧೫೫೮ ನೆಯ ನಳ ಸಂವತ್ಸರದ ಮಾಘ ಶುದ್ಧ ಪಂಚಮಿಾ ಗುರುವಾರ ಎಂದರೆ ಕ್ರಿ.ಶ. ೧೬೭೭ರಲ್ಲಿಯೂ ಮುಗಿಸಿದುದಾಗಿ ಕವಿಯ ಮಾತಿನಿಂದಲೇ ತಿಳಿಯುತ್ತದೆ. ಮುಂದೆ ಕವಿಯು ತನ್ನ ಅರವತ್ತು ವರ್ಷ ಕಳೆದ ಬಳಿಕ ಕವಿಕರ್ಣರಸಾಯನವೆಂಬ ಸಂಸ್ಕೃತಕಾವ್ಯವನ್ನೂ ಆ ಬಳಿಕ ಶಬರಶಂಕರ ವಿಳಾಸವನ್ನೂ ರಚಿಸಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುವರು. ಷಡಕ್ಷರ ಕವಿಯು ಸುಮಾರು ಎಪ್ಪತ್ತೈದು ವಯಸ್ಸಿನವರೆಗೂ ಜೀವಿಸಿದ್ದು ಕ್ರಿ.ಶ. ೧೭೦೦ರಲ್ಲಿ ಶಿವೈಕ್ಯನಾಗಿರಬಹು ದೆಂದು ಶ್ರೀಗೋವಿಂದ ಪೈಗಳವರ ಅಭಿಪ್ರಾಯ.

ಷಡಕ್ಷರ ಕವಿಯು ಅನುಕ್ರಮವಾಗಿ ರಾಜಶೇಖರವಿಳಾಸ, ವೃಷಭೇಂದ್ರ ವಿಜಯ ಮತ್ತು ಶಬರಶಂಕರ ವಿಳಾಸವೆಂಬ ಕನ್ನಡ ಚಂಪೂ ಪ್ರೌಢಗ್ರಂಥಗಳನ್ನೂ, ಕವಿಕರ್ಣರಸಾ ಯನವೆಂಬ ಸಂಸ್ಕೃತ ಕಾವ್ಯವೇ ಅಲ್ಲದೆ ಅನೇಕ ಸಣ್ಣಪುಟ್ಟ ಕಾವ್ಯಗಳನ್ನೂ ಬರೆದಿರುವನು. ಅವು ಹೀಗೆ ಇವೆ :

1. ಶಿವಸ್ತೋತ್ರಮಂಜರಿ. 2. ಶಿವಸ್ತವಮಂಜರಿ. 3. ನಮಶ್ಶಿವಾಯಾಷ್ಟಕ. 4. ಶ್ರೀಮದನಾದಿ ಸಿದ್ಧಲಿಂಗಸ್ತವ. 5. ವೀರಭದ್ರೋದಾಹರಣ ಗದ್ಯ. 6. ವೀರಭದ್ರ ದಂಡಕ. 7. ಇಂದುಧರ ಸ್ತೋತ್ರ. 8. ಶಿವಮಾನಸ ಸ್ತೋತ್ರ. 9. ಇಷ್ಟಲಿಂಗಸ್ತವನ. 10. ಬಸವಾಷ್ಟಕ. 11. ನೀಲಾಂಬಿಕಾ ಸ್ತೋತ್ರ. 12. ತತ್ವತ್ರಯಮಂಜರಿ. 13. ಶಿವಾಧಿಕ್ಯ ರತ್ನಾವಳಿ. 14. ಮಂಗಲಾಷ್ಟಕ. 15. ಲಿಂಗಾಷ್ಟಕ. 16. ಮಾತಿನ ಮಾಲಿಕೆ. 17. ಭಕ್ತ್ಯಾಧಿಕ್ಯ ರತ್ನಾವಳಿ ಇತ್ಯಾದಿ. ಈ ಚಿಕ್ಕಪುಟ್ಟ ಕೃತಿಗಳೆಲ್ಲ ಸಂಸ್ಕೃತ ದಲ್ಲಿ ರಚಿಸಿದುವುಗಳೆಂದು ತೋರುತ್ತಿದೆ.

ಷಡಕ್ಷರ ಕವಿಯ ಅಗ್ಗಳಿಕೆ : ರಾಜಶೇಖರ ವಿಳಾಸ ಕಾವ್ಯಕ್ಕೆ ಮತ್ತು ಲೀಲಾವತಿ ಚಂಪೂ ಪ್ರಬಂಧಕ್ಕೆ ಸಂಬಂಧಪಟ್ಟಂತೆಯೂ, ಮತ್ತು ಹಾಗೆಯೇ ರುದ್ರ ಭಟ್ಟನ ಜಗನ್ನಾಥ ವಿಜಯ ಮತ್ತು ಲಕ್ಷ್ಮೀಶ ಕವಿಯ ಜೈಮಿನಿ ಭಾರತಕ್ಕೆ ಸಂಬಂಧ ಪಟ್ಟಂತೆಯೂ ಕೆಲವು ದಂತಕತೆಗಳು ಪ್ರಚಾರದಲ್ಲಿವೆ. ಇವುಗಳಲ್ಲಿ ಐತಿಹಾಸಿಕ ಸತ್ಯಾಂಶ ಗಳಿಲ್ಲವೆಂದರೂ, ಇವುಗಳ ಉದ್ದೇಶವು ರಾಜಶೇಖರ ವಿಳಾಸದ ಉತ್ಕರ್ಷೆಯನ್ನು ಸೂಚಿಸುವುದೇ ಆಗಿದೆ. ರಾಜಶೇಖರ ವಿಳಾಸ ರಚನೆಯಲ್ಲಿಯೇ ಷಡಕ್ಷರಕವಿಗೆ ಸ್ಪರ್ಧಾಮನೋಭಾವವಿತ್ತೆಂಬುದು ಈ ಪದ್ಯದಿಂದ ಸೂಚಿತವಾಗುತ್ತದೆ—

ಇಂತೀ ಕಾವ್ಯಮನೊಲ್ದು ಕೇಳ್ದ ವಿಬುಧರ್ ಮೈವೆರ್ಚಿ ಕೊಂಡಾಡೆ ಪೇ
ಳ್ದಂ ತಾನೊರ್ವನೆ ಸಾಂಬ ಶಂಭುಕೃಪೆಯಿಂದೇಕಾಬ್ದದೊಳ್ ಪೂರ್ಣಮ
ಪ್ಪಂತೋರಂತೆ ಷಡಕ್ಷರಾರ್ಯನನಘಂ ಸಾಹಿತ್ಯ ಶಾಸ್ತ್ರಜ್ಞನ
ಶ್ರಾಂತ ಶ್ರೀ ಶಿವಲಿಂಗಸಂಗತ ಮಹಾಮಾಹೇಶ್ವರಂ ಭಕ್ತಿಯಿಂ

ರಾ.ಶೇ.ವಿ. ಆ ೧೪–ಪದ್ಯ ೧೭೨

ಸ್ಪರ್ಧಾಮನೋಭಾವ ಮಾತ್ರವಲ್ಲ, ಉತ್ಕೃಷ್ಟ ಕಾವ್ಯರಚನೆಯನ್ನು "ಆಲೋಕಿತ ಕಾವ್ಯ ಬೃಂದದೊಳಗಿಲ್ಲದ ಮಂಜುಳ ಯುಕ್ತಿಪುಂಜದಿಂ" ವಸ್ತುಕ ರೀತಿಯಲ್ಲಿ ಹೇಳಬಲ್ಲ ಸಹಜ ಕವಿತಾಶಕ್ತಿಸಂಪನ್ನನೆನಿಸಿದ್ದನು. "ನೆರೆದೇಕಾದಶ ವರ್ಷದ ಹರಯದೊಳಭವ ಪ್ರಸಾದಬಲದಿಂ ಕವಿತಾ । ತರುಣಿ ಷಡಕ್ಷರದೇವನ । ನೆರವಿಲ್ಲದೆ ವರಯಿಸಿರ್ದಳರಿದೆನೆ ವಿಬುಧರ್ ॥ ಪ್ರಾಪ್ತನಾದ ನಿಸರ್ಗ ಕವಿತಾ ಸುಭಗತೆ. ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮ ಪುಣ್ಯದೇಳ್ಗೆಯಿಂ ಕೈಸಾರ್ದ ಸಕ್ಕವಿತ್ವದಿವಿಷನ್ಮಣಿ" ಶ.ಶಂ.ವಿ.೫-೬೧.

"ಇದು ಪೊಸ ರೀತಿ ನೋಡಿದು ನವೀನವಲಂಕೃತಿ ನವ್ಯಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ ಶ.ಶಂ.ವಿ. ಆ.೧–೨೩

ಎಂದು ಮೆಚ್ಚಿ ಹೊಗಳುವ ಸಹೃದಯ ವಿದ್ವಾಂಸರು, "ಕಲ್ಯಾಣಿಯ ಕಾಂತನಾಲಿಸುಗೆ ಸದ್ರಸಮೊಪ್ಪುವ ಮತ್ಪ್ರಬಂಧಮಂ" ಎಂಬ ಭಗವದರ್ಪಣ ಮನೋಭಾವ, "ಪ್ರಬಂಧಮಿದು ಸರ್ವೋರ್ವೀನುತಂ ಸಂತತಂ" ಎಂಬ ದೃಢ ವಿಶ್ವಾಸಗಳಿಂದ ನಿರ್ಭರನಾಗಿ ಶಬರ ಶಂಕರ ವಿಳಾಸವನ್ನು ಷಡಕ್ಷರಿಯು ರಚಿಸಿರುವನು.

ಪಂಪ, ರನ್ನ, ಜನ್ನ ಮುಂತಾದ ಮಹಾಕವಿಗಳಿಂದ ಪ್ರವರ್ತಿತವಾದ ಚಂಪೂ ಕಾವ್ಯಗಳ ವೈಭವೋಪೇತನಾದ ಕಾಲವು ಮುಗಿದು, ವೀರಶೈವ ವಚನಕಾರರೂ, ಷಟ್ಪದಿಕಾರರೂ ತಮ್ಮ ಕೃತಿಗಳನ್ನು ಜನಪ್ರಿಯಗೊಳಿಸಿದನಂತರ, ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಇನ್ನು ಚಂಪೂ ಕಾವ್ಯಗಳ ಯುಗವು ಮುಗಿದಂತೆಯೇ ಎಂಬ ಭಾವನೆಯು ಬರತೊಡಗಿತು. ಅಂತಹ ಕಾಲದಲ್ಲಿ ಕ್ರಿ.ಶ. ಹದಿನೇಳನೆಯ ಶತಮಾನದಲ್ಲಿ, ಚಂಪೂಕಾವ್ಯಗಳ ಕಾಲವು ಮುಗಿದುಹೋಗಿಲ್ಲ, ಅದರ ಉಚ್ಛ್ರಾಯ ಕಾಲವು, ನೋಡಿ ಪುನಃ ಪ್ರಾರಂಭವಾಗಿದೆ ಎನ್ನುವಂತೆ ಷಡಕ್ಷರದೇವನು ತನ್ನ ಅನರ್ಘ್ಯ ಚಂಪೂಕಾವ್ಯಗಳಾದ ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ ಮತ್ತು ಶಬರಶಂಕರ ವಿಳಾಸಗಳನ್ನು ರಚಿಸಿ, ಕನ್ನಡ ಸಾಹಿತ್ಯ ಲೋಕದಲ್ಲಿ ಪುನಃ ಚಂಪೂಕಾವ್ಯಗಳ ವೈಹಾಳಿಯನ್ನೇ ನಡೆಸಿಬಿಟ್ಟನು. "ರಾಜಶೇಖರ ವಿಳಾಸ"ವು ಛಂದೋವೈವಿಧ್ಯದಿಂದಲೂ, ನಿರರ್ಗಳ ಶೈಲಿಯಿಂದಲೂ, ರಮಣೀಯವಾದ ವರ್ಣನೆಗಳಿಂದಲೂ, ಅಲಂಕಾರಗಳಿಂದಲೂ ಕೂಡಿದ್ದು, ಅಂದಿನ ಮತ್ತು ಮುಂದಿನ ಕಾಲದ ಕವಿಗಳನ್ನೂ, ವಿದ್ವಾಂಸರನ್ನೂ ಮತ್ತು ಶ್ರೋತೃಗಳನ್ನೂ ಆಕರ್ಷಿಸಿಬಿಟ್ಟಿತು. ವೈದುಷ್ಯರ ನಿಕಷವಾಗಿ "ರಾಜಶೇಖರ ವಿಳಾಸವು" ಜನಾನುರಾಗವನ್ನು ಗಳಿಸಿದ ಕ್ರಿ.ಶ. ಹದಿನೇಳನೆಯ ಶತಮಾನ ಮತ್ತು ಅಲ್ಲಿಂದೀಚೆಗೆ ಚಂಪೂಕಾವ್ಯದ ಪುನರುತ್ಥಾನ ಮಾಡಿದ ಕೀರ್ತಿಯು ಷಡಕ್ಷರದೇವನಿಗೇ ಸಲ್ಲಬೇಕು.

ಪ್ರಕೃತ ಗ್ರಂಥವಾದ ಶಬರಶಂಕರ ವಿಳಾಸವು ಷಡಕ್ಷರದೇವನ ಮೂರನೆಯ ಕನ್ನಡ ಗ್ರಂಥ. ಕಾವ್ಯವಸ್ತು ಪ್ರಸಿದ್ಧವಾದ ಮಹಾಭಾರತದ ಕಥೆ-ಶಿವನು ಅರ್ಜುನನಿಗೆ ಪಾಶು

ಪತಾಸ್ತ್ರವನ್ನು ಅನುಗ್ರಹಿಸಿದ್ದು. ಷಡಕ್ಷರಕವಿಗಾದರೋ ಈ ಕಥೆ ಶಿವನ ಪಂಚವಿಂಶತಿ ಲೀಲೆಗಳಲ್ಲೊಂದು. ಆದರಿಂದಲೇ ಕಥಾವಸ್ತುವಿಗೆ ಮನ್ನಣೆ. ಶಿವನ ಮಹಿಮೆಯನ್ನೂ, ಕಾರುಣ್ಯವನ್ನೂ ಹಾಗೂ ಭಕ್ತಾನುಗ್ರಹ ತತ್ಪರತೆಯನ್ನೂ ನಿರೂಪಿಸುವುದೇ ಗುರಿ.

ಕಥೆಯು ಪ್ರಥಮಾಶ್ವಾಸದಲ್ಲಿ— ಶಿವನ ಆಸ್ಥಾನವರ್ಣನೆ, ಕೈಲಾಸದಲ್ಲಿ ಶಿವಗಣಗಳೂ, ಮುನಿಗಳೂ ಮತ್ತು ದೇವಾನುದೇವತೆಗಳೂ ಪರಶಿವನನ್ನು ಓಲೈಸುತ್ತಿರುವುದು.

ದ್ವಿತೀಯಾಶ್ವಾಸದಲ್ಲಿ—ಇಂದ್ರಕೀಲ ಪರ್ವತದ ತಪೋವನಗಳಿಂದ ಬಂದ ಋಷಿ ಸಮೂಹವು ಶಿವನನ್ನು ಪ್ರಾರ್ಥಿಸಿ, ರಕ್ಷಣೆಯನ್ನು ಕೋರುವುದು. ತಪಸ್ಸಿಗೆ ನಿಂತ ಅರ್ಜುನನ ವೃತ್ತಾಂತ ; ಅವನ ತಪಸ್ಸಿನ ಉಗ್ರತೆ. ಮುನಿಗಳಿಗೆ ಶಿವನು ಅಭಯ ಪ್ರದಾನಮಾಡುವುದು.

ತೃತಿಯಾಶ್ವಾಸದಲ್ಲಿ-ಶಿವನೂ, ಅವನ ಪರಿವಾರಗಳೂ, ದೇವತೆಗಳೂ ಕಿರಾತ ವೇಷವನ್ನು ಧರಿಸಿ ಇಂದ್ರಕೀಲವನಕ್ಕೆ ಬರುವುದು, ಬೇಟೆಯ ಸಡಗರ.

ಚತುರ್ಥಾಶ್ವಾಸದಲ್ಲಿ—ಬೇಟೆಯ ಕಳಕಳದಿಂದ ಕೆರಳಿದ ಮೂಕದಾನವನು ದೇವ ಪಡೆಯ ಮೇಲೆ ನುಗ್ಗಿಬರುವುದು, ರಾಕ್ಷಸನ ಹಾವಳಿ, ಬೇಡಪಡೆಯ ನಾಶ, ಶಿವನು ಮೂಕದಾನವನನ್ನು ಬಾಣದಿಂದ ಘಾತಿಸುವುದು. ಹೊತ್ತ ಗರಿಸಹಿತ ಮೂಕದಾನವನೆಂಬ ಹಂದಿಯು ತಪೋವನವನ್ನು ಪ್ರವೇಶಿಸಿ ಹಾವಳಿ ಮಾಡುವುದು, ಅರ್ಜುನನ ಬಾಣದಿಂದ ಹಂದಿಯು ಉರುಳುವುದು, ಶಿವನ ಪ್ರವೇಶ. ಬಿದ್ದ ಹಂದಿಯು ತನಗೆ ಸೇರಿದುದೆಂದು ಶಿವನೂ, ತನ್ನ ಬಾಣಹತಿಗೆ ಬಿದ್ದುದೆಂದು ಅರ್ಜುನನೂ ಸೆಡೆದು ನಿಲ್ಲುವುದು. ಪರಸ್ಪರ ಮೂದಲಿಕೆಗಳು, ಶಸ್ತ್ರಾಸ್ತ್ರಗಳಿಂದ ಕದನ, ಅರ್ಜುನನ ಅಕ್ಷಯತೂಣೀರ ಬರಿದಾದುದು, ಬಿಲ್ಲಿನಿಂದ ಅಪ್ಪಳಿಸಿದರೆ, ಶಿವನು ಬಿಲ್ಲನ್ನು ಕಸಿದುಕೊಂಡುದು. ಖಡ್ಗದಿಂದ ಮೇಲೆರಗಿದರೆ ಅದನ್ನು ಸೆಳೆದುಕೊಂಡುದು.ಕಿರಾತಾರ್ಜುನರ ಮಲ್ಲಕಾಳಗ, ಅರ್ಜುನನನ್ನು ಕೆಡವಿ ಶಿವನು ಗಂಟಲನ್ನು ಮೆಟ್ಟಲು ಅರ್ಜುನನ ಮೂಗು, ಬಾಯಿಂದ ನೆತ್ತರೊಗುವುದು. ಕರುಣಾಳು ಶಿವನ ಮನದುಮ್ಮಳ, ಪಾರ್ಥನ ಗರ್ವಭಂಗ, ಭಂಗವ್ಯಾಪ್ತಿಯ ಪರಿಭವವನ್ನು ನೀಗಲು ನರನು ಮಳಲಲಿಂಗವನ್ನು ಪೂಜಿಸುವುದು. ಲಿಂಗದ ಮೇಲಿನ ಹೂಗಳು ಕಿರಾತನ ಮುಡಿಯಲ್ಲಿ ಕಾಣುವುದು. ಭ್ರಾಂತನಾದ ಅರ್ಜುನನು ಪುನಃ ಲಿಂಗವನ್ನು ಪೂಜಿಸುವುದು. ತಾನು ಪೂಜಿಸಿದ ಹೂಗಳು ಬೇಡನ ಮುಡಿಯಲ್ಲಿರುವುದನ್ನು ಕಂಡ ಅರ್ಜುನನು ಕಿರಾತನು ತನ್ನನ್ನು ಅನುಗ್ರಹಿಸಲು ಬಂದ ಪರಶಿವನೆಂದು ತಿಳಿದು, ತನ್ನ ಮರುಳ್ತನಕ್ಕೆ ನೊಂದು, ಪಶ್ಚಾತ್ತಾಪದಿಂದ ಶಿವನ ಕ್ಷಮಾಪಣೆಯನ್ನು ಕೋರಿ, ನಮಸ್ಕರಿಸಿ, ಸ್ತುತಿಸುವುದು. ಶಿವನು ನಿಜರೂಪುದೋರಿ ಅರ್ಜುನನನ್ನು ಸಮಾಧಾನಪಡಿಸುವುದು.

ಪಂಚಮಾಶ್ವಾದಲ್ಲಿ—ಅರ್ಜುನನು ಶಿವನನ್ನು ನಾನಾವಿಧವಾಗಿ ಸ್ತುತಿಸುವುದು. ಶಿವನು ಪಾಶುಪತಾಸ್ತ್ರವೇ ಮುಂತಾದ ದಿವ್ಯಾಸ್ತ್ರಗಳನ್ನು ಅರ್ಜುನನಿಗೆ ಅನುಗ್ರಹಿಸುವುದು.

ಪಾರ್ವತಿಯೂ ಸಹ ಅಂಜನಾಸ್ತ್ರವನ್ನು ನೀಡುವುದು. ಶಿವನು ಪಾರ್ವತಿಯೊಡನೆಯೂ, ಶಿವಗಣ, ದೇವಗಣಗಳೊಡನೆಯೂ ಕೈಲಾಸಕ್ಕೆ ಹಿಂತಿರುಗುವುದು.

**ಕಥೆಯ ಮೂಲ:** 'ಶಬರಶಂಕರ ವಿಳಾಸ'ದ ಕಥೆ ಸಂಸ್ಕೃತ ಸಾಹಿತ್ಯದಲ್ಲಿ ಮೊದಲು ಕಾಣುವುದು ವ್ಯಾಸಮಹಾಭಾರತದಲ್ಲಿಯೇ. ಆ ಕಥೆಯನ್ನೇ ಆಧರಿಸಿ, ಕೆಲವು ವ್ಯತ್ಯಾಸಗಳೊಡನೆ ಶಿವಪುರಾಣ, ಭಾರವಿಕವಿಯ ಕಿರಾತಾರ್ಜುನೀಯ, ಪಂಪನ ವಿಕ್ರಮಾರ್ಜುನ ವಿಜಯ, ಕುಮಾರವ್ಯಾಸನ ಭಾರತ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣಗಳಲ್ಲಿಯೂ ಬಳಸಿರುವರು. ಇವುಗಳೆಲ್ಲವೂ ಷಡಕ್ಷರದೇವನಿಗೆ ಹಿಂದಿನ ರಚನೆಗಳೇ. ಶಬರಶಂಕರ ವಿಳಾಸದಲ್ಲಿನ ಕಥೆಗೂ ಈ ಬೇರೆ ಬೇರೆ ಆಖ್ಯಾನಗಳ ನಿರೂಪಣೆಗೂ ಇರುವ ಏಕತೆ ಮತ್ತು ವ್ಯತ್ಯಾಸಗಳನ್ನು ಗಮನಿಸುವ ಮೊದಲು, ಆಯಾ ಕಾವ್ಯಭಾಗಗಳಲ್ಲಿನ ಕಥೆಯನ್ನು ಸ್ಥೂಲವಾಗಿ ಈ ರೀತಿ ಪರಿಚಯ ಮಾಡಿಕೊಳ್ಳಬಹುದು.

೧. ಮಹಾಭಾರತದಲ್ಲಿ: ಕೌರವನ ಕಪಟದ್ಯೂತದಲ್ಲಿ ಸೋತು ವನವಾಸಕ್ಕೆ ತೆರಳಿದ ಪಾಂಡವರು ದ್ವೈತವನದಲ್ಲಿ ತಮಗೊದಗಿದ ದುರವಸ್ಥೆಯನ್ನು ಕುರಿತು ಮಾತನಾಡುತ್ತಿರುವರು. ನೊಂದ ದ್ರೌಪದಿ, ಭೀಮಸೇನರು ನಿರ್ವಿಕಾರನಾಗಿ ಕುಳಿತ ಧರ್ಮರಾಯನನ್ನು ಮತ್ತೆ ರಾಜ್ಯವನ್ನು ಪಡೆದುಕೊಳ್ಳುವ ಕ್ಷಾತ್ರವೃತ್ತಿಯನ್ನೇಕೆ ಕೈಕೊಳ್ಳಬಾರದೆಂದು ವಾದಿಸುವರು. ಅವರ ಮನೋಗತವನ್ನು ಮೆಚ್ಚಿದರೂ, ಧರ್ಮರಾಯನು ಶತ್ರು ಬಲಶಾಲಿಯಾಗಿರುವಾಗ ಕಾಡಿನಲ್ಲಿರುವ ತಾವು ವನವಾಸದ ನಿಯಮವನ್ನು ಮುರಿದು ಕ್ಷಾತ್ರವನ್ನನುಸರಿಸುವುದು ಮತ್ತೂ ವಿನಾಶಕಾರಿಯೆಂಬುದನ್ನು ತಿಳಿಸಿ, ಅವರನ್ನು ಸಮಾಧಾನಪಡಿಸುವನು. ಆ ಸಮಯಕ್ಕೆ ವ್ಯಾಸಮಹರ್ಷಿಗಳು ಅಲ್ಲಿಗೆ ಆಗಮಿಸಿ, ಅವರ ಆತಿಥ್ಯವನ್ನು ಸ್ವೀಕರಿಸುವರು. ಪಾಂಡವರ ದಾರುಣತೆಯನ್ನೂ, ಅವರಿಗೊದಗಿದ ಭಯ, ಶಂಕೆಗಳನ್ನೂ ಬಲ್ಲ ವ್ಯಾಸರು ಧರ್ಮರಾಯನಿಗೆ ಒಂದು ಮಂತ್ರೋಪದೇಶವನ್ನು ಮಾಡಿ, ಅದನ್ನು ಧರ್ಮರಾಯನು ಅರ್ಜುನನಿಗೆ ಉಪದೇಶಿಸಿ, ಅವನನ್ನು ಇಂದ್ರ ಮತ್ತು ಶಿವನಿಂದ ದಿವ್ಯಾಸ್ತ್ರಗಳನ್ನು ಪಡೆಯುವ ತಪಸ್ಸಿಗೆ ನಿಯೋಜಿಸಲು ತಿಳಿಸುವರು. ಅಲ್ಲದೆ ಪಾಂಡವರು ದ್ವೈತವನ್ನು ಬಿಟ್ಟು ಕಾಮ್ಯಕವನಕ್ಕೆ ತೆರಳಲು ಸೂಚಿಸುವರು. ಅಲ್ಲಿ ಧರ್ಮರಾಯನು ಅರ್ಜುನನನ್ನು ಕರೆದು, ಮುಂದೆ ರಾಜ್ಯಕ್ಕಾಗಿ ಯುದ್ಧವಾದರೆ ಕೌರವರ ಕಡೆಯ ವೀರರಾದ ಭೀಷ್ಮ, ದ್ರೋಣಾದಿಗಳನ್ನು ಗೆಲ್ಲಲು ದಿವ್ಯಶಕ್ತಿಯು ಅಗತ್ಯವೆಂಬುದನ್ನು ಒತ್ತಿ ಹೇಳಿ, ಅರ್ಜುನನು ಇಂದ್ರಕೀಲಕ್ಕೆ ಹೋಗಿ, ತಪಸ್ಸನ್ನು ಮಾಡಿ ದಿವ್ಯಾಸ್ತ್ರಗಳನ್ನು ಪಡೆಯಲು ವ್ಯಾಸರು ದಯೆಗೈದ ಮಂತ್ರವನ್ನು ಅರ್ಜುನನಿಗೆ ಉಪದೇಶಿಸುವನು. ಅರ್ಜುನನು ಮಂತ್ರಸಾಮರ್ಥ್ಯದಿಂದ ಇಂದ್ರಕೀಲವನ್ನು ಸೇರಿ ತಪಸ್ಸಿಗೆ ತೊಡಗುವನು. ಅಲ್ಲಿಗೆ ಇಂದ್ರನು ವೃದ್ಧವಿಪ್ರನ ವೇಷವನ್ನು ಧರಿಸಿ ಬಂದು, ಅರ್ಜುನನ ತಪಸ್ಸನ್ನು ಅಲ್ಲಗಳೆಯುವನು. ಯಾವುದಕ್ಕೂ ಜಗ್ಗದ ನಿಶ್ಚಳ ತಪೋಮಯನಾಗಿದ್ದ ಅರ್ಜುನನ ಸ್ಥೈರ್ಯವನ್ನು ಕಂಡು ಇಂದ್ರನು ಹರ್ಷಿಸಿ,

ಮೈದೋರಿ, ಅರ್ಜುನನು ಶಿವನನ್ನು ಕುರಿತು ತಪಸ್ಸನ್ನು ಮಾಡುವಂತೆ ತಿಳಿಸಿ ಅಂತರ್ಧಾನನಾಗುತ್ತಾನೆ. ಅರ್ಜುನನ ತಪದ ಬೇಗೆಯಿಂದ ಭೀತರಾದ ಇಂದ್ರಕೀಲಪ್ರಾಂತದ ಮುನಿಗಳು ಕೈಲಾಸಕ್ಕೆ ಹೋಗಿ ಶಿವನಿಗೆ ಮೊರೆಯಿಡುತ್ತಾರೆ. ಅರ್ಜುನನ ಮನೋಗತವನ್ನರಿತ ಶಿವನು ಋಷಿಗಳಿಗೆ ಅಭಯವನ್ನಿತ್ತು ಕಳುಹುವನು. ಅನಂತರ ಶಿವನು ಪಾರ್ವತಿಯೊಡನೆಯೂ, ಶಿವಗಣ ದೇವಗಣಗಳೊಡನೆಯೂ ಕಿರಾತವೇಷದಲ್ಲಿ ಇಂದ್ರಕೀಲಪರ್ವತದ ತಪ್ಪಲಿಗೆ ಬರುವನು. ಅದೇ ಸಮಯಕ್ಕೆ ಮೂಕದಾನವನೆಂಬ ರಾಕ್ಷಸನು ಭಯಂಕರ ವರಾಹಾಕಾರದಿಂದ ಅರ್ಜುನನಿದ್ದೆಡೆಗೆ ಧಾವಿಸುತ್ತಾನೆ. ಅರ್ಜುನನೂ, ಕಿರಾತರೂಪಿಯಾದ ಶಿವನೂ ಏಕಕಾಲದಲ್ಲಿ ಬಾಣಪ್ರಯೋಗ ಮಾಡಲು ಹಂದಿಯು ಸತ್ತು ಬೀಳುವುದು. ಆ ಹಂದಿಯನ್ನು ಮೊದಲು ಹೊಡೆದವರು ಯಾರು, ಯಾರ ಬಾಣದಿಂದ ಅದು ಸತ್ತಿತು ಎಂಬ ವಿವಾದವು ಇಬ್ಬರಿಗೂ ನಡೆದು, ಕ್ರಮೇಣ ಭಯಂಕರ ಕದನವೇ ನಡೆಯುವುದು. ತನ್ನ ಅಸ್ತ್ರ ಶಸ್ತ್ರಾದಿಗಳೆಲ್ಲವೂ ವಿಫಲವಾದುದನ್ನು ಕಂಡ ಅರ್ಜುನನು, ಶಿವನೊಡನೆ ಮಲ್ಲಯುದ್ಧಕ್ಕೆ ತೊಡಗುವನು. ಕಿರಾತ ಮುಷ್ಟಿ ಘಾತಕ್ಕೆ ಅರ್ಜುನನು ಮೂರ್ಛೆಬೀಳುವನು, ಮೂರ್ಛೆ ತಿಳಿದು, ಮಳಲಲಿಂಗವನ್ನು ಪೂಜಿಸುವನು. ಹೂಗಳು ಶಬರನ ತಲೆಯಲ್ಲಿರುವುದನ್ನು ಕಂಡು ಅರ್ಜುನನು ಚಕಿತನಾಗುವನು. ಆಗ ಶಿವನು, "ಅರ್ಜುನ ಏಳು, ನನ್ನನ್ನು ನೋಡು! ನಿನ್ನ ಧೈರ್ಯ, ಶೌರ್ಯಾದಿಗಳನ್ನು ನೋಡಿ ನಾನು ಮೆಚ್ಚಿದೆ. ಕ್ಷತ್ರಿಯರಲ್ಲಿ ನಿನಗೆ ಸಮಾನರಾರೂ ಇಲ್ಲ. ತೇಜಸ್ಸಿನಲ್ಲಿಯೂ, ವೀರ್ಯದಲ್ಲಿಯೂ ನನಗೆ ಸಮಾನನಾದವನು ನೀನು" ಎನ್ನುತ್ತಾನೆ. ಕೂಡಲೇ ಅರ್ಜುನನಿಗೆ ಕಿರಾತನೇ ಶಿವನೆಂಬ ಸತ್ಯ ತಿಳಿಯುತ್ತದೆ. ಅರ್ಜುನನು ಶಿವನ ಪಾದದಮೇಲೆ ಹೊರಳಿ ಕ್ಷಮೆಯನ್ನು ಬೇಡುವನು. ಶಿವನು ಅರ್ಜುನನನ್ನು ಅಪ್ಪಿಕೊಂಡು, ಪರಾಕ್ರಮವನ್ನು ಮೆಚ್ಚಿಕೊಂಡು ಪಾಶುಪತಾಸ್ತ್ರವನ್ನು ಕರುಣಿಸಿ ಅಂತರ್ಧಾನನಾಗುವನು. ಸಕಲ ದೇವತೆಗಳೂ ತಮ್ಮಲ್ಲಿದ್ದ ದಿವ್ಯಾಸ್ತ್ರಗಳನ್ನು ಅರ್ಜುನನಿಗೆ ನೀಡುವರು.

**೨. ಭಾರವಿಯ ಕಿರಾತಾರ್ಜುನೀಯದಲ್ಲಿ :**

ಮೇಲೆ ಹೇಳಿರುವ ಮಹಾಭಾರತದ ಕಥೆಯ ಜಾಡನ್ನೇ ಭಾರವಿಯು ತನ್ನ ಕಿರಾತಾರ್ಜುನೀಯದಲ್ಲಿ ಅನುಸರಿಸಿಕೊಂಡು ಹೋಗಿದ್ದರೂ, ಅಲ್ಲಲ್ಲಿ ಅವನು ಹಲಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಅವನು ಮಾಡಿಕೊಂಡಿರುವ ಹಲವು ವ್ಯತ್ಯಾಸಗಳನ್ನು ಗಮನಿಸಬಹುದು.

೧. ದ್ವೈತವನದಲ್ಲಿ ಧರ್ಮರಾಯ–ದ್ರೌಪದಿ–ಭೀಮ ಇವರಲ್ಲಿ ನಡೆಯುವ ಸಂವಾದಕ್ಕೆ ಮೂಲಕ್ಕಿಂತಲೂ ಹೆಚ್ಚಿನ ಜೀವಕಳೆ ತುಂಬಿ ವ್ಯಾಸರ ದೃಷ್ಟಿಯನ್ನು ಸ್ಫುಟಗೊಳಿಸಿದ್ದಾನೆ.

೨. ಮೂಲದಲ್ಲಿ ವ್ಯಾಸರು ಮಂತ್ರವನ್ನು ಮೊದಲು ಧರ್ಮರಾಯನಿಗೆ ಉಪದೇಶಿಸಿದರೆಂದೂ, ಧರ್ಮರಾಯನು ಅನಂತರ ಅರ್ಜುನನಿಗೆ ಉಪದೇಶಿಸಿದನೆಂದೂ ಇದೆ. ಆದರೆ ಭಾರವಿಯಲ್ಲಿ ವ್ಯಾಸರು ಅರ್ಜುನನಿಗೆ ನೇರವಾಗಿ ಉಪದೇಶಿಸದರೆಂದು ವರ್ಣಿತವಾಗಿದೆ.

೩. ಮಹಾಭಾರತದಲ್ಲಿ ಅರ್ಜುನನು ಮಕ್ಷನ ಬಲದಿಂದ ಇಂದ್ರಕೀಲಕ್ಕೆ ಹೋದನೆಂದಿದ್ದರೆ ಭಾರವಿಯಲ್ಲಿ ಮಕ್ಷನ ಸಹಾಯದಿಂದ ಇಂದ್ರಕೀಲಕ್ಕೆ ಹೋದನೆಂದು ನಿರೂಪಿತವಾಗಿದೆ.

೪. ಹಿಮಾಲಯ, ಗಂಧಮಾದನ, ಇಂದ್ರಕೀಲಗಳ ವರ್ಣನೆಯನ್ನು ಭಾರವಿಯು ವಿಸ್ತಾರವಾಗಿ ಮಹಾಕಾವ್ಯದ ಶೈಲಿಯಲ್ಲಿ ಮಾಡಿದ್ದಾನೆ.

೫. ಮೂಲಭಾರತದಲ್ಲಿ ಅರ್ಜುನನ ತಪದಾರಂಭದಲ್ಲೇ ಇಂದ್ರನು ವಿಪ್ರವೇಷದಲ್ಲಿ ಅರ್ಜುನನ ಸ್ಥೈರ್ಯವನ್ನು ಪರೀಕ್ಷಿಸುತ್ತಾನೆ. ಆದರೆ ಭಾರವಿಯಲ್ಲಿ ಇಂದ್ರನಿಂದ ನಿಯೋಜಿತರಾದ ರಂಭಾಪ್ಸರೆಯರು ಬಂದು ಅರ್ಜುನನ ತಪೋಭಂಗಕ್ಕೆ ಯತ್ನಿಸಿ ವಿಫಲರಾಗುತ್ತಾರೆ.

೬. ಮಹಾಭಾರತದಲ್ಲಿ ಶಿವನು ಗಣಗಳೊಂದಿಗೆ ಬಂದರೂ ಯುದ್ಧ ನಡೆಯುವುದು ಕಿರಾತ ಮತ್ತು ಅರ್ಜುನ ಇಬ್ಬರಿಗೇ ; ಉಳಿದವರೆಲ್ಲ ಪ್ರೇಕ್ಷಕರು. ಆದರೆ ಭಾರವಿಯಲ್ಲಿ ಅರ್ಜುನನಿಗೂ, ಕಿರಾತ–ಕಿರಾತಗಣಗಳಿಗೂ ಸಾಮೂಹಿಕ ಯುದ್ಧ ಜರುಗುತ್ತದೆ.

೭. ಕಟ್ಟಕಡೆಯ ಕಾಳಗವೂ ಭಾರವಿಯಲ್ಲಿ ವಿಶಿಷ್ಟತೆಯಿಂದ ಕೂಡಿದೆ. ಶಿವನ ಮುಷ್ಟಿಘಾತದಿಂದ ಮೂರ್ಛಿತನಾದ ಅರ್ಜುನನಿಗೆ ಎಚ್ಚರಾದಾಗ ತಾನು ಯಾವ ಹೂಗಳಿಂದ ಶಿವಲಿಂಗವನ್ನು ಪೂಜಿಸಿದ್ದನೋ ಅವುಗಳೇ ಕಿರಾತನ ಮುಡಿಯಲ್ಲಿರುವುದನ್ನು ಕಂಡು, ಕಿರಾತನೇ ಶಿವನೆಂಬುದು ಅರಿವಾಗುತ್ತದೆ. ಆದರೆ ಭಾರವಿಯಲ್ಲಿ ಕಿರಾತನ ಹತಿಯಿಂದ ತನ್ನ ಕಾಲ ಮೇಲೆ ಬಿದ್ದ ಅರ್ಜುನನಿಗೆ ಕೂಡಲೇ ಶಿವನು ಪ್ರೀತನಾಗಿ ಮೈದೋರುತ್ತಾನೆ.

ಈ ಎಲ್ಲ ಬದಲಾವಣೆಗಳಲ್ಲೂ ಭಾರವಿಯ ದೃಷ್ಟಿ ಮಹಾಕಾವ್ಯರಚನೆಯೇ.

**ವಿಕ್ರಮಾರ್ಜುನ ವಿಜಯದಲ್ಲಿ :** ಪಂಪ ಮಹಾಕವಿಯ ಕಾವ್ಯ 'ವಿಕ್ರಮಾರ್ಜುನ ವಿಜಯ'ದಲ್ಲಿ ಎಲ್ಲೆಲ್ಲಿಯೂ ಅರ್ಜುನನ ವಿಜಯವೇ ಕವಿಗೆ ಪ್ರಧಾನ. ಉಳಿದ ಕವಿಗಳ ದೃಷ್ಟಿಗೆ 'ಕಿರಾತಾರ್ಜುನೀಯ' ಶಿವಲೀಲೆಯಾಗಿ ತೋರಿದ್ದರೆ, ಪಂಪಕವಿಗೆ ಆ ಧಾರ್ಮಿಕ ದೃಷ್ಟಿಗಿಂತ ಅರ್ಜುನನ ಪಾತ್ರವನ್ನು ಉಜ್ವಲಗೊಳಿಸುವ ದೃಷ್ಟಿಯೇ ಮುಖ್ಯ. ಮೂಲಭಾರತದ ಕಥೆಯ ಜಾಡನ್ನು ಕೆಲವೆಡೆ, ಭಾರವಿಯ ಕಾವ್ಯದ ಜಾಡನ್ನು ಕೆಲವೆಡೆ ಪಂಪನು ತುಳಿದಿದ್ದರೂ ಕಥೆಯ ಸನ್ನಿವೇಶ ಆವೆರಡರಿಂದ ಸ್ವತಂತ್ರವಾಗಿದೆ.

ಇಲ್ಲಿ ದ್ವೈತವನಕ್ಕೆ ವ್ಯಾಸರು ಆಗಮಿಸುವುದು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಗಳಿಸುವ ಮಂತ್ರೋಪದೇಶ ಮಾಡುವುದಕ್ಕಾಗಿಯೇ. ಅರ್ಜುನನು ಗುಹ್ಯಕನ ಹೆಗಲನ್ನೇರಿ

ವಿದ್ಯಾಧರನಂತೆ ಕೈಲಾಸದ ತಪ್ಪಲಿಗೆ ಬರುತ್ತಾನೆ. ಅರ್ಜುನನು ಇಂದ್ರಸಿಂಹಾಸನಕ್ಕಾಗಿ ತಪಸ್ಸು ಮಾಡುವನೆಂದು ಹೆದರಿದ ಇಂದ್ರನು ರಂಭಾಪ್ಸರೆಯರನ್ನು ತಪೋಭಂಗ ಮಾಡಲು ಕಳುಹಿಸುತ್ತಾನೆ. ಅವರು ತಮ್ಮ ಹಾವ ಭಾವ ವಿಲಾಸಗಳಿಂದ ಅರ್ಜುನನ ಮನಸ್ಸನ್ನು ಕದಲಿಸಲು ಅಸಮರ್ಥರಾಗಿ ಇಂದ್ರನ ಬಳಿಗೆ ಹಿಂದಿರುಗುತ್ತಾರೆ. ಆಗ ಇಂದ್ರನೇ ವಿಪ್ರವೇಷದಲ್ಲಿ ಬಂದು ಅರ್ಜುನನ ತಪೋನಿಶ್ಚಲತೆಯನ್ನೂ, ಅವನ ತಪೋದ್ದೇಶವನ್ನೂ ತಿಳಿದು ಹರ್ಷಿತನಾಗಿ ಆಶೀರ್ವದಿಸಿ ಅಂತರ್ಧಾನನಾಗುತ್ತಾನೆ. ಅರ್ಜುನನ ತಪಸ್ಸಿನ ಬೇಗೆಯಿಂದ ತಪ್ತರಾದ ಋಷಿಗಳ ಪ್ರಾರ್ಥನೆಯ ಮೇಲೆ ಪರಶಿವನು ಅರ್ಜುನನಿಂದಲೇ ವರಾಹರೂಪದಲ್ಲಿದ್ದ ಮೂಕದಾನವನನ್ನು ಕೊಲ್ಲಿಸಿ, ಅವನ ಬಿಲ್ಲಾಳ್ತನವನ್ನು ಪರೀಕ್ಷಿಸಲು ಕಿರಾತವೇಷವನ್ನು ತಾಳಿ ಗಿರಿಜೆ ಮತ್ತು ಗಣಾಳಿ ಯೊಡನೆ ಅಲ್ಲಿಗೆ ಬರುತ್ತಾನೆ. ಆಗ ಆ ಕಲಕಲದಿಂದ ಕೆರಳಿದ ಮೂಕದಾನವನು ಅರ್ಜುನ ಮತ್ತು ಶಿವನಿಂದ ಏಕಕಾಲದಲ್ಲಿ ಬಿಡಲ್ಪಟ್ಟ ಬಾಣಗಳಿಂದ ಮೃತಿಹೊಂದುತ್ತಾನೆ. ಆ ಹಂದಿಯನ್ನು ಕೊಂದವರು ಯಾರೆಂಬ ಬಗ್ಗೆ ಶಿವನಿಗೂ ಅರ್ಜುನನಿಗೂ ವಿವಾದ ಬೆಳೆದು ಸಾಮೂಹಿಕ ಯುದ್ಧವಾಗಿ ಅರ್ಜುನನ ಪರಾಕ್ರಮದಿಂದ ಕಿರಾತಸೇನೆ ನುಚ್ಚು ನೂರಾಗುತ್ತದೆ. ಅನಂತರ ಕಿರಾತಾರ್ಜುನರ ಮಲ್ಲಗಾಳಗದಲ್ಲಿ ಅರಿಗನು (ಅರ್ಜುನನು) ಹರನನ್ನು ನೆಲಕ್ಕೆ ಕೆಡವಿ ಗಂಟಲನ್ನು ಮೆಟ್ಟುತ್ತಾನೆ. ಆಗ ಶಿವನು ತನ್ನ ಸ್ವಸ್ವರೂಪ ವನ್ನು ತೋರಲು ಅರ್ಜುನನು ಬೆದರಿ ತಾನು ಮಾಡಿದ ಅಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸಿದಾಗ ಶಿವನು ಅವನ ಪರಾಕ್ರಮಕ್ಕೆ ಮೆಚ್ಚಿ ಪಾಶುಪತಾಸ್ತ್ರವನ್ನು ದಯೆ ಗೆಯ್ಯುತ್ತಾನೆ.

ಪಂಪನ ಕಥಾನಾಯಕನಾದ ಗುಣಾರ್ಣವನು ಎಷ್ಟಾದರೂ ಉದಾರಮಹೇಶ್ವರ. ಅವನು ಶಿವನೊಡನೆ ಕಾದಿ ಸೋತನೆಂದು ತಿಳಿಸುವುದು ಪಂಪನಿಗೆ ಇಷ್ಟವಿಲ್ಲ. ಊರ್ವಶಿಯೇ ಮೊದಲಾದ ದಿವ್ಯಸ್ತ್ರೀಯರು ಅರಿಗನನ್ನು ತಮ್ಮ ಹಾವಭಾವವಿಲಾಸ ಗಳಿಂದ ಮರುಳುಮಾಡಲು ಸಾಧ್ಯವಾಗದೆ ಸಹಜಮನೋಜನಾದ ಅರ್ಜುನನ ಗಂಡು ಗಾಡಿಗೆ ತಾವೇ ಮರುಳಾದರು ಎನ್ನುವಲ್ಲಿ ಪಂಪನು ಅರಿಗನ ಗುಣೋತ್ಕರ್ಷವನ್ನು ಸೂಚಿಸಿರುವನು. ಕಾಮನನ್ನು ಈ ರೀತಿಯಲ್ಲಿ ಜಯಿಸಿದ ಅರ್ಜುನನು ಕಾಮಾರಿಯನ್ನು ಜಯಿಸಬಹುದೆಂಬ ಸಾಧ್ಯತೆಯನ್ನು ಸೂಚಿಸಿ, ನಾಯಕನ ಅಗ್ಗಳಿಕೆಯನ್ನು ಬೆಳಗಿರುವನು.

ಪಂಪನ ರಚನೆಯಲ್ಲಿ ಭಾರವಿಯ ಪ್ರಭಾವ ವಿಶೇಷವಾಗಿ ತೋರಿದರೂ ಕಡೆಯ ಯುದ್ಧ ಮಾತ್ರ ಪಂಪನ ಮನೋಧರ್ಮಕ್ಕೂ, ಕಾವ್ಯೋದ್ದೇಶಕ್ಕೂ ಸಾಕ್ಷಿಯಾಗಿ ವಿಶಿಷ್ಟವಾಗಿದೆ.

**ಕುಮಾರವ್ಯಾಸ ಭಾರತದಲ್ಲಿ :** ಕುಮಾರವ್ಯಾಸನು 'ಕಿರಾತಾರ್ಜುನೀಯ' ಪ್ರಸಂಗ ವನ್ನು ಕೊಂಚ ವಿಸ್ತಾರವಾಗಿಯೇ ಚಿತ್ರಿಸಿದ್ದಾನೆ. ಬಹುಮಟ್ಟಿಗೆ ಮೂಲಭಾರತವನ್ನೇ ಅನುಸರಿಸಿ ಅದರ ಕಥೆಯನ್ನು ಬಹು ಚೆನ್ನಾಗಿ ಕನ್ನಡಿಸಿದ್ದಾನೆ. ವ್ಯಾಸರು ಅರ್ಜುನನಿಗೆ

ಮಾಡುವ ಹಿತೋಪದೇಶ, ಅರ್ಜುನನ ವರ್ಣನೆ, ಯುದ್ಧದ ವರ್ಣನೆ, ಕಡೆಯಲ್ಲಿ ಅರ್ಜುನನು ಶಿವನನ್ನು ಕುರಿತು ಮಾಡುವ ಸ್ತೋತ್ರ, ಇವು ಮಹಾಕಾವ್ಯಕ್ಕನುಸಾರವಾಗಿ ವಿಸ್ತಾರವಾಗಿಯೇ ಬಂದಿವೆ. ಶಿವನ ಭಕ್ತಪ್ರಿಯತೆ, ಅರ್ಜುನನ ಪರಾಕ್ರಮ ಎರಡೂ ಉನ್ನತವಾಗಿ ಚಿತ್ರಿತವಾಗಿವೆ. ಮೂಲಭಾರತದಂತೆಯೇ ಇಲ್ಲಿಯೂ ವೇದವ್ಯಾಸರು ಧರ್ಮರಾಯನ ಮುಖೇಣ ಅರ್ಜುನನಿಗೆ ಮಂತ್ರೋಪದೇಶ ಮಾಡುತ್ತಾರೆ. ಅರ್ಜುನನು ತಪಸ್ಸನ್ನಾಚರಿಸುವಾಗ ಪರೀಕ್ಷಾರ್ಥವಾಗಿ ದೇವೇಂದ್ರನೇ ಬರುತ್ತಾನೆ. ತಪೋಭಂಗಕ್ಕಾಗಿ ರಂಭಾಪ್ಸರೆಯರೆಲ್ಲ ಮುಷ್ಟಿಯುದ್ಧದಲ್ಲಿ ಶಿವನಿಂದ ಪೆಟ್ಟು ತಿಂದ ಅರ್ಜುನನು ಶಿವ ಕರುಣೆಗಾಗಿ ಮಳಲ ಲಿಂಗಾರ್ಚನೆ ಮಾಡಿ ಪುನಃ ಯುದ್ಧಕ್ಕೆ ಬಂದಾಗ ತಾನು ಅರ್ಚಿಸಿದ ಪುಷ್ಪಮಾಲೆಯು ಕಿರಾತನ ಮಂಡೆಯ ಮೇಲಿರುವುದನ್ನು ಕಂಡು ಚಕಿತನಾಗಿ ಮತ್ತೆ ಪರೀಕ್ಷೆ ಮಾಡುವೆನೆಂದು ಎರಡನೆಯ ಬಾರಿ ಅರ್ಚಿಸಿ ಅನಂತರ ಕಿರಾತನೇ ಶಿವನೆಂಬ ಸತ್ಯವನ್ನು ಅರಿಯುತ್ತಾನೆ.

ಚೆನ್ನಬಸವ ಪುರಾಣದಲ್ಲಿ : ಶಿವನ ಪಂಚವಿಂಶತಿ ಲೀಲೆಗಳನ್ನು ಹೇಳಲು ತೊಡಗಿರುವ ವಿರೂಪಾಕ್ಷ ಪಂಡಿತನ ಈ ಗ್ರಂಥದಲ್ಲಿ ಕಿರಾತಾರ್ಜುನೀಯದ ಕಥೆ, ಶಬರ ಶಂಕರ ಲೀಲೆಯಾಗಿ, ಶಿವನ ಮಹಿಮೆಯನ್ನು ಹೊಗಳುವ ಕಥೆಯಾಗಿ ಪರಿಣಮಿಸಿದೆ. ಕವಿ ಕಥೆಯನ್ನು ಬಹು ಸಂಕ್ಷಿಪ್ತವಾಗಿ ಹೇಳಿ ಮುಗಿಸಿದ್ದಾನೆ. ಈ ಕಥೆ ಇಲ್ಲಿ ಬಂದಿರುವಷ್ಟು ಸಂಕ್ಷಿಪ್ತವಾಗಿ ಮತ್ತೆಲ್ಲಿಯೂ ಬಂದಿಲ್ಲವೆನ್ನಬಹುದು. ಶಿವನ ಮಹಿಮೆಯನ್ನು ಸ್ತುತಿಸುವ ಪುರಾಣದೃಷ್ಟಿಯೊಂದು ಹೊರತು ಈ ಕಥೆಯಲ್ಲಿ ಬೇರಾವ ವಿಶಿಷ್ಟತೆಯೂ ತೋರುವುದಿಲ್ಲ.

ಷಡಕ್ಷರಕವಿಯು ಕುಮಾರವ್ಯಾಸನ ಕಥಾನಿರೂಪಣೆಯನ್ನು ಸಂಪೂರ್ಣವಾಗಿ ಮೆಚ್ಚಿಕೊಂಡಿರುವನು. ಅವನನ್ನು ನೆರಳಿನಂತೆ ಅನುಸರಿಸುವನೆಂಬುದು ಸತ್ಯಸಂಗತಿ ಯಾಗಿದೆ. ನಾರಣಪ್ಪನ ಅನೇಕ ಪದ್ಯಗಳನ್ನು ತಾನು ಬಳಸಿಕೊಂಡಿರುವನು. ಷಟ್ಪದಿ ಗಳನ್ನು ವೃತ್ತ, ಕಂದಗಳಿಗೆ ಸರಿಹೊಂದಿಸುವ ಜಾಣ್ಮೆಯು ವಿಸ್ಮಯಾವಹವಾಗಿದೆ. ಚಂಪೂಶೈಲಿಯ ಬಿಗುಪು, ಪ್ರೌಢಿಮೆ, ಓಜಸ್ಸು ಮೂಲಪದ್ಯಗಳಿಗೂ ಒಂದು ಕಾಂತಿ ಯನ್ನೂ, ತೀಕ್ಷ್ಣತೆಯನ್ನೂ ತಂದುಕೊಟ್ಟಿದೆ. ಒಬ್ಬ ಮಹಾಕವಿಯು ಇನ್ನೊಬ್ಬ ಮಹಾ ಕವಿಯ ಕೃತಿಯನ್ನು ಮೆಚ್ಚಿ ಅನುಸರಿಸಿರುವುದಕ್ಕೆ ಇದು ಶ್ರೇಷ್ಠವಾದ ನಿದರ್ಶನ ವೆನ್ನಬಹುದು.

"ಷಡಕ್ಷರಿಯು ಪ್ರತಿಭಾಸಂಪನ್ನನಾದ ಮಹಾಪಂಡಿತ . . . ಅವನು ಮಹಾಕವಿ ಯೆನ್ನುವುದಕ್ಕಿಂತ ಮಹಾಪಂಡಿತನಾದ ಶ್ರೇಷ್ಠಕವಿಯೆನ್ನುವುದು ಹೆಚ್ಚು ಸತ್ಯ" ವೆಂದು ಪ್ರೊಫೆಸರ್ ಶ್ರೀಮಾನ್ ಜಿ. ಎಸ್. ಶಿವರುದ್ರಪ್ಪನವರೂ, "ಅವನು ಮಹಾಕವಿಯ ತೇಜೋಂಶವುಳ್ಳವನೇ ಹೊರತು ಮಹಾಕವಿಯ ಸಿದ್ಧಿ ಪಡೆದವನಲ್ಲ" ಎಂದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಡಾ॥ ಆರ್. ಎಸ್. ಮುಗಳಿಯವರೂ ಅಭಿಪ್ರಾಯಪಟ್ಟಿರುವರು. ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಷಡಕ್ಷರದೇವನ 'ರಾಜಶೇಖರ ವಿಳಾಸ'

ವನ್ನು ಕುರಿತು ಉಪನ್ಯಾಸ ಮಾಡಿದಾಗ, ಶ್ರೀಮಾನ್ ಬಿ. ಎಂ. ಶ್ರೀ. ಯವರು ವಿಸ್ತಾರವಾಗಿ ವಿವೇಚನೆಯನ್ನು ಮಾಡಿ "ತಿರುಕೊಳವಿನಾಚಿಯ ಪ್ರಲಾಪ' ಪ್ರಸಂಗವು ಒಂದು ರಸದಮಡು. ಈ ಭಾಗವು ಜಗತ್ತಿನ ಶ್ರೇಷ್ಠಕೃತಿಗಳ ಸಾಲಿನಲ್ಲಿ ಮೆರೆಯಲು ಅರ್ಹವಾಗಿದೆ" ಎಂದರು. ಸಂಸ್ಕೃತ ಸಾಹಿತ್ಯದಲ್ಲಿ 'ನೈಷಧಂ ವಿದ್ವದೌಷಧಂ', 'ನವಸರ್ಗೇಗತೇ ಮಾಘೇ ನವಶಬ್ದೋನವಿದ್ಯತೆ' ಎಂಬ ಖ್ಯಾತಿಯನ್ನು ಗಳಿಸಿರುವ ಮಹಾಪ್ರೌಢವೂ, ಪಾಂಡಿತ್ಯಪೂರ್ಣವೂ ಮತ್ತು ಪ್ರತಿಭಾಸಂಪನ್ನವೂ ಆದ ಕಾವ್ಯಗಳ ಮಾದರಿಯಲ್ಲಿಯೇ ಷಡಕ್ಷರಿಯೂ ತನ್ನ ಕಾವ್ಯಗಳನ್ನು ಪಾಂಡಿತ್ಯಪೂರ್ಣವಾದ ಚಂಪೂಶೈಲಿಯಲ್ಲಿ ರಚಿಸಿರುವನು. "ಕವಯಃ ಪಂಡಿತ ಕವಯಃ" ಎಂಬಂತೆ ಷಡಕ್ಷರಿಯು ಕವಿಯೂ ಹೌದು, ಪಂಡಿತನೂ ಹೌದು.

ಷಡಕ್ಷರದೇವನ 'ಶಬರಶಂಕರ ವಿಳಾಸ'ವನ್ನು ಸರಳ ಗದ್ಯಾನುವಾದ ಮಾಡಲು ನನಗೆ ಅವಕಾಶವನ್ನು ಕಲ್ಪಿಸುವ ವಿಶ್ವಾಸವನ್ನು ತೋರಿದುದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಮಾನ್ ಜಿ. ನಾರಾಯಣರವರಿಗೆ ನಾನು ಕೃತಜ್ಞ. ಈ ಸ್ತುತ್ಯ ಕಾರ್ಯದಲ್ಲಿ ಅನೇಕ ವಿದ್ವಾಂಸರ ನೆರವು ಅಗತ್ಯ. ನನ್ನ ಕಿಂಚಿತ್ಸೇವೆಯು ಕನ್ನಡಾಂಬೆಯ ಆರಾಧನೆಗೆ ಸಲ್ಲಲಿ. ಈ ಸಂದರ್ಭದಲ್ಲಿ ಗದ್ಯಾನುವಾದ ಮಂಡಳಿಯ ಅಧ್ಯಕ್ಷರಾದ ವಿದ್ವಾನ್ ರಂಗನಾಥಶರ್ಮರ ಸಲಹೆಯನ್ನೂ ಮಾರ್ಗದರ್ಶನವನ್ನೂ ಯಥೇಚ್ಛವಾಗಿ ಪಡೆದಿರುತ್ತೇನೆ. ಅವರ ಅಮೂಲ್ಯ ಸಲಹೆ, ಸಹಕಾರಗಳಿಗೆ ನಾನು ಋಣಿ. ಶ್ರೀಮಾನ್ ಶಿ. ಶಿ. ಬಸವನಾಳ, ಎಂ.ಎ. ರವರು ಸಂಪಾದಿಸಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡದವರು ಪ್ರಕಟಿಸಿರುವ 'ಶಬರಶಂಕರ ವಿಳಾಸ'ದ ಮೂಲಪಾಠವನ್ನು ಈ ಆವೃತ್ತಿಗೆ ಸ್ವೀಕರಿಸಲಾಗಿದೆ.

೨೨-೬-೧೯೭೮
ಶಂಕರಪುರ, ಬೆಂಗಳೂರು.

ದಿಬ್ಬೂರು ಶ್ರೀನಿವಾಸರಾವ್

# ಪ್ರಥಮಾಶ್ವಾಸಂ

ಸ್ರಗ್ಧರೆ ಶ್ರೀಮತ್ಕಲ್ಯಾಣರೂಪಂ ಶರಭವನಗಜೋತ್ಸಂಗನಭ್ರಾಂತಯೋಗಾ
ರಾಮಾಂಚತ್ಪಾದಪದ್ಮಂ ಸುರುಚಿಗಣಪವಿಭ್ರಾಜಿತಂ ಸಾರಸತ್ವಂ
ವ್ಯಾಮಿಶ್ರಾಹೀನ ಚಂಚತ್ಕಟಕನಧಿಕದಿವ್ಯಾಗಮಂ ಸ್ವಸ್ಥಲೋಕ
ಸ್ತೋಮಂ[೧] ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತಭಾಸ್ವತ್ಪ್ರಕಾಶಂ ಗಿರೀಶಂ* ೧

೧. (ಶಿವನಪರವಾಗಿ) ಸಂಪತ್ಕರವೂ, ಮಂಗಳಪ್ರದವೂ ಆದ ಸ್ವರೂಪವುಳ್ಳವನೂ, (ಶರಭವನ್ + ಅಗಜಾ + ಉತ್ಸಂಗನ್)ಷಣ್ಮುಖ ಪಾರ್ವತಿಯರನ್ನು ತನ್ನ ತೊಡೆಯಲ್ಲಿ ಹೊಂದಿರುವವನೂ, (ಅಭ್ರಾಂತ + ಯೋಗಾರಾಮ + ಅಂಚತ್ + ಪಾದಪದ್ಮಂ) ನಿಶ್ಚಲವಾದ (ಕರ್ಮ, ಭಕ್ತಿ ಮತ್ತು ಜ್ಞಾನವೆಂಬ) ಯೋಗನಿಷ್ಠರಿಗೆ ಧ್ಯೇಯವಾದ ಅಡಿದಾವರೆಗಳುಳ್ಳವನೂ, (ಸುರುಚಿ + ಗಣಪ + ವಿಭ್ರಾಜಿತಂ) ತೇಜಸ್ವಿಯಾದ ಗಣಪತಿಯೊಡನೆ ವಿರಾಜಿಸುತ್ತಿರುವವನೂ, (ಸಾರಸತ್ತ್ವ + ವ್ಯಾಮಿಶ್ರ + ಅಹೀನ + ಚಂಚತ್ + ಕಟಕನ್) ಶ್ರೇಷ್ಠವಾದ ಸತ್ತ್ವಾದಿ ಸದ್ಗುಣಗಳಿಂದ ಕೂಡಿದವನೂ, ನಾಗೇಂದ್ರನನ್ನು ಶೋಭಿಸುವ ಕಡಗವನ್ನಾಗಿ ಹೊಂದಿರುವವನೂ, ಅಧಿಕವೂ, ಪ್ರಬಲವೂ ಆದ ಶಿವಾಗಮ ಶಾಸ್ತ್ರಗಳುಳ್ಳವನೂ, (ಸ್ವ + ಸ್ಥ)ತನ್ನಲ್ಲಿ ಎಲ್ಲ ಲೋಕಗಳನ್ನೂ ಅಡಗಿಸಿಕೊಂಡವನೂ, ತೇಜೋಮೂರ್ತಿಯೂ, ವಿಸ್ತಾರವಾದ ಸೂರ್ಯಪ್ರಕಾಶದಂತೆ ಬೆಳಗುವವನೂ, ಕೈಲಾಸಾಧಿಪತಿಯೂ ಆದ ಶಿವನು ನಮ್ಮನ್ನು ರಕ್ಷಿಸಲಿ. (ಮೇರುಪರ್ವತದ ಪರವಾಗಿ) ಪ್ರಕಾಶಮಾನವಾದ ಬಂಗಾರದ ಕಾಂತಿಯುಳ್ಳ (ಶರಭ-ವನಗಜ + ಉತ್ಸಂಗನ್) ಶರಭಮೃಗ, ಕಾಡಾನೆಗಳಿರುವ ತಪ್ಪಲುಪ್ರದೇಶವುಳ್ಳ, (ಅಭ್ರಾಂತ + ಯೋಗ + ಆರಾಮ + ಅಂಚತ್) ಮುಗಿಲಂಚನ್ನು ಮುಟ್ಟುತ್ತಿರುವ ವನಗಳಿಂದ ಕೂಡಿದ), (ಪಾದಪದ್ಮಂ) (ಪರ್ವತದ) ಬುಡದಲ್ಲಿ ಕಮಲಪುಷ್ಪಗಳಿರುವ (ಕೊಳಗಳಿಂದ ಕೂಡಿದ), (ಸುರುಚಿ + ಗಣ

---

೧ ಸ್ತೋಮ (ತ.ಯ. ಲ)

* ಈ ಪದ್ಯದ ಬದಲು 'ಯ' ಪ್ರತಿಯಲ್ಲಿ ಕೆಳಗಿನ ಪದ್ಯವಿದೆ :

ಶ್ರೀಮತ್ಪದ್ಮಾಕ್ಷಮುಖ್ಯಾಮರಮಕುಟ ಮರುತ್ಪನ್ಮಣಿಶ್ರೇಣಿಭೃಂಗ
ಸ್ತೋಮಾಂಚತ್ಪಾದಪದ್ಮಂ ಗಿರಿವರತನಯಾನೇತ್ರನೀಲಾಬ್ಜಚಂಚತ್
ಸೋಮಂ ಭಕ್ತಾರ್ಥಕಲ್ಪದ್ರುಮನಮಿತಕೃಪಾಸಾಗರಂ ಭವ್ಯಲೀಲೋ
ದ್ದಾಮಂ ಕೀರ್ತಿಗೆ ಸದ್ಭಕ್ತಿಯನೆಮಗೆ ವೃಷಾಧೀಶಪತ್ರಂ ತ್ರಿಣೇತ್ರಂ

ಚಂಪಕ ಸುರರಮಣೀಕದಂಬ ಕಬರೀಭರ ಕಾಂತಿಗಳಿಂದಜಾಂಬುವಿ
ಸ್ಫುರಿತಪದಾಂಬುಜಾತೆ ಕರಿರಾಣ್ಮುಖ ಷಣ್ಮುಖಮಾತೆ ಸದ್ಗುಣಾ
ಭರಣೆ ಕೃಪಾಸುಧಾರಸತರಂಗಿಣಿ ಸಾರಕಳಾಧುರೀಣೆ ಶಾಂ
ಕರಿ ಪೊರೆಯೆನ್ನನನ್ವಿತಶುಭೋದಯೆ ಶೈಲಜೆ ಸರ್ವಮಂಗಳೇ ೨

ವಿಳಸಿತಕೃಷ್ಣವೇಣಿ ಸುಸರಸ್ವತಿ ಸನ್ನುತ ತುಂಗಭದ್ರೆ ಮಂ
ಜುಳಕಪಿಲಾಂಗಿ ಭೀಮರತಿಗೆ ಸಂಗತಸೈಂಧವಿ ಧೂತಪಾಪೆ ಮಂ
ಗಳರುಚಿಪೂರ್ಣಪುಷ್ಕರಣಿ ಗೋಮತಿಯೆಂದೆನಿಸಿರ್ದ ನಿತ್ಯನಿ
ರ್ಮಳೆ ಸಲೆ ಮಾಳ್ಕೆ ಹೈಮವತಿ ಸದ್ವಿಮಳತ್ವಮನೆಮ್ಮೊಳಾವಗಂ ೩

+ಪವಿ+ಭ್ರಾಜಿತಂ) ಮಿಂಚುಗಳ ಗೊಂಚಲುಗಳಿಂದಲೂ, ಸಿಡಿಲುಗಳಿಂದಲೂ ಬೆಳಗುತ್ತಿರುವ, (ಸಾರ+ಸತ್ತ್ವ+ವ್ಯಾಮಿಶ್ರ+ಅಹಿ+ಇನ+ಚಂಚತ್+ಕಟಕಂ) ಪ್ರಬಲವಾದ ಪ್ರಾಣಿಗಳಿಂದ ಕೂಡಿದ ಮತ್ತೂ ಶ್ರೇಷ್ಠ ಜಾತಿಯ ಸರ್ಪಗಳಿಂದ ಶೋಭಿಸುವ ತಪ್ಪಲುಗಳುಳ್ಳ, ಮುಗಿಲನ್ನು ಮುಟ್ಟುತ್ತಿರುವಂತಿರುವ ಎತ್ತರವಾದ ಮರಗಳಿಂದ ಕೂಡಿದ, (ಸ್ವಃ+ಸ್ಥ–) ದೇವತಾಸಮೂಹಗಳಿಗೆ ವಾಸಸ್ಥಾನವಾದ, ವ್ಯಾಪಕವಾಗಿ ಸೂರ್ಯಪ್ರಕಾಶದಿಂದ ಕೂಡಿರುವ ಪರ್ವತಗಳ ರಾಜನಂತಿರುವ ಮೇರುಪರ್ವತವು ನಮ್ಮನ್ನು ರಕ್ಷಿಸಲಿ.[1] ೨. ದೇವತಾಸ್ತ್ರೀಸಮೂಹದ ಕೇಶಪಾಶದ ಹೊಳಪೆಂಬ ಯಮುನಾನದಿಯ ನೀರಿನಲ್ಲಿ ಬೆಳಗುತ್ತಿರುವ ಚರಣಕಮಲಗಳುಳ್ಳವಳೂ, ಗಣಪತಿ ಷಣ್ಮುಖರಿಗೆ ಮಾತೆಯೂ, ಸದ್ಗುಣಭೂಷಿತೆಯೂ, ಕರುಣೆಯನ್ನು ಅಮೃತರಸ ಪ್ರವಾಹದಂತೆ ಹೊಂದಿರುವವಳೂ, ಉತ್ಕೃಷ್ಟವಾದ ಕಳೆಗಳಿಂದ ಕೂಡಿದವಳೂ,[2] ಮಂಗಳಪ್ರದೆಯೂ, ಗಿರಿರಾಜಕುಮಾರಿಯೂ, ಸಕಲ ಮಂಗಳಸ್ವರೂಪಿಣಿಯೂ ಆದ ಶಿವನ ಮಹಿಷಿಯು ನಮ್ಮನ್ನು ರಕ್ಷಿಸಲಿ. ೩. ಶೋಭಿಸುತ್ತಿರುವ ಕಪ್ಪಾದ ಜಡೆಯುಳ್ಳ, ಮಂಜುಳವಾದ ಮಾತಿನಿಂದ ಕೂಡಿದ, ಸತ್ಪುರುಷರ ಸ್ತುತಿಗೆ ಪಾತ್ರಳಾದ, ಶ್ರೇಷ್ಠವಾದ ಮಂಗಳಸ್ವರೂಪಿಣಿಯೆನಿಸಿದ, ಮನೋಹರವಾದ ಕಪಿಲವರ್ಣದಿಂದ ಕೂಡಿದ ದೇಹ ಕಾಂತಿಯುಳ್ಳ, ಶಿವನಲ್ಲಿ ಅನುರಕ್ತಳಾಗಿರುವ, (ಸೈಂಧವಿ-ಸಮುದ್ರರಾಜಕುಮಾರಿಯಾದ)

---

೧ ರಥಿ (ಯ, ರ, ಲ, ಸ) ೨ ಗತೆ (ಸ)

[1]. ಮಂಗಳ ಶ್ಲೋಕದಲ್ಲಿ ಕವಿಯು ಶಿವನನ್ನೂ, ಮೇರುಪರ್ವತವನ್ನೂ ಶ್ಲೇಷೆಯಿಂದ ವರ್ಣಿಸಿರುವನು.

[2]. ಸಾರಕಳಾಧುರೀಣೆ–ಕಳೆಗಳು–ಶಾಂತಿ, ಶಾಂತ್ಯಾತೀತ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ–ಶಿವಾನುಭವ ಶಬ್ದಕೋಶ.

ಮತ್ತೇಭ ಹರಭಕ್ತಿಪ್ರಮದಾಮುಖೈಕಮುಕುರಂ ಶೈವಾಗಮಾಂಭೋಜಭಾ
ಸ್ಕರಬಿಂಬಂ ಗುಣರತ್ನಭೂಷಣಸುಮೇಶಧ್ಯಾನಸಂಪನ್ನನ
ಕ್ಷರಸದ್ಧರ್ಮಕಳೇವರಂ ಮೃಡಮತಾಂಭೋರಾಶಿರಾಕಾಸುಧಾ
ಕರನಾದ್ಯಂ ವೃಷಭೇಶ್ವರಂ ಸಲಹುಗೆಮ್ಮಂ ಭಕ್ತಕಲ್ಪದ್ರುಮಂ* ೪

ಚಂಪಕ ಅವಿಕಳಶಕ್ತಿಯುಕ್ತರಕಳಂಕಚರಿತ್ರರನಂತಸದ್ಗುಣಾ
ರ್ಣವರಭವಸ್ವರೂಪರಖಿಳಾಗಮವೇದಿಗಳರ್ದಿತಾನ್ಯವಾ
ದಿವರರಮಂದಕೀರ್ತಿಯುತರರ್ಥಿಸುರೋರ್ವಿಜರಪ್ರತರ್ಕ್ಯಗೌ
ರವರಭಿವಂದ್ಯರಕ್ಕೆಮಗಶೇಷಪುರಾತನರೀಶ್ವರಾರ್ಚಕರ್ ೫

ಲಕ್ಷ್ಮಿಯ ಗೆಳತಿಯಾದ, ಪಾಪನಾಶಿನಿಯೂ, ಮಂಗಳಕರವಾದ ಕಾಂತಿಯುಳ್ಳವಳೂ, (ಹಸ್ತ, ಪಾದ, ಪೀಠ) ಕಮಲಗಳುಳ್ಳವಳೂ, ವೇದವೇದ್ಯಳೂ, ಸರ್ವದಾ ದೋಷ ದೂರಳೂ, ಹಿಮವಂತನ ಮಗಳೂ ಆದ ಪಾರ್ವತಿಯು ನಮಗೆ ಸದಾಕಾಲವೂ ಶ್ರೇಷ್ಠ ವಾದ ಪವಿತ್ರತೆಯನ್ನುಂಟುಮಾಡಲಿ.[1] ೪. ಶಿವಭಕ್ತಿಯೆಂಬ ಸ್ತ್ರೀಯ ಮುಖವನ್ನು (ನೋಡಿಕೊಳ್ಳಲು) ಮುಖ್ಯವಾದ ಕನ್ನಡಿಯಾಗಿರುವ, ಶೈವಾಗಮಗಳೆಂಬ ಕಮಲ ಗಳನ್ನು (ಪ್ರಕಾಶಪಡಿಸುವ) ಸೂರ್ಯಮಂಡಲವಾದ, ಸದ್ಗುಣಗಳೆಂಬ ರತ್ನಾಭರಣ ಗಳಿಂದ ಭೂಷಿತನಾದ, ಪಾರ್ವತಿಯೊಡಗೂಡಿರುವ ಪರಶಿವನ ಧ್ಯಾನದಿಂದ ಧನ್ಯನಾದ, ಪ್ರಣವಸ್ವರೂಪ ಸದ್ಧರ್ಮಗಳೇ ಶರೀರವಾಗುಳ್ಳ, ಶೈವಸಿದ್ಧಾಂತವೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತಿರುವ, ಸೃಷ್ಟಿಗೆ ಮೊದಲನೆಯವನಾದ ಅಥವಾ ಪ್ರಥಮಾಚಾರ್ಯ ನಾದ, ಭಕ್ತರಿಗೆ ಕಲ್ಪವೃಕ್ಷವೆನಿಸಿದ ವೃಷಭೇಶ್ವರನು ನಮ್ಮನ್ನು ಕಾಪಾಡಲಿ. ೫. ಅನೂನ ಸಾಮರ್ಥ್ಯದಿಂದ ಕೂಡಿದವರೂ, ನಿರ್ದುಷ್ಟವಾದ ಆಚಾರಶೀಲರೂ, ಅನೇಕ ಸದ್ಗುಣಗಳ ಸಮುದ್ರದಂತಿರುವವರೂ, ಸಾಕ್ಷಾತ್ ಶಿವಸ್ವರೂಪರೂ, ಸಕಲ ಶಾಸ್ತ್ರಜ್ಞಾನಸಂಪನ್ನರೂ, ಅನ್ಯಮತವಾದಿವರರನ್ನು ಭಂಗಿಸಿದವರೂ, ನಿರತಿಶಯವಾದ ಕೀರ್ತಿಯಿಂದ ಕೂಡಿದವರೂ, ಆಶ್ರಯಿಸಿದವರ (ಪ್ರಾರ್ಥನೆಗಳನ್ನು ಈಡೇರಿಸುವಲ್ಲಿ) ಕಲ್ಪವೃಕ್ಷದಂತಿರುವವರೂ, ಊಹಾತೀತವಾದ ಮಹಿಮೆಗಳುಳ್ಳವರೂ, ಶಿವಾರಾಧಕರೂ, ಸಕಲರಿಗೂ ಹಿರಿಯರೂ

---

* ಈ ಪದ್ಯವು 'ಯ' ಪ್ರತಿಯಲ್ಲಿ ಮೂರನೆಯ ಪದ್ಯಕ್ಕೆ ಮೊದಲು ಬಂದಿದೆ.

1. ಕೃಷ್ಣವೇಣಿ, ಸರಸ್ವತಿ–ಮೊದಲಾದ ನದಿಗಳ ಹೆಸರು ಈ ಪದ್ಯದಲ್ಲಿ ಬಂದಿರುವುದೊಂದು ಚಮತ್ಕಾರ.

ಹರಸುಕುಮಾರ ಷಣ್ಮುಖನ ದಕ್ಷಮಖಾರಿಯ ಲಿಂಗಸಂಗವಿ
ಸ್ಫುರಿತನ ನಂದಿಕೇಶ್ವರನ ಭೃಂಗಿಯ ರೇಣುಕದಾರುಕಾದಿ ಭಾ
ಸುರಮಹಿಮಾಂಕ ಸತ್ಪ್ರಮಥವರ್ಯರ ಪಾದಪಯೋರುಹಕ್ಕೆ ಭ
ಕ್ತಿರಸದಳುರ್ಕೆಯಿಂ ನೆಗೞ್ದಪೆಂ ಕರಣತ್ರಯದಿಂ ಪ್ರಣಾಮಮಂ ೬

ಮತ್ತೇಭ ಕನಕಕ್ಷ್ಮಾಧರವಪ್ರದೊಳ್[೧] ನೆಗೞ್ದ ವಪ್ರಕ್ರೀಡೆಯಂ ನೀಳ್ಕಿ[೨] ನಾ
ಕನದೀವಾರಿಯನೀಂಟಿ ಫೂತ್ಕರಿಸಿ ತತ್ಪಂಕೇಜಮಂ ಕೊಂಡು ಭೋಂ
ಕನೆ ನೀರಾಟಮನಾಡಿ ಪಾಲ್ಗಡಲೊಳುದ್ಯದ್ಬಾಲಲೀಲಾಪ್ರವ
ರ್ತನಮಂ ತಾಳ್ದಿಭವಕ್ತ್ರನೀ ಕೃತಿಗಜಸ್ರಂ ಮಾೞ್ಕೆ ನಿರ್ವಿಘ್ನಮಂ ೭

ಶ್ರುತಿಸುತ್ಯ ವೀರಶೈವಾ
ಶ್ರಿತರ ಪರಾಭೂತ ದುರ್ಮತಪ್ರಕರರ ಸ
ಮ್ಮತಶಿರ ವಿತತಪ್ರಭಾವರ
ಚತುರಾಚಾರ್ಯರ ಪದಾಬ್ಜಳಿಕಾಂ ನಳಿತನಪ್ಪೆಂ ೮

ಆದ ಪುರಾತನರು[1] ನಮಗೆ ವಂದನಾರ್ಹರಾಗಿರುವರು. ೬. ಶಿವನ ಸುತನಾದ ಷಣ್ಮುಖನಿಗೂ, ದಕ್ಷಯಜ್ಞಧ್ವಂಸಿಯಾದ ವೀರಭದ್ರನಿಗೂ, ಲಿಂಗಸಂಗದಿಂದ ಪುಲಕಿತನಾಗಿ ಶೋಭಿಸುವ ನಂದಿಕೇಶ್ವರನಿಗೂ, ಭೃಂಗಿ, ರೇಣುಕಾರಾಧ್ಯ, ದಾರುಕಾರಾಧ್ಯರೇ ಮೊದಲಾದ ತೇಜೋಮಯ ಮಹಿಮಾವಿಳಾಸಯುಕ್ತರಿಗೂ, ಉತ್ತಮವಾದ ಪ್ರಮಥಗಣಾಧೀಶರಿಗೂ, ಪರಮಪ್ರೀತಿಯಿಂದಲೂ, ತ್ರಿಕರಣಪೂರ್ವಕವಾಗಿಯೂ ಪಾದಾನತನಾಗಿ ವಂದಿಸುವೆನು. ೭. ಹೊಂಬೆಟ್ಟದ ತಪ್ಪಲಲ್ಲಿ ಮಣ್ಣನ್ನೆತ್ತಿ ತನ್ನ ಮೇಲೆ ಎಸೆದುಕೊಳ್ಳುವ ಆಟವನ್ನು ಆಡಿ, ಉಬ್ಬಿ (ಹರ್ಷದಿಂದ) ಮೈಮುರಿದು, ದೇವಗಂಗೆಯ ನೀರನ್ನು ಹೀರಿಕೊಂಡು ಪುಸ್ಸೆಂದು ತೂರಿ, ಅಲ್ಲಿದ್ದ ಕಮಲಗಳನ್ನು ಕಿತ್ತು, ಶೀಘ್ರವಾಗಿ ಪಾಲ್ಗಡಲಿನಲ್ಲಿ ನೀರಾಟವನ್ನಾಡಿ, ವಿಶೇಷವಾದ ಬಾಲಲೀಲೆಗಳ ಆಚರಣೆಗಳನ್ನು ತೋರಿದ ಗಜಾನನನು ಈ ಕಾವ್ಯಕ್ಕೆ ಸದಾ ನಿರ್ವಿಘ್ನವನ್ನುಂಟುಮಾಡಲಿ. ೮. ವೇದಗಳಲ್ಲಿ ಪ್ರಶಂಸಿತವಾದ ವೀರಶೈವ ಮತವನ್ನು ಆಶ್ರಯಿಸಿದವರ, ದುರ್ಮತಗಳ ಸಮೂಹವನ್ನು ತಿರಸ್ಕರಿಸಿದ, ಪ್ರಶಾಂತರೂ ಮಹಾಮಹಿಮಾನ್ವಿತರೂ ಆದ ನಾಲ್ವರು

---

೧ ಸಾನುವೊಳ್ (ಯ) ೨ ನಿಳ್ಕಿ (ಜ, ಯ, ರ) ೩ ನ್ನುತ (ಯ, ಲ) ೪-೪ ಕಾನ (ಕ, ಯ, ವ)

[1] ಪುರಾತನರು = ಇವರು ಒಟ್ಟು ಅರವತ್ತುಮೂರು ಮಂದಿ. ಅವರಲ್ಲಿ ಕೆಲವರು ಕಲಿಗಣನಾಥ, ರುದ್ರಪಶುಪತಿ, ತಿರುನೀಲಕಂಠರು, ತಿರುಜ್ಞಾನಸಂಬಂಧಿ, ಸೌಂದರನಂಬಿ ಮುಂತಾದವರು.

ಗುರು ಸೋಮನಾಥ ಹರಿಹರ
ಹರಕವಿ ಪದ್ಮರಸಮುಖ್ಯರಂ ಬಲವಂದಾ
ದರದಿಂದೆ ಮಣಿದು ನೆಗಟ್ದಪೆ೧
ನುರುತರಶಿವಲೀಲೆ ಮಿಸುಪ ಸತ್ಕೃತಿಯನಿದಂ ೯

ಚಂಪಕ ಕಿವಿಗಮರ್ದಾಗೆ ನಲ್ನುಡಿಯೊಡಂಬಡೆ ಬಂಧದಳುರ್ಕೆ ದೇಸಿಯು
ತ್ಸವಮನೊಡರ್ಚೆ ಸೊಂಪು ಸುಟಿದಾಡೆ ರಸಂ ಪೊಸತಾಗಿ೨ ಕಾಟ್ಪುರಂ
ಕವಿಯೆ ಪೇಃದಟ್ಟು೩ ಭಾವಮದು ನಾಂಟೆ೪ ರಸಜ್ಞರ ಚಿತ್ತಮಂ ಮನೋ
ಭವನಲರಂಬಿನಂತೆ ಕೃತಿವೇಟ್ಪುದು ಕಬ್ಬಿಗನುರ್ಬಿ೫ ಧಾತ್ರಿಯೊಳ್ ೧೦

ಸುಕವಿಮುಖೇಂದುವಿಂದೊಗೆದ ಸತ್ಕೃತಿಚಂದ್ರಿಕೆ ಪರ್ಬೆ ಸದ್ಬುಧ
ಪ್ರಕರಚಕೋರಮಂ ತಣಿಪಿ ವರ್ಧಿಸಿ ನೇತ್ರಯಶಸ್ಸುಧಾಬ್ಧಿಯಂ
ಸಕಳರಸಜ್ಞಹೃತ್ಕುಮುದಸಮ್ಮು೬ದಮಂ ನೆಗಟ್ದಿರ್ಪಿನಂ ಸಮು
ತ್ಸುಕತೆಯನೇಕೆ ತಾಳ್ಗುಮದಱೊಳ್ ಖಳಚಕ್ರಚಯಂ ಧರಿತ್ರಿಯೊಳ್ ೧೧

ಆಚಾರ್ಯರ[1] ಪಾದಕಮಲಗಳಿಗೆ ನಮಿಸುವೆನು. ೯. ಗುರು ಸೋಮನಾಥ, ಹರಿಹರ, ಹರಕವಿ ಪದ್ಮರಸನೇ ಮೊದಲಾದವರನ್ನು ಪ್ರೀತಿಯಿಂದ ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸಿ, ಅತಿ ಶ್ರೇಷ್ಠವಾದ ಶಿವಲೀಲೆಯಿಂದ ಶೋಭಿಸುವ ಈ ಸತ್ಕೃತಿಯನ್ನು ರಚಿಸುವೆನು. ೧೦. ಲೋಕದಲ್ಲಿ ಕವಿಯು ಆನಂದೋನ್ಮತ್ತನಾಗಿ, ಮನ್ಮಥನ ಪುಷ್ಪ ಬಾಣಗಳು ರಸಿಕಜನರ ಹೃದಯಸ್ಪರ್ಶಿಯಾಗುವ ರೀತಿಯಲ್ಲಿ, ರಸಜ್ಞರ ಭಾವಸ್ಪರ್ಶಿ ಯಾಗುವ ರೀತಿಯಲ್ಲಿ ತನ್ನ ಕಾವ್ಯವನ್ನು ಹೇಳಬೇಕು. ರಚನೆಯು ಶ್ರವಣಾನಂದಕರ ವಾಗಿಯೂ, ಮಾತುಗಳು ಹಿತವಾಗಿಯೂ, ನಾನಾರೀತಿಯ ಛಂದೋವಿಲಾಸಗಳಿಂದ ಕೂಡಿಯೂ ಇರಬೇಕು. ಚಿತ್ತಾಕರ್ಷಕವಾದ ದೇಸಿಪ್ರಯೋಗಗಳಿಂದ ಕೂಡಿಯೂ, ಪ್ರಸನ್ನತೆಯು ಸ್ಫುಟವಾಗಿಯೂ, ನವರಸಗಳು ಹೊಸ ಹೊಸ ರೀತಿಯಲ್ಲಿ ಪ್ರವಾಹದಂತೆ ನುಗ್ಗಿಬರುವಂತೆಯೂ, ವ್ಯಾಪಕಭಾವಗಳಿಂದ ಕೂಡಿಯೂ ಇರಬೇಕು. ೧೧. ಕವಿ ಶ್ರೇಷ್ಠರ ಮುಖಚಂದ್ರನಿಂದ ಹೊಮ್ಮಿದ ಸತ್ಕಾವ್ಯವೆಂಬ ಬೆಳದಿಂಗಳು ಪ್ರಸರಿಸಿ, ಉತ್ತಮ ವಿದ್ವಾಂಸರೆಂಬ ಚಾತಕಪಕ್ಷಿಗಳನ್ನು ತೃಪ್ತಿಪಡಿಸಿ, ಕಥಾನಾಯಕನ ಕೀರ್ತಿ ಸುಧಾಸಾಗರವನ್ನು ಉಕ್ಕೇರಿಸುತ್ತದೆ; ಸಕಲ ಸಹೃದಯರ ಹೃದಯವೆಂಬ ಕುಮುದಕ್ಕೆ ಆನಂದವನ್ನು ಬೀರುತ್ತದೆ. ಆದರೆ ಲೋಕದಲ್ಲಿ ಖಳರೆಂಬ ಚಕ್ರವಾಕಪಕ್ಷಿಗಳ ಸಮು

---

೧ ಪೇಟ್ದಪೆ (ಗ, ತ) ೨ ತಾಗೆ (ಚ) ೩ ದಲ್ದಿ (ಜ, ರ) ೪ ನಾಂಟಿ (ಕ, ಜ) ೫ ರುರ್ಬಿ (ಚ) ೬ ಸಮ್ಮ (ಕ)

[1] ನಾಲ್ವರು ಆಚಾರ್ಯರು–ರೇಣುಕಾಚಾರ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ಮರುಳಾರಾಧ್ಯ–ರಾ. ಶೇ. ವಿ.–ಎರೆಸೀಮೆ ಚೆನ್ನಪ್ಪನವರು

ಮತ್ತೇಭ ಗಲಿತಾಲಂಕೃತಿ ವೀತಧಾತು ಶಿಥಿಲೀಭೂತಾಂಗಿ ದೋಷವ್ರಜಾ
ಕುಲೆ ಭಾಸ್ವದ್ರಸವೃತ್ತಿವರ್ಜಿತೆ ಸದಂತತ್ವಾತಿ೧ನಿರ್ಮುಕ್ತೆ ರಿ
ಕ್ತಲಸತ್ಪದ್ಧತಿ ಶಯ್ಯೆಗಿಂಬೆನಿಸದಾದಂ ದುರ್ಗುಣಂಬೆತ್ತ೨ ದು
ರ್ಬಲವದ್ದುಷ್ಕೃತಿವೃದ್ಧೆ ಸದ್ರಸಿಕಚೇತೋರಾಗಮಂ ಮಾಳ್ಪಳೇ ೧೨

ಜ್ವರತಪ್ತಂ ಸುಧೆಯಂ ಸುಧಾಂಬುನಿಧಿಯಂ ಭೇಕಂ ಸುಧಾರೋಚಿಯಂ
ವಿರಹಾವಿಷ್ಟನನಂತರತ್ನರುಚಿಯಂ ಘೂಕಂ ರಣದ್ವೀಣೆಯಂ
ಚರದೊಳ್ಪಂ ಬಧಿರಂ ಲಸನ್ಮುಕುರಮಂ ಜಾತ್ಯಂಧನುದ್ಯದ್ಗುಣಾ
ಕರಸತ್ಕಾವ್ಯಮಸಜ್ಜನೇಂ ಪಟಿಯೆ ಕುಂದಾದಪ್ಪುದೇ ಧಾತ್ರಿಯೊಳ್ ೧೩

ದಾಯಷವು ಮಾತ್ರ, ಆದರಲ್ಲಿ ಏಕೆ ಆನಂದಿಸೀತು ?[1] (ರಂ) ೧೨. (ಕಾವ್ಯಪರವಾಗಿ)–ಉಪಮಾದಿ, ಶಬ್ದಾಲಂಕಾರ, ಅರ್ಥಾಲಂಕಾರಗಳಿಂದ ವರ್ಜಿತವಾಗಿದ್ದು, ಧಾತು, ಕ್ರಿಯಾ ರೂಪಗಳು ನಷ್ಟವಾಗಿ, ಪ್ರಕೃತಿ, ಪ್ರತ್ಯಯಾದಿಗಳಿಂದ ಉಚಿತ ಸಂಯೋಜನೆಯಿಲ್ಲದೆ, ಅನೇಕ ಕಾವ್ಯದೋಷಗಳಿಂದ ಅಂದಗೆಟ್ಟಿರುವ, ಶೃಂಗಾರಾದಿ ನವರಸಗಳೂ, ಕೈಶಿಕ್ಯಾದಿ ವೃತ್ತಿಗಳೂ ಇಲ್ಲದ, ಪ್ರಸಿದ್ಧವಾದ ಕಾವ್ಯವಸ್ತುವಿಲ್ಲದ-ಶುಭಾಂತವಾಗದ, ಪ್ರಸಿದ್ಧಕಾವ್ಯ ಪದ್ಧತಿಯನ್ನು ಅನುಸರಿಸಿ ರಚನೆಯಾಗದ, ಲಲಿತಪದ ವಿನ್ಯಾಸಗಳಾಗಲೀ, ಓಜಸ್ಸಿನಿಂದ ಕೂಡಿದ ಪ್ರೌಢವಾದ ಪದಬಂಧವಾಗಲೀ ಇಲ್ಲದಿರುವ, ಸಕಲವಾದ ಕಾವ್ಯದೋಷಗಳಿಂದ ಕೂಡಿ, ದುರ್ಬಲವಾಗಿ ರಚಿತವಾದ ದುಷ್ಕಾವ್ಯವು ವಿದ್ವದ್ರಸಿಕರಿಗೆ ಮನಸ್ಸಂತೋಷ ವನ್ನುಂಟುಮಾಡುವುದೆ ? (ಸ್ತ್ರೀ ಪರವಾಗಿ) ಆಭರಣಗಳಿಂದ ಅಲಂಕೃತಳಾಗದಿರುವ, ದೇಹಶಕ್ತಿಗುಂದಿದ, (ವಾತ, ಪಿತ್ತ, ಕಫಾದಿ) ದೋಷಗಳಿಂದ ಪೀಡಿತಳಾಗಿರುವ, ಅನು ರಕ್ತಳಲ್ಲದ, ಹಲ್ಲುಗಳುದುರಿಹೋಗಿರುವ, ಉತ್ತಮವಾದ ನಡವಳಿಕೆಯಿಲ್ಲದ, ರತಿಗೆ ಹಿತಳಲ್ಲದ, ದುರ್ಗುಣೆಯೂ, ದುರ್ಬಲಳೂ ಕಠೋರಸ್ವಭಾವದವಳೂ ಆದ ವೃದ್ಧ ಸ್ತ್ರೀಯು ರಸಿಕರಿಗೆ ಮನಸ್ಸಂತೋಷವನ್ನುಂಟುಮಾಡುವಳೆ ?* ೧೩. ಜ್ವರದಿಂದ ನರಳುತ್ತಿರುವವನು ಹಾಲನ್ನೂ, ಕಪ್ಪೆಯು ಕ್ಷೀರಸಾಗರವನ್ನೂ, ವಿರಹಿಯು ಚಂದ್ರ ನನ್ನೂ, ಗೂಗೆಯು ಅತ್ಯಂತ ಪ್ರಕಾಶಮಾನ ಸೂರ್ಯಬಿಂಬವನ್ನೂ, ಕಿವುಡನು ನುಡಿಸು ತ್ತಿರುವ ವೀಣೆಯ ಇಂಪಾದ ನಾದಮಾಧುರ್ಯವನ್ನೂ, ಹುಟ್ಟುಕುರುಡನು ಉತ್ಕೃಷ್ಟ ವಾದ ಕನ್ನಡಿಯನ್ನೂ ತೆಗಳುವರು. ಅದೇ ರೀತಿಯಲ್ಲಿ (ಉತ್ತಮ ಸಾಹಿತ್ಯಸಂಸ್ಕಾರ

---

೧ ತಸ್ವಾರ (ರ) ೨ ಬೆತ್ತು (ಚ)

[1] ಬೆಳದಿಂಗಳಿನಲ್ಲಿ ಚಾತಕಪಕ್ಷಿ ಸಂತೋಷಿಸುತ್ತದೆ. ಚಕ್ರವಾಕಪಕ್ಷಿಯು ರಾತ್ರಿಯಾದ್ದರಿಂದ ಖೇದಪಡುತ್ತದೆ.

ಮೂಲದಲ್ಲಿ 'ನೇತ್ರಯಶಸ್ಸುಧಾಬ್ಧಿ' ಎಂಬುದು 'ನೇತೃಯಶಸ್ಸುಧಾಬ್ಧಿ' ಎಂದಿರಬೇಕು (ರಂ)

* ಈ ಪದ್ಯದಲ್ಲಿ ದುಷ್ಕೃತಿಪರವಾಗಿಯೂ, ವೃದ್ಧಸ್ತ್ರೀ ಪರವಾಗಿಯೂ ಶ್ಲೇಷೆಯಿದೆ.

ಧರೆಯೊಳ್ ಸದ್ವ್ಯಧನುರರೀ
ಕರಿಸಿದ ಸತ್ಕೃತಿಯನಧಮನೇಗೆಯ್ವನೊ ಭಾ
ಸ್ಕರಕರಗೃಹೀತನಳಿನಮ
ನುರುದೋಷಾಕರನದೆಂತುಮೇಂ ಕೊರಗಿಪನೇ ೧೪

ತೆಗಟಲ್ [೧]ಬಲ್ಲಂ ಖಳನೇಂ[೧]
ನೆಗಟಲ್ ಬಲ್ಲನೆ ನವೀನಕೃತಿಯಂ ಶಾಖಾ
ಮೃಗಮಲರ ಮಾಲೆಗೆಟಲ್
ಮಿಗೆ ಬಲ್ಲುದದಲ್ಲದಂತಿರೇಂ ರಚಿಯಿಕುಮೇ ೧೫

ಪಿರಿದಾಯಾಸದೆ ಗುಣಮಂ
ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್
ಕರಿಸಿ ಗುಣಿಯಂ ವಿಭೇದಿಪ
ಪರಿ ತೀಕ್ಷ್ಣಮುಖಂಗೆ ಸೂಚಿ[೨]ಯಂತಿರೆ ಸಹಜಂ ೧೬

ಗಳಿಲ್ಲದ) ಮೂಢರು (ಅಲಂಕಾರಗಳು, ಶ್ಲೇಷೆಗಳು ಮತ್ತು ಉತ್ತಮ ಭಾವಗಳಿಂದ ರಂಜಿತವಾದ) ಕಾವ್ಯವನ್ನು ನಿಂದಿಸುವರು. ಇದರಿಂದ ಉತ್ತಮ ಕಾವ್ಯಕ್ಕೆ ಯಾವ ರೀತಿಯಲ್ಲಿಯೂ ಕುಂದುಂಟಾಗಲಾರದು. ೧೪. ತಾವರೆಯನ್ನು ಸೂರ್ಯಕಿರಣಗಳು ಅರಳಿಸುತ್ತಿರುವಾಗ ಚಂದ್ರನು ಅವುಗಳನ್ನು ಮುಚ್ಚುವಂತೆ ಮಾಡಲು ಸಾಧ್ಯವಾಗದು. ಹಾಗೆಯೇ, ಲೋಕದಲ್ಲಿ ವಿದ್ವಾಂಸರು ಮೆಚ್ಚಿಕೊಂಡು ಆದರಿಸಿದ ಉತ್ಕೃಷ್ಟವಾದ ಕಾವ್ಯವನ್ನು ದೋಷೈಕದೃಷ್ಟಿಯುಳ್ಳ ಅಧಮರು ಹೀಗಳೆಯಲಾರರು. ೧೫. ಕೋತಿಯು ಪುಷ್ಪಮಾಲೆಯನ್ನು ಕಿತ್ತೆಸೆಯಬಲ್ಲುದೇ ಹೊರತು ತಾನು ಬೇರೆ ಹೂಮಾಲೆಯನ್ನು ಕಟ್ಟಲಾರದು. ಹಾಗೆಯೇ ದುರ್ಜನರೂ ಸಹ ಒಂದು ನವೀನಕಾವ್ಯವನ್ನು ನಿಂದಿಸಬಲ್ಲರೇ ಹೊರತು, ತಾವು ಮಾತ್ರ ಕಾವ್ಯರಚನೆಯನ್ನು ಮಾಡಲಾರರು. ೧೬. ಅತಿಪ್ರಯಾಸ ಪಟ್ಟು ಸೂಜಿಗೆ (ಗುಣಮಂ) ದಾರವನ್ನು ಪೋಣಿಸಿದರೆ (ತೀಕ್ಷ್ಣಮುಖಂ) ಮೊನಚಾದ ತುದಿಯುಳ್ಳ ಅದು ದಾರವನ್ನು ಹಿಂದೆ ಬಿಟ್ಟುಕೊಂಡು (ಗುಣಿಯಂ) ಬಟ್ಟೆಯನ್ನು ಚುಚ್ಚುತ್ತಿರುವುದು. ಹಾಗೆಯೇ (ತೀಕ್ಷ್ಣಮುಖಂ) ಕೆಟ್ಟಮೋರೆಯ ದುಷ್ಟನಿಗೆ ಸದ್ಗುಣಗಳನ್ನು ತಿಳಿಸಿದರೂ, ಅವನು ಅದನ್ನು ಹಿಂದೆ ತಳ್ಳಿ, ಗುಣವಂತರನ್ನೇ ಬಾಧಿಸುವನು.

---

೧-೧ ಬಲ್ಲ ಖಳಂ ತಾಂ (ಚ, ಜ) ; ಬಲ್ಲಂ ಖಳ ತಾಂ (ಗ, ತ) ೨ ಸೂಜಿ (ಗ, ತ)

ಅಜನಜಡನೆಂದು ನುಡಿವುದು
ಕುಜನತೆ ಜಡಜಾತಜಾತನೆಂತಜಡನವಂ
ಸುಜನವಿರೋಧಿಯನಜಡಂ
ಸೃಜಿಯಿಪನೆ ಪರೋಪತಾಪಫಲನಂ ಖಲನಂ ೧೭

ಇನಿವಣ್ಗಳಿರೆ ಬಿಸುಟ್ಟೊ
ಯ್ಯನೆ ವನಮಂ ಪೊಕ್ಕ ಕಾಕನೊಲ್ವ[1]ದು ಗಡ ಬೇ
ವಿನ ಪಣ್ಣಂ ಲೇಸು ಬಿ
ಟ್ಟೆನಿಸಂ[2] ಕೃತಿಯಲ್ಲಿ ದೋಷಮಂ ಖಲನೊಲ್ವಂ ೧೮

ಇಪಟಿಕೆಯ್ವಂ ಖಲನೆಂಬಿದಾಂ
ಮುಳಿಯೆಂ ಗುಣಗಣಮನಳಿಮಳಮಣಿದರ್ಪಣವೇಂ
ತೊಳಗದೆ ಬೆಳಗೆ ತದೀಯೋ
ಜ್ವಳತೆಗೆ ಕಾರಣಮಿದೆಂದು ತಿಳಿದುದಜಿಂದು ೧೯

ಖಲಬುದ್ಧಿಗೆ ಸತ್ಕಾವ್ಯದೊ
ಳಲರ್ದ ಗುಣಂ ದೋಷಮಾಗಿ ತೋರ್ಕುಂ ರವಿಯು

ಅದು ಅವನ ಸ್ವಭಾವವೇ. ೧೭. ಬ್ರಹ್ಮನನ್ನು (ಅಜಡಂ) ಮೂರ್ಖನಲ್ಲವೆನ್ನುವುದು ದೌರ್ಜನ್ಯವಾಗುವುದು. (ಜಡಜಾತಜಾತನ್) ನೀರಿನಲ್ಲಿ ಹುಟ್ಟಿದ ಕಮಲದಲ್ಲಿ ಉದ್ಭವಿಸಿದ ಬ್ರಹ್ಮನು (ಮೂರ್ಖನ ಮಗನ ಮಗನು) ಹೇಗೆತಾನೇ ಮೂರ್ಖನಾಗದೆ ಇರಬಲ್ಲನು ? ಆ ಬ್ರಹ್ಮನು ಮೂರ್ಖನಾದುದರಿಂದಲೇ ಅಲ್ಲವೇ ಸಜ್ಜನದ್ವೇಷಿಗಳಾದ ಮತ್ತು ಇತರರಿಗೆ ಕೇಡನ್ನು ಮಾಡುವುದೇ ತಮಗೊಂದು ಪ್ರಯೋಜನವೆಂದು ಭಾವಿಸಿರುವ ದುಷ್ಟರನ್ನು ಸೃಷ್ಟಿಸಿರುವುದು ! ೧೮. ತೋಟವನ್ನು ಪ್ರವೇಶಿಸಿದ ಕಾಗೆಯು ರುಚಿಕರವಾದ ಹಣ್ಣುಗಳಿದ್ದರೂ ಒಲ್ಲದೆ ಬೇವಿನಹಣ್ಣಿಗೇ ಆಶೆಪಡುವುದಿಲ್ಲವೇ ? ಅದೇ ರೀತಿಯಲ್ಲಿಯೇ ದುರ್ಜನನು ಕಾವ್ಯದಲ್ಲಿರುವ ಗುಣಾಂಶಗಳನ್ನು ಲೆಕ್ಕಿಸದೆ ಕಷ್ಟಪಟ್ಟಾದರೂ ದೋಷಗಳನ್ನೇ ಹುಡುಕುವನು. ೧೯. ಖಳನು ನನ್ನ ಕಾವ್ಯದ ಗುಣವನ್ನು ಹೀಯಾಳಿಸುವನೆಂದು ನನಗೆ ಕೋಪವೇನೂ ಇಲ್ಲ. ಏಕೆಂದರೆ,ರನ್ನಗನ್ನಡಿಯನ್ನು (ಬೂದಿಯಿಂದ) ಉಜ್ಜಿದಷ್ಟೂ ಅದರ ಪ್ರಕಾಶವು ಹೆಚ್ಚುತ್ತದೆಯೆಂಬುದು ನನಗೆ ಗೊತ್ತಿದೆ ! (ಖಳನು ಹೀಯಾಳಿಸಿದಷ್ಟೂ ನನ್ನ ಕಾವ್ಯಗುಣವು ಉಜ್ವಲವಾಗುತ್ತದೆ ಎಂದು ಅಭಿಪ್ರಾಯ) (ರಂ) ೨೦. ತನ್ನಲ್ಲಿಯೇ ದೃಷ್ಟಿದೋಷವನ್ನು ಹೊಂದಿರುವ ಗೂಗೆಯು

---

೧ ನೊಲ್ದು (ಗ, ಚ, ಜ, ತ,) ೨ ಟ್ಟನಿಸಂ (ಚ) ೩-೩ ಪಳಿ ಕೈಪುಂ ಖಳಗಂ (ಗ, ಚ, ಜ) ೩-೪ ಪಳಕ್ಕೈವಂ ಗುಣಗಣಮಂ । ಖಳನೆಂದಾಂ ಮುಳಿಯೆನ (ಯ, ಲ)

ಜ್ವಲರುಚಿ ಕೌಶಿಕದೃಷ್ಟಿಗೆ
ಸಲೆ ಮರ್ಬೆನಿಪಂತಿರಾತ್ಮದೋಷೋನ್ನತಿಯಿಂ ೨೦

ತಣಿವಣಮಿಲ್ಲನ್ಯರ ಗುಣ
ಗಣಮಂ ಸಲೆ [೧]ಸಲೆ ಪೊಗಳ್ವ ತೆಗಳ್ವ[೧] ಸುಜನನ ಖಲನು
ಲ್ಬಣರಸನೆಗಮಿಂತಿದು ಲ
ಕ್ಷಣಮಿರ್ವರ್ಗಂ ವಿಧಾತೃವಿಹಿತಂ ಜಗದೊಳ್ ೨೧

ಘನರಸಮಂ ಪದೆದೀಂಟುವ
ವಿನುತಂ ಚಾದಗೆ ಕುವಾರಿಯಂ ಕುಡಿವುದೆ ನೂ
ತನರಸವತ್ಕೃತಿಗೆಳಸುವ
ಮನುಜಂ ಮಱೆದಾದೊಡಲ್ಪಕೃತಿಗೆಳಸುವನೇ ೨೨

ಅಳಿಯಲರಂ[೨] ಗಿಳಿ ಪಣ್ಣಂ
ತಳಿರಂ ಪಿಕನೊಲ್ವ ತೆಱದೆ ಕುಜದೊಳ್ ಕೃತಿಯೊಳ್
ವಿಳಸಿತಪದಮುಮನರ್ಥಮ
ನಳಂಕೃತ[೩]ಪ್ರಹಿತಭಾವಮುಂ ಕೆಲರೊಲ್ವರ್ ೨೩

ಕಣ್ಣಿಗೆ ಪ್ರಜ್ವಲಿಸುತ್ತಿರುವ ಸೂರ್ಯಪ್ರಕಾಶವು ಕತ್ತಲೆನಿಸುವಂತೆ, ದುರ್ಜನನ ದೃಷ್ಟಿಗೆ ಸತ್ಕಾವ್ಯದಲ್ಲಿ ಬೆಳಗುತ್ತಿರುವ ಗುಣರಾಶಿಯು ದೋಷವಾಗಿಯೇ ತೋರುವುದು. ೨೧. ಇತರರ ಗುಣಗಳನ್ನು ಹೊಗಳುವ ಸಜ್ಜನರ ದೊಡ್ಡನಾಲಗೆಗೂ ಅವುಗಳನ್ನು ತೆಗಳುವ ದುರ್ಜನರ ನಾಲಗೆಗೂ ತೃಪ್ತಿಯೆಂಬುದೇ ಇಲ್ಲ ! ಅವರಿಬ್ಬರ ಲಕ್ಷಣವನ್ನು ಈ ರೀತಿಯಾಗಿ ಬ್ರಹ್ಮನು ಜಗತ್ತಿನಲ್ಲಿ ಗೊತ್ತುಪಡಿಸಿದ್ದಾನೆ ! (ರು) ೨೨. ಮೇಘಗಳ ಪರಿಶುದ್ಧವಾದ ನೀರನ್ನು ಮೆಚ್ಚಿ ಆಸ್ವಾದಿಸುವ ಚಾತಕಪಕ್ಷಿಯು ಕೊಳಚೆನೀರನ್ನು ಕುಡಿಯುವುದಿಲ್ಲ. ಹಾಗೆಯೇ ನವರಸಭರಿತವಾದ ವಿನೂತನ ಕಾವ್ಯವನ್ನು ಜನರು ಮೆಚ್ಚುವರೇ ಅಲ್ಲದೆ, ನೀರಸವಾದ ಕ್ಷುದ್ರಕಾವ್ಯವನ್ನು ಅಪೇಕ್ಷಿಸರು. ೨೩. ವೃಕ್ಷದಲ್ಲಿ ದುಂಬಿಗಳು ಹೂವನ್ನೂ, ಗಿಳಿಯು ಹಣ್ಣನ್ನೂ, ಕೋಕಿಲೆಯು ಚಿಗುರನ್ನೂ ಪ್ರೀತಿಸುವಂತೆ, ಒಂದು ಸತ್ಕಾವ್ಯದಲ್ಲಿ ಕೆಲವರು ಉಜ್ವಲವಾದ ಶಬ್ದಜೋಡಣೆಯನ್ನೂ, ಇನ್ನು ಕೆಲವರು (ವಾಚ್ಯ, ವ್ಯಂಗ್ಯ, ಧ್ವನ್ಯಾದಿ) ಅರ್ಥಸ್ವಾರಸ್ಯವನ್ನೂ, ಮತ್ತೆ ಕೆಲವರು ಅಲಂಕೃತವಾದ

---

೧-೧ಪೊಗಳೆ ತೆಗಳೆ (ಯ) ೨ ರಲಂ (ಜ) ೩ ಕೃತಿ (ಯ, ಲ)

ರಸವತ್ಕಾವ್ಯದ ರಸಮಂ
ರಸಿಕರ್ಕಳ್ ಬಲ್ಲ ತೆಱದಿನಱಿವರೆ ಗಾಂಪರ್
ಪಸಿ[1] ಜೊನ್ನದಿನಿದನಱಿವುವೆ
ಮಿಸುಪ ಚಕೋರಂಗಳಂತಿರುೞಿದ ಖಗಂಗಳ್ ೨೪

ಪ್ರಣುತಗುಣನಿಧಿಗಳತಿಲಾ
ಕ್ಷಣಿಕರ್ ಮೃಡಭಕ್ತಿಭಾವಿತರ್ ಸದ್ವಿಬುಧರ್
ಪ್ರಣಯದಿನೆನ್ನೀ ಕಬ್ಬಮ
ನಣಯುರಮಾಲಿಸುಗೆ ತಿರ್ದುಗೋವ್ವುಗೆ[2] ಸತತಂ ೨೫

ಚಂಪಕ ಇದು ಪೊಸರೀತಿ ನೋಡಿದು ನವೀನಮಲಂಕೃತಿ ನವ್ಯಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ ೨೬

ಉತ್ಪಲ ಜೇಂಗೊಡದಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಂಪನಾ
ಳ್ದಿಂಗಡಲಂತೆ ಪಣ್ತಸೆವ ಮಾಮರದಂ[3]ತೆ ಪಯೋಜದಂತೆ[3] ಬೆ

ಹಿತಕರ ಭಾವಗಳನ್ನೂ ಮೆಚ್ಚಿ ಅಂಗೀಕರಿಸುವರು. ೨೪. ಚಂದ್ರನ ಬೆಳುದಿಂಗಳ ಸವಿಯನ್ನು ಶ್ರೇಷ್ಠವಾದ ಚಕೋರಪಕ್ಷಿಗಳು ಆನಂದಿಸುವಂತೆ ಇತರ ಪಕ್ಷಿಗಳಿಗೆ ಹೇಗೆ ಸಾಧ್ಯವಿಲ್ಲವೋ, ಅದೇ ರೀತಿಯಲ್ಲಿ ನವರಸ ನಿರ್ಭರವಾದ ಕಾವ್ಯದ ರಸವಿಶೇಷಗಳನ್ನು ಅರಿತು ಆನಂದಿಸಲು ರಸಿಕರಿಗೆ ಸಾಧ್ಯವಾಗುವುದೇ ಹೊರತು, ಮೂಢರಿಗೆ ಸಾಧ್ಯವಾಗದು. ೨೫. ಗುಣಗ್ರಹಣಶೀಲರೆಂದು ಕೀರ್ತಿತರಾದವರೂ, ಕಾವ್ಯಲಕ್ಷಣ ಜ್ಞಾನಸಂಪನ್ನರೂ, ಶಿವಭಕ್ತಿಯಿಂದ ಪರಿಪಕ್ವವಾದವರೂ ಆದ ಉತ್ತಮ ವಿದ್ವಾಂಸರು ಪ್ರೀತಿಯಿಂದ ನನ್ನ ಈ ಕಾವ್ಯವನ್ನು ಯಾವಾಗಲೂ ಶ್ರವಣಮಾಡಲಿ; (ದೋಷಗಳೇನಾದರೂ ಇರುವುದಾದರೆ) ತಿದ್ದಲಿ, ಹಾಗೆಯೇ ಮೆಚ್ಚಲಿ. ೨೬. ಕಾವ್ಯಜ್ಞರು ಈ ನನ್ನ ಮನೋಹರವಾದ ಕೃತಿಯನ್ನು ಮೆಚ್ಚಿ, "ಇದು ಹೊಸ ರೀತಿಯದು, ಅಲಂಕಾರಗಳು ಹೊಸ ಬಗೆಯವು, ಇವು ನೂತನ ಭಾವಗಳು, ಇದು ಹೊಸದಾದ ದೇಸಿ ಮತ್ತು ಮಾರ್ಗಗಳು, ಇದು ರಸಘಟ್ಟ, ಹೊಸತಲ್ಲವೆ, ಪದರಚನಾವಿಲಾಸವೂ ಹೊಸ ಪರಿಯಾದುದು. ಇದು ಅಪೂರ್ವವಾದ ಕಾವ್ಯ"ವೆಂದು ಪ್ರೀತಿಯಿಂದ ಪ್ರಶಂಸಿಸುವ ರೀತಿಯಲ್ಲಿ ಸೊಗಸಾದ ಈ ಕಾವ್ಯವನ್ನು ರಚಿಸುವೆನು. ೨೭. ಷಡಕ್ಷರದೇವನಿಂದ ರಚಿತವಾದ ಈ ಕಾವ್ಯವು ಜೇನು ತುಂಬಿಟ್ಟಿರುವ ಕೊಡದಂತೆ (ರಸ, ಮಾಧುರ್ಯಪೂರ್ಣವಾಗಿಯೂ), ದುಂಬಿಗಳ ಝೇಂಕಾರದಂತೆ, (ಸುಶ್ರಾವ್ಯವಾಗಿಯೂ) ಉಕ್ಕೇರುತ್ತಿರುವ ಕ್ಷೀರಸಾಗರದಂತೆ (ಕೀರ್ತ್ಯ

---

೧ ಪೊಸ (ಯ, ಲ) ೨ ಗೋದುಗೆ (ಯ, ರ) ೩-೩ ತೆಳಗಾಳಿಯಂತೆ (ಯ, ಲ)

ಳ್ದಿಂಗಳ ಸೊಂಪಿನಂತೆ ಸುಸಿಲಾಸೆಯ ನಲ್ಲಳ ನೋಟದಂತೆ ಚಿ
ತ್ತಂಗೊಳಲಾರ್ಪುದೀ ಕೃತಿ ಷಡಕ್ಷರಿದೇವಕೃತಂ ರಸಜ್ಞರಾ ೨೭

ಮತ್ತೇಭ ಘನಕಾಂತಾಸ್ತನಮುಂ ಕುಲೀನಜನಮುಂ ಸದ್ವೃತ್ತಶೋಭಾವಹಂ
ವನಮುಂ ಮಾಧವನಂ ಪ್ರಕೀರ್ಣಸುಮನೋಜಾತೋತ್ಸವಂ ಕಂಜಕಾ
ನನಮುಂ ಭೂವರನಂ ರಸಾತಿಶಯಸೌಭಾಗ್ಯೋದಯಂ ಪೋಲುತ್ತೆ ಪೆ
ಪಿನಲಂಪಿಂದೆಸೆಗುಂ ಪ್ರಬಂಧಮಿದು ಸರ್ವೋರ್ವೀನುತಂ ಸಂತತಂ ೨೮

ಉತ್ಪಲ ಮಾಣಿಸಿ ಕಂಬಳಾಶ್ವತರ ಗಾನಮನಂತಿರವೇೞ್ದು ವಾಣಿಯಾ
ವೀಣೆಯ ನುಣ್ಪುವೆತ್ತ ಸರಮಂ ಕಡೆಗಣ್ಚಿ ನಿಜಾಗ್ರದೇಶದೊಳ್
ಜಾಣೆಸೆದಿರ್ಪಿನಂ ಪದೆದು ಪಾಡುವ ಗಂದರರಂ ಕಡಂಗಿ ಕ
ಲ್ಯಾಣಿಯ ಕಾಂತನಾಲಿಸುಗೆ ಸದ್ರಸಮೊಪ್ಪುವ ಮತ್ಪ್ರಬಂಧಮಂ ೨೯

ತ್ಸಾಹದಿಂದ ಕೂಡಿಯೂ), ಫಲಭರಿತವಾಗಿ ಮೆರೆಯುತ್ತಿರುವ ಮಾವಿನ ಮರದಂತೆ (ಸಫಲತೆಯಿಂದ ಕೂಡಿಯೂ), ಕಮಲಪುಷ್ಪದಂತೆ (ಪರಿಮಳಪೂರಿತವಾಗಿಯೂ), ಬೆಳ್ದಿಂಗಳಂತೆ ಹಿತಕರವಾಗಿಯೂ, ಪ್ರಣಯಭಾವದಿಂದ ಕೂಡಿದ ಪ್ರಿಯಳ ನೋಟದಂತೆ (ಅಪೇಕ್ಷಣೀಯವಾಗಿಯೂ), ರಸಜ್ಞರ ಚಿತ್ತಾಕರ್ಷಕವಾಗಿರುವುದು. ೨೮. ಜಗದ್ವಿಶ್ರುತವಾದ ನನ್ನ ಈ ಕಾವ್ಯವು ಕಾಂತಾಸ್ತನದಂತೆಯೂ ಸತ್ಕುಲಪ್ರಸೂತ ಜನರಂತೆಯೂ ಸದ್ವೃತ್ತಶೋಭಾವಹವಾಗಿದೆ(ಕಾವ್ಯ = ಮತ್ತೇಭವಿಕ್ರೀಡಿತಾದಿ ವೃತ್ತಗಳಿಂದ ಕೂಡಿದೆ. ಸ್ತನ = ಚೆನ್ನಾಗಿ ದುಂಡಗೆ ಶೋಭಿಸುತ್ತದೆ. ಕುಲೀನಜನ = ಒಳ್ಳೆಯ ನಡತೆಯಿಂದ ಪ್ರಕಾಶಿಸುತ್ತದೆ). ವನದಂತೆಯೂ ಮಾಧವನಂತೆಯೂ ಪ್ರಕೀರ್ಣ ಸುಮನೋಜಾತೋತ್ಸವವಾಗಿದೆ (ಕಾವ್ಯ = ವಿವಿಧ ವಿದ್ವಾಂಸರ ಮನಸ್ಸಿಗೆ ಆನಂದಕರ. ವನ = ವಿವಿಧ ಪುಷ್ಪಗಳ ಉದ್ಯಮದಿಂದ ಹರ್ಷಕರ. ಮಾಧವ = ಮನ್ಮಥಜನ್ಮದಿಂದ ಸಂತುಷ್ಟ) ಕಮಲವನದಂತೆಯೂ ರಾಜನಂತೆಯೂ ರಸಾತಿಶಯಸೌಭಾಗ್ಯೋದಯವಾಗಿದೆ. (ಕಾವ್ಯ = ಉತ್ತಮ ರಸಗಳಿಗೆ ಆಕರ. ಕಮಲವನ = ಮಕರಂದರಸದ ಅತಿಶಯದಿಂದ ಸೌಂದರ್ಯಶಾಲಿ. ರಾಜ = (ರಸಾ)ಭೂಮಿಗೆ ಹೆಚ್ಚಿನ ಭಾಗ್ಯವನ್ನುಂಟುಮಾಡತಕ್ಕವನು). ಹೀಗೆ ಈ ಕಾವ್ಯವು ಕಾಂತಾಸ್ತನಾದಿಗಳನ್ನು ಹೋಲುತ್ತ ಹೆಚ್ಚಿದ ಸೊಗಸಿನಿಂದ ಪ್ರಕಾಶಿಸುತ್ತಿದೆ (ರಂ) ೨೯. ಪಾರ್ವತೀಪತಿಯಾದ ಶಿವನು (ಸಾಮಗಾನ ಮಾಡುತ್ತಿರುವ) ಕಂಬಳ, ಅಶ್ವತರೆಂಬುವರ ಗಾನವನ್ನು ಸ್ವಲ್ಪ ನಿಲ್ಲಿಸಿ ಎಂದು ತಡೆದು, ಶಾರದೆಯು ನುಡಿಸುತ್ತಿದ್ದ ವೀಣೆಯ ಇಂಪಾದ ನಾದವನ್ನು ಲೆಕ್ಕಿಸದೆ, ತನ್ನ ಸಮ್ಮುಖದಲ್ಲಿ ಕುಶಲತೆಯಿಂದಲೂ ಪ್ರೀತಿಯಿಂದಲೂ ಹಾಡುತ್ತಿದ್ದ ಗಂಧರ್ವರನ್ನು ಕೋಪದಿಂದ ಧಿಕ್ಕರಿಸಿ ಉತ್ಕೃಷ್ಟವಾದ ನವರಸಗಳಿಂದ ಕೂಡಿದ ನನ್ನ ಕಾವ್ಯವನ್ನು ಶ್ರವಣಮಾಡಲಿ.

ಮಹಾಸ್ರಗ್ಧರೆ ಜ್ವಲದೌರ್ವಜ್ವಾಲೆ ಫಾಲಾಂಬಕಶಿಖಿಯಹಿ ಭೂಷಾಹಿ ಡಿಂಡೀರವಾ ಪಾಂ
ಸುಲಸದ್ಭಸ್ಮಂ ಪ್ರವಾಳೋತ್ಕರಮರುಣಜಟಾಮಂಡಲಂ ವಿದ್ಯುದುದ್ಯ
ಜ್ವಲದಂ ವ್ಯಾಘ್ರಾಜಿನಂ ರಾಜಿಸೆ ಭೃತಭುವನಂ ಭೂರಿಸತ್ವಾಶ್ರಯಂ ನಿ
ಸ್ತುಲ ಗಾಂಭೀರ್ಯಂ ಕರಂ ಕಣ್ಗೊಳಿಸಿದನಭವಾಕಾರಮುದ್ರಂ ಸಮುದ್ರಂ ೩೦

ಮತ್ತೇಭ ಕುಡಿದಂ ಕುಂಭಜನೆನ್ನನಾತ್ಮವಧುವೊಳ್ ಕೂಡಿರ್ದನೆಂದಿಂದಿರಂ
ಕಡೆದಂ ತನ್ನಹಿತಾದ್ರಿಗಾಂ ಶರಣಮೆಂದಾ ರಾಘವಂ ಕಟ್ಟಿ ಮೇಣ್
ತಡೆದಂ ಕಾದೊಳಕಿಯ್ದನೆಂದು ಪಗೆಯಂ ಪಾಲಾಹಲಂಗೊಟ್ಟೊಡಂ
ಮೃಡನೊರ್ವಂ ಮುಳಿಯಂ ಗಡೆಂದುಲಿವವೋಲುದ್ಘೋಷಿಕುಂ ಸಾಗರಂ ೩೧

ಮಹಾಸ್ರಗ್ಧರೆ ಮಗನೊರ್ವಂ ಪುಟ್ಟಿ ದೋಷಾಕರನೆನಿಸಿದನೆನ್ನೊಳ್ಮಗಳ್ ಪಾಱುಗೆಯ್ತಂ
ಮಿಗೆ ನಿಚ್ಚಂ ಪಂಕಜಾತಾಶ್ರಿತೆಯೆನಿಸಿ ಕುಭೃದ್ವರ್ಗದೊಳ್ ಕ್ರೀಡಿಪಳ್ ನಾ

೩೦. ಪ್ರಜ್ವಲಿಸುತ್ತಿರುವ ಬಡಬಾಗ್ನಿಯೇ ಹಣೆಗಣ್ಣಿನ ಬೆಂಕಿ, ಸರ್ಪಗಳೇ ಆಭರಣಗಳು,[1] ನೊರೆಯೇ ಅತಿಶುಭ್ರವಾದ ಭಸ್ಮ, ಹವಳಗಳ ಬಳ್ಳಿಗಳೇ ಕೆಂಜಡೆಗಳು, ಮಿಂಚುಗಳಿಂದ ಪ್ರಕಾಶಿತವಾದ ಮೇಘಗಳೇ (ಉಟ್ಟ) ಹುಲಿಯ ಚರ್ಮವೆನ್ನುವಂತೆ ಶೋಭಿಸಲು, (ಭೃತಭುವನಂ) ಜಲರಾಶಿಯಿಂದ ಕೂಡಿ, (ಶಿವ=ಜಗತ್ತನ್ನು ಧರಿಸಿದವನು) ಮಹಾಸಾಮರ್ಥ್ಯವುಳ್ಳವನಾಗಿ, ಅಸದೃಶ ಗಾಂಭೀರ್ಯದಿಂದ ಕೂಡಿ ಸಮುದ್ರವು ಶಿವಸ್ವರೂಪ ಲಕ್ಷಣಗಳಿಂದ ಕೂಡಿದ್ದು ಮನೋಹರವಾಗಿ ಕಂಗೊಳಿಸಿತು. ೩೧. "ಅಗಸ್ತ್ಯ ಋಷಿಯು ತನ್ನ ಹೆಂಡತಿಯೊಡನೆ[2] (ನಾನು) ಕೂಡಿದ್ದೆನೆಂದು ನನ್ನನ್ನು ಕುಡಿದನು. ತನ್ನ ಶತ್ರುವಾದ ಪರ್ವತಕ್ಕೆ (ಮೈನಾಕ) ನಾನು ಆಶ್ರಯವಿತ್ತೆನೆಂದು ಇಂದ್ರನು ವಜ್ರಾಯುಧದಿಂದ ಹೊಡೆದನು. ಶತ್ರುವಾದ ರಾವಣನನ್ನು ರಕ್ಷಿಸಿ ಅಡಗಿಸಿಟ್ಟಿರುವೆನೆಂದು ಶ್ರೀರಾಮಚಂದ್ರನು (ಸೇತುವೆಯನ್ನು) ಕಟ್ಟಿ ಬಂಧಿಸಿದನು. ಆದರೆ ನಾನು ಹಾಲಾಹಲ ವಿಷವನ್ನು ಕೊಟ್ಟರೂ ಸಹ ಶಿವನೊಬ್ಬನೇ ಕೋಪಿಸಿಕೊಳ್ಳಲಿಲ್ಲ"ವೆಂದು ಘೋಷಿಸುತ್ತಿರುವಂತೆ ಸಮುದ್ರವು ಕಾಣುವುದು. ೩೨. "ಮಗನೊಬ್ಬ (ಚಂದ್ರ)ನು ಹುಟ್ಟಿ ದೋಷಿಯೆನಿಸಿದ, ನನ್ನ ಒಬ್ಬ ಮಗಳು (ಲಕ್ಷ್ಮಿ) ಓಡಿಹೋಗುವ ಸ್ವಭಾವದಿಂದ ಯಾವಾಗಲೂ ಪಾಪಿಗಳನ್ನು ಕೂಡಿಕೊಂಡು, ದುಷ್ಟರನ್ನು ಪಾಲಿಸುವವರ ಗುಂಪಿನಲ್ಲಿ ನಲಿಯುತ್ತಿರುವಳು. ದೇವತೆಗಳ ಸಮೂಹವು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಐರಾವತ

---

೧ ನೆನ್ನೊರ್ಮ (ಯ, ಲ)

[1] ಮೂಲದಲ್ಲಿ 'ಭೂಷಾಹಿಡಿಂಡಿರ' ಎಂಬುದನ್ನು 'ಭೂಷಾಳಿಡಿಂಡೀರ' ಎಂದು ತಿದ್ದಿದೆ. (ರಂ)

[2] ಅಗಸ್ತ್ಯರು ಗೋದಾವರೀ ನದಿಯ ತೀರದಲ್ಲಿದ್ದರು. ಸಮುದ್ರವನ್ನು ಸೇರುವ ಗೋದಾವರಿಯು ಅಗಸ್ತ್ಯರ ಪತ್ನಿಯೆಂಬ ಕವಿಕಲ್ಪನೆಯಿಂದ ಈ ಮಾತನ್ನು ಹೇಳಲಾಗಿದೆ (ರಂ).

ಕಿಗಣಂ ಸರ್ವಸ್ವಮುಂ ಪೋಣ್ ಕವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾ
ತ್ಮಗತೌರ್ವಾಗ್ನಿಚ್ಛಲಂಬೆತ್ತಟಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ ೩೨

ಚಂಪಕ ಪ್ರತಿಗಜಮೆಂದು ಕಾಗಿಮುರ್ಗಿಲನೀಡಿಜೀವಾನೆಗಳಿಂ ಪಯೋದಗ
ರ್ಜಿತಕಗಿರಿದೋಡುವಂಚೆಗಳ ಬಾಯ್ಗಳಿನೊಕ್ಕಮೃತಂಗಳಂ ತುಡುಂ
ಕುತೆ ಮಿಗೆ ನುಂಗುವಂಬುಚರದಿಂ ಬಡಬಾನಲನೆಂದು ವಿದ್ರುಮ
ಪ್ರತತಿಯನಿರ್ಕಿಲಕ್ಕೊಳೆವ ನಕ್ರದಿನದ್ಭುತಮಾಯ್ತು ಸಾಗರಂ ೩೩

ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನವಿದ್ರುಮೋ
ತ್ಕರದ ಪೊದಟ್ಕೆ ಶುಕ್ತಿಜದಳುರ್ಕೆ ಸರೋಜದ ಗುಣ್ಪುಳತೀರಭಾ
ಸುರತರತಾಳನಂದನದಲಂಪು ಪುಟಿಲ್ಗಳಡರ್ಪು ಚೆಲ್ವ ಬಿ
ತ್ತರಿಸೆ ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ ೩೪

ಮತ್ತು ಉಚ್ಚೈಃಶ್ರವಸ್ ಮೊದಲಾದ ಸಮಸ್ತ ವಸ್ತುಗಳನ್ನೂ ದೋಚಿದರು. ಅಯ್ಯೋ, ಪರಾಭವಕ್ಕೆ ಗುರಿಯಾದೆನಲ್ಲಾ" ಎಂದು ತನ್ನಲ್ಲಿ ಅಡಗಿರುವ ದಾವಾಗ್ನಿಯು ಹೊಟ್ಟೆಯಲ್ಲುರಿಯುತ್ತಿರುವ ಸಂಕಟವನ್ನು ಸೂಚಿಸುತ್ತಲಿರುವಂತೆ ಸಮುದ್ರ ತೋರುತ್ತಿರುವುದು.[1] ೩೩. ನೀರಾನೆಗಳು ನೀಲಮೇಘಗಳನ್ನು ತಮ್ಮ ವಿರೋಧಿ ಗಜಗಳೆಂದು ತಿಳಿದು ಅವುಗಳ ಮೇಲೆರಗುತ್ತಿದ್ದುವು. ಮೇಘಗರ್ಜನೆಗೆ ಹೆದರಿ ಹಾರಿಹೋಗುತ್ತಿರುವ ಹಂಸ ಪಕ್ಷಿಗಳ ಬಾಯಿಂದ ಬೀಳುತ್ತಿದ್ದ ಕಮಲರಸವನ್ನು ಜಲಚರಗಳು ನುಂಗುತ್ತಿದ್ದುವು. ಹವಳಗಳ ಸಮೂಹವನ್ನು ಬಡಬಾನಲವೆಂದು ಶಂಕಿಸಿ, ತನ್ನೆರಡು ಪಕ್ಕಗಳಿಗೆ ಅದನ್ನು ತಳ್ಳುವ ಮೊಸಳೆಗಳಿಂದ ಸಮುದ್ರವು ಅದ್ಭುತವಾಗಿ ಕಾಣಿಸಿತು. ೩೪. ನುಗ್ಗುತ್ತಿರುವ ಹಡಗುಗಳು, ದೊಡ್ಡ ಅಲೆಗಳ ಸಾಲುಗಳು ಸಮುದ್ರದಲ್ಲಿ ಕಂಗೊಳಿಸುತ್ತಿದ್ದುವು. ಹೊಸದಾಗಿರುವ ಹವಳಬಳ್ಳಿಗಳ ಪ್ರಕಾಶದಿಂದಲೂ, ಚಿಪ್ಪಿನಿಂದ ಹುಟ್ಟಿರುವ ಮುತ್ತುಗಳ ರಾಶಿಯಿಂದಲೂ, ಕಮಲಗಳಿಂದಲೂ ತೀರಪ್ರದೇಶವು ಸೊಗಸಾಗಿದ್ದಿತು. ದಡದಲ್ಲಿ ಕಾಲವೃಕ್ಷದ ಸಾಲುಗಳು ಕಂಗೊಳಿಸುತ್ತಿದ್ದುವು. ನಿಬಿಡವಾಗಿ, ಸಹಜ ಸಮೃದ್ಧಿಯ

---

೧ ಕ (ಯ) ೨ ಕೊಗೆ (ಚ) ೩ ಮೃಣಾಲಮಂ (ಯ) ೪ ನುಣ್ಪು (ರ, ವ)

1 ದೋಷಾಕರಂ–ನಿಶಾಕರಂ–ಚಂದ್ರ; ದೋಷಗಳಿಗೆ ಆಶ್ರಯನಾದವನು. ಪಂಕಜಾಶ್ರಿತೆ–ತಾವರೆಯಲ್ಲಿ ವಾಸಿಸುವಳು; ಪಾಪಿಗಳನ್ನು ಕೂಡಿದವಳು. ಕುಭೃದ್ವರ್ಗ–ದುಷ್ಟರನ್ನು ಪಾಲಿಸುವ ಜನ; ರಾಜರ ಸಮೂಹ.

ಪರಿವೃತಮಾದ ತದ್ವನಧಿ ವಾರಿಸಮುನ್ಮಿಳಿತಾಲವಾಲದಂ
ತಿರೆ ಮಕರಂದಪೂರಮೆನೆ ನಿರ್ಝರಮಲ್ಲೆಜಗಿರ್ದ ವಾರ್ಧರೋ
ತ್ಕರಮಳಿರಾಜಿಯಂತೆಸೆಯೆ ಪೂತಲರ್ದೊಪ್ಪುವ ಕರ್ಣಿಕಾರಭಾ
ಸುರನಗದಂತೆ ಕಣ್ಗೆನಿದನಾಳ್ದುದು ಭೂರಿಸುವರ್ಣಭೂಧರಂ ೩೫

ನಿಶಿತವಿಷಾಣದಿಂ ಮೃಡವೃಷಾಧಿಪನೀಡಿಜಿದೆತ್ತ ತತ್‌ಕ್ಷತಗಿ
ಪ್ರಸರಮೆ ತಪ್ಪಲಲ್ಲಿ ಲಿಪಿಯಂತಿರೆ ವಿಶ್ವಕಧೀಶನೊರ್ವನೆ
ನಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನ
ಲ್ಮಿಸುನಿಯ ಕಂಬದಂತೆಸೆದುದಾ ಗಿರಿ ದೇವನದೀಮಿಳತ್ಪಟಂ ೩೬

ಮತ್ತೇಭ ಮರಮೆಲ್ಲಂ ಸುರಪಾದಪಂ ಮಿಸುಪ ಕಲ್ಲೆಲ್ಲಂ ಮಣಿಶ್ರೇಣಿ ನಿ
ರ್ಝರಮೆಲ್ಲಂ ಸುಧೆ ಧೇನುವೆಲ್ಲಮನಿಶಂ ಸ್ವರ್ಧೇನುವೃಂದಂ ವನೇ
ಚರರೆಲ್ಲರ್ ಖಚರರ್ ಲತಾಪ್ರತತಿಯೆಲ್ಲಂ ಕಲ್ಪವಲ್ಲೀಕುಲಂ
ಪಿರಿದಿಂತೊಪ್ಪುಗುಮೆಂದೊಡಾ ಗಿರಿಯ ಪೆಂಪಂ ಬಣ್ಣಿಸಲ್ ಬರ್ಕುಮೇ ೩೭

ಗುಣದಿಂದ ಕೂಡಿ ಸಮುದ್ರವು ಕಂಗೊಳಿಸಿತು. ೩೫. ಮೇರುಪರ್ವತವು ಪ್ರಫುಲವಾದ ಪುಷ್ಪಗಳಿಂದ ಶೋಭಿಸುವ ಬೆಟ್ಟದತಾವರೆಯ ಮರದಂತೆ ಕಣ್ಣುಗಳಿಗೆ ಸಂತೋಷ ವನ್ನುಂಟುಮಾಡುತ್ತಲಿದ್ದಿತು. ಆ ಮೇರುಪರ್ವತಕ್ಕೆ ಬಳಸಿದ ಸಮುದ್ರದ ಜಲರಾಶಿಯೇ ಪಾತಿಯಂತೆಯೂ, ಬಂಡೆಗಳಿಂದ ಧುಮುಕುತ್ತಿದ್ದ ತೊರೆಗಳೇ ಮಕರಂದದ ಹೊನಲಿ ನಂತೆಯೂ, (ಪರ್ವತದ ಮೇಲೆ) ಇಳಿದುಬಿದ್ದಂತಿದ್ದ ಮೋಡಗಳೇ ದುಂಬಿಗಳಂತೆಯೂ ಕಾಣಿಸುತ್ತಿದ್ದುವು. ೩೬. ಶಿವನ ನಂದೀಶ್ವರನು ಹರಿತವಾದ ಕೊಂಬುಗಳಿಂದ (ಆ ಪರ್ವತವನ್ನು) ತಿವಿದು ಕಚ್ಚುಗಳುಂಟುಮಾಡಿದ್ದ ಪ್ರದೇಶವೆಲ್ಲವೂ, ಬಡಗಿಗಳು ತಪ್ಪಲು ಗಳಲ್ಲಿ, ಜಗತ್ತಿಗೆ ಪಾರ್ವತೀಪತಿಯೇ ಏಕಮಾತ್ರ ಪ್ರಭುವೆಂದು ಆಜ್ಞಾಶಾಸನವನ್ನು ಬರೆದಿಟ್ಟ ಬರಹದಂತಿದ್ದಿತು. ಮೇರುಪರ್ವತವು ಒಳ್ಳೆಯ ಬಂಗಾರದ ಶಾಸನ ಸ್ತಂಭದಂತೆ ಕಂಗೊಳಿಸಿತು. ದೇವಗಂಗೆಯು ಅದಕ್ಕೆ ಸೇರಿದ್ದ ಧ್ವಜಪಟದಂತೆ ಶೋಭಿಸಿತು. ೩೭. ಮರಗಳೆಲ್ಲವೂ ಕಲ್ಪವೃಕ್ಷಗಳು, ಥಳಥಳಿಸುವ ಕಲ್ಲುಗಳೆಲ್ಲವೂ ರತ್ನ ರಾಶಿಗಳು, ಧುಮುಕುತ್ತಿರುವ ತೊರೆಗಳೆಲ್ಲ ಅಮೃತಪ್ರವಾಹಗಳು, ದನಗಳೆಲ್ಲವೂ ಕಾಮಧೇನುಗಳ ಗುಂಪುಗಳು, ಅರಣ್ಯಗಳಲ್ಲಿ ಓಡಾಡುವವರೆಲ್ಲ ಖಚರರು, ಬಳ್ಳಿಗಳ ಸಮೂಹವೆಲ್ಲವೂ ಕಲ್ಪಲತೆಗಳ ಮೊತ್ತವು. ಈ ರೀತಿಯ ವೈಭವವು ಆ ಪರ್ವತಕ್ಕೆ

---

೧ ತದ್ವತ (ರ) ೨–೨ ನೇ । ನಿಸದ (ಯ) ೩ ನೆಲ್ಲಂ (ಯ)

ಚಂಪಕ ಪೊಳೆವ ಹರಿನ್ಮಣಿದ್ಯುತಿಯನರ್ಕನ ವಾಜಿ ಕಱುಕೆಗೆತ್ತು ಸಾ
ರ್ದೆಳಸುಗುಮಿಂದ್ರನೀಲರುಚಿಯಂ ಪೊಸಕತ್ತಲೆಗೆತ್ತು ತಳ್ತ ಬಾಂ
ಬೊಟೆಯ ರಥಾಂಗಯುಗ್ಮಮಗಿದಾಗಳೆ ಬಿರ್ಚುಗುಮಲ್ಲಿಯುತ್ಪಳಾ
ವಳಿ ತಿಳಿಜೊನ್ನಮೆಂದಲರ್ಗುಮಾ ನಗದಿಂದುಮಣಿಪ್ರಕಾಶಮಂ ೩೮

ಮಿಗದೇರನ ಮಿಗಮಲ್ಲಿಯ
ಮಿಗಮಗೆಯ ರವಕ್ಕೆ ಪೆಅರ್ದು ನೋಟ್ಪಂದಮದೇಂ
ಸೊಗಯಿಸಿಮುದೊ ಸಮಿನೋಟದ
ಬಗೆಯಂ ಖಚರಾಬಲಾಳಿಗುಪದೇಶಿಪವೋಲ್ ೩೯

ಚಂಪಕ ಪೊಸಸುಸಿಲೊಳ್ ಮನೋರಮಣನಿಟ್ಟ ನಖಕ್ಷತಂ ಕುಚಾಗ್ರದೊಳ್
ಮಿಸುಪ ಸೆಱಂಗನೋಸರಿಸಿ ನೇಹದೊಳೀಕ್ಷಿಪ ಮುಗ್ಧೆ ಮಿಂಚೆಗಿ ಮಿಂ
ಚಸವಸದಿಂ ಮಿಗಿಲ್ ಪದೆದು ನೋಟ್ಪುದಿದೆಂದು ಮುಸುಂಕಿ ಮೇಲುದಂ
ಮಸಗಿದ ಲಜ್ಜೆಯಿಂದೆಱಗಿದಳ್ ಕರದಿಂ ತಿರುಪುತ್ತೆ ಹಾರಮಂ ೪೦

ಸಹಜವೆನ್ನುವಾಗ, ಅದರ ಅಗ್ಗಳಿಕೆಯನ್ನು ವರ್ಣಿಸಲು ಸಾಧ್ಯವೇ ? ೩೮. ಮೇರು ಪರ್ವತದಲ್ಲಿ ಹೊಳೆಯುತ್ತಿರುವ ಪಚ್ಚೆಮಣಿಗಳ ಕಾಂತಿಯನ್ನು ಸೂರ್ಯನ (ರಥಕ್ಕೆ ಹೂಡಿರುವ) ಕುದುರೆಗಳು ಗರಿಕೆಯ ಹುಲ್ಲೆಂದು ಬಗೆದು ಸಮೀಪಕ್ಕೆ ಬಂದು ಮೇಯಲು ಪ್ರಯತ್ನಿಸುವುದು. ಆಕಾಶಗಂಗೆಯಲ್ಲಿನ ಚಕ್ರವಾಕಪಕ್ಷಿಗಳು ಇಂದ್ರನೀಲಮಣಿಯ ಕಾಂತಿಯನ್ನು ಆವರಿಸುತ್ತಿರುವ ಹೊಸಕತ್ತಲೆಯೆಂದು ತಿಳಿದು ಆಕ್ಷಣವೇ ಹೆದರಿ ಅಗಲುವುವು. ಆ ಬೆಟ್ಟದಲ್ಲಿರುವ ಚಂದ್ರಕಾಂತಶಿಲೆಯ ಕಾಂತಿಯನ್ನು ಬೆಳುದಿಂಗಳೆಂದು ಭಾವಿಸಿ ನೈದಿಲೆಗಳು ಅರಳುವುವು. ೩೯. ಆ ಪರ್ವತದಲ್ಲಿ ವಾಯುದೇವನ ವಾಹನ ವಾದ ಜಿಂಕೆಯು ಹುಲಿಯ ಗರ್ಜನೆಗೆ ಹೆದರಿ ನೋಡುವ ರೀತಿಯು, ಪ್ರಿಯರನ್ನು (ಪ್ರಣಯಭಾವದಿಂದ ಕೂಡಿ) ನೋಡುವ ರೀತಿಯನ್ನು ಖಚರಸ್ತ್ರೀಯರಿಗೆ ಬೋಧಿಸು ವಂತೆ ಕಂಗೊಳಿಸುತ್ತಿತ್ತು. ೪೦. ನವಸಂಗಮದಲ್ಲಿ ಪ್ರಿಯಕರನು ಮೊಲೆಗಳ ಮೇಲೆ ತನ್ನ ಉಗುರಿನಿಂದ ಮಾಡಿದ್ದ ಗಾಯಗಳು ಎದ್ದು ಕಾಣುತ್ತಿದ್ದುವು. ಅವುಗಳನ್ನು ತನ್ನ ಸೆರಗನ್ನು ಪಕ್ಕಕ್ಕೆ ಸರಿಸಿ, ಪ್ರೀತಿಯಿಂದ, ಮುಗ್ಧಸ್ತ್ರೀಯು ನೋಡುತ್ತಿದ್ದಳು. ಆಗ ಮಿಂಚು ಬೆಳಗಲು, ಮೇಘಗಳು ನೋಡಲಪೇಕ್ಷಿಸುವುದೆಂದು ಆತುರವಾಗಿ ಸೆರಗನ್ನು ಮುಚ್ಚಿಕೊಳ್ಳುತ್ತಾ, ಲಜ್ಜೆಯಿಂದ ಕೂಡಿ, ಕೈಯಲ್ಲಿ ಹಾರವನ್ನು ತಿರುಗಿಸುತ್ತಾ, ಕೆಳ

---

೧ ಮಿಂಚು (ಜ, ತ)

ಸುರತರುಮೂಲ ನೀಲಮಣಿವೇದಿಕೆಯಗ್ರದೊಳಿರ್ದು ಪಾಡುವ
ಚ್ಚರಿಯರ ಗಾನದಿಂಪು ಕಿವಿಯಂ ಪುಗೆ ಪೋಗದೆ ನಿಂದ ತನ್ನ ಮೆ
ಯ್ಯೆರಲೆಯ ಮೆಯ್ಯೊಳೆಟ್ಟಿ ಪುಳಕಾಂಕುರಮಂಗಮನೆಯ್ದೆ ನಾಂಟೆ ಕಾ
ಟ್ಸುರಮೆನೆ ಸೂಸುಗುಂ ಶಶಿ ಸುಧಾರಸಮಂ ನೆರೆದೀಂಟೆ ನಿರ್ಜರರ್ ೪೧

ಜಡಭರಿತಂ ನೀರದಮಿದ
ಜ಼ೋಡನಿರ್ಪುದಯುಕ್ತಮೆಂದು ತಟಿದಂಗನೆ ತಾಂ
ಕಡೆಗೋಗೆದಂತಿರೆ ಮುಗಿಲಿಂ
೧ಸಿಡಿದು ಕೆಲಕ್ಕೊಗೆದ೧ ಖಚರಿಯೇನೊಪ್ಪಿದಳೋ ೪೨

ನೀಲಾಬ್ಜಂ ನೀರ್ವುಟ್ಟೆನೆ
ನೀಲಾಬ್ಜಮನಡರ್ದು ತಳರ್ವ ಬಿಜ್ಜೋದರಿ ಕ
ಣ್ಣೋಲ೨ಮನವರ್ಚಿದಳ್ ಪಜಿ
ಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್ ೪೩

ಚಂಪಕ ನೆರೆದ ಬಟಲ್ಕೆಯಿಂ ನೆಗೆಯಲಾಜಿದ ನೀರೆಯನೇಜಿಸುತ್ತೆ ಖೇ
ಚರನೊಲವಿಂದೆ ತನ್ನ ಪೆಗಲೊಳ್ ಬಿಗಿದಭ್ರಪಥಪ್ರದೇಶದೊಳ್

ಗಿಳಿವಳು. ೪೧. ಕಲ್ಪವೃಕ್ಷದಡಿಯಲ್ಲಿ ಇಂದ್ರನೀಲಮಣಿಯ ಜಗುಲಿಯ ಮೇಲೆ ಕುಳಿತು ಅಪ್ಸರಸ್ತ್ರೀಯು ಹಾಡುತ್ತಿದ್ದಳು, ಆ ಗಾನದ ಸವಿಯು ಚಂದ್ರಮಂಡಲದಲ್ಲಿ ಸೇರಿದ್ದ ಜಿಂಕೆಯ ಕಿವಿಗೆ ಬೀಳಲು, ಅದು ಆ ಸ್ಥಳದಿಂದ ಕದಲದೆ ನಿಂತು, (ಸಂಗೀತದ ಸವಿಯನ್ನು ಆನಂದಿಸುತ್ತಿರುವಾಗ) ಮೈಯಲ್ಲಿ ಎದ್ದ ಪುಳಕಾಂಕುರಗಳು ಚಂದ್ರಬಿಂಬ ವನ್ನು ಒತ್ತಿ ಚುಚ್ಚಲು (ಅಲ್ಲಿಂದ) ಪ್ರವಾಹ ರೂಪದಲ್ಲಿ ಅಮೃತವು ಹೊರಚಿಮ್ಮಲು, ದೇವತೆಗಳು ಸೇರಿ ಅದನ್ನು ಪಾನಮಾಡುವರು. ೪೨. ಮೂಢನೂ, ಹಲ್ಲುಗಳಿಲ್ಲದವನೂ ಆದ ಕಾರ್ಮೋಡದೊಡನೆ ಕೂಡಿರುವುದು ಯೋಗ್ಯವಲ್ಲವೆಂದು ಮಿಂಚೆಂಬ ಸ್ತ್ರೀಯು ತಾನು ಹೊರಗೆ ಜಾರಿದಂತೆ, ಮೇಘಗಳಿಂದ ಪಕ್ಕಕ್ಕೆ ಹಾರಿದ ಖಚರಿಯು ಕಂಗೊಳಿಸಿದಳು.[1] ೪೩. ನೀಲಮೇಘವನ್ನೇರಿ ಅಂತರಿಕ್ಷದಲ್ಲಿ ಸಾಗುತ್ತಿದ್ದ ವಿದ್ಯಾಧರಿಯು ತನ್ನ ಕಣ್ಣನೋಟದ ಕಾಂತಿಯೆಂಬ ಹುಟ್ಟನ್ನು ಹಾಕುತ್ತಾ, ಕಪ್ಪುಮೋಡವೆಂಬ ಹರಿಗೋಲನ್ನೇರಿ, ಆಕಾಶವೆಂಬ ಸಮುದ್ರದಲ್ಲಿ ಪ್ರಯಾಣ ಬೆಳಸುತ್ತಿರುವಂತೆ ಕಣ್ಗೆಸೆದಳು. ೪೪. ಕ್ರೀಡಿಸಿ ಬಳಲಿದುದರಿಂದ ಹಾರಲಾರದಿರುವ ಸತಿಯನ್ನು ಖೇಚರನು ಪ್ರೀತಿಯಿಂದ ತನ್ನ ಹೆಗಲಮೇಲೆ ಹತ್ತಿಸಿಕೊಂಡು ಮೇಘಮಾರ್ಗವಾಗಿ ಏರುತ್ತಿರುವಾಗ, ತಾನೂ ಸಹ

---

೧-೧ ಸಿಡಿಲ್ದು ಕೆಲಕೋಗೆವ (ಯ), ಸಿಡಿದು ಕೆಲಕ್ಕೊಗೆವ (ಚ,ಜ,ಶ) ೨ಣ್ಣೋಲ (ಯ)೩ ನಡೆ (ರ)

[1] ಜಡ + ಭರಿತ = ಜಡಸ್ವಭಾವ ; ಜಡ + ಭರಿತ = ನೀರು ಕೂಡಿರುವ, ಮೇಘ. ನೀ + ರದ = ಹಲ್ಲಿಲ್ಲದ ; ನೀರ + ದ = ನೀರಿನಿಂದ ಕೂಡಿದ ಮೇಘ. ಘನ = ಮೇಘ ; ಸತ್ತ್ವಶಾಲಿ.

ಬರುತಳವಾಱೆ ತಾನುಮವರಿರ್ವರನಂಬುದಮೆಯ್ದೆ ಪೊತ್ತುದ
ಚ್ಚರಿಯೆ ಘನಾಹ್ವಯಂಗೆ ಪರನಿರ್ವಹಣಪ್ರಕೃತಿಪ್ರವರ್ತನಂ ೪೪

ತೊಡವಿನ ಕೆಂಬರಲ್ ಪಸಿರ್ವರಲ್ಗಳ ಸಾಲ್ವೆಳಗಿಂದ್ರಚಾಪಮಂ
ಪಡೆಯೆ ಪೊದೞ್ದ ಕಣ್ಗಡೆಗದಿರ್ ಕುಡಿಮಿಂಚನೊಡರ್ಚೆ ಜಾಱೆ ಸೋ
ರ್ಮುಡಿ ಸುರಿತರ್ಪ ಕಮ್ಮಲರೆ ಪೆರ್ಮೞೆಯಾಗಿಸೆ ಕಾರಲಕ್ಷ್ಮಿಯಂ
ತೊಡನಡರ್ದಂಬುದಕ್ಕೆ ನೆಗೆವಚ್ಚರಿಯಚ್ಚರಿಯಂ ನಿಮಿರ್ಚಿದಳ್ ೪೫

ಇನಿಯನೊಳಾದ ಖಿಲ್ಮಿಳಿಸಿನಿಂ ಮುಗಿಲಂ ಮಱೆಗೊಳ್ವುದುಂ ಪಳ
ಚ್ಚನೆ ಸೆಳೆಮಿಂಚು ಕಣ್ಬೊಣರೊಳುಳ್ಕೆ ಚಿಳಿಲ್-ಛಿಟಿಲೆಂದು ಮೇಘನಿ
ಸ್ವನಮದು ಪೊಣ್ಮೆ ಕಣ್ಮುಗಿದು ಬೆರ್ಚಿ ವಿಯಚ್ಚರಿ ಭೋಂಕನೆಯ್ದಿ ನ
ಲ್ಲನನಮರ್ದಪ್ಪಿದಳ್ ಪೊಗೞ್ವಿನಂ ಮುಗಿಲಂ ಬೆರಲೆತ್ತಿ ಮನ್ಮಥಂ ೪೬

ನಗಶಿಖರಾಗ್ರದಿಂ ಸರಭಸಂ ನೆಗೆವಚ್ಚರಿಯುನ್ನತಸ್ತನಂ
ಮಿಗೆ ಮುಗಿಲಂ ಪಳಂಚಲೆದು ಪೊಯ್ಯೆ ಕಳೇವರಮೆಲ್ಲನುರ್ಗೆ ನೊಂ
ದೊಗೆದಿೞಿವಂಬು ಕಣ್ಬನಿವೊಲಾಗಿರೆ ಮೇಣದು ಶೋಕರಾವಮಂ
ನೆಗೞ್ದುದೊ ತಳ್ವದೆಂಬಿನಮಳುಂಬಮದೊಪ್ಪುಗುಮಂಬುದಸ್ವನಂ ೪೭

ಶಕ್ತಿಗುಂದಲು, ಅವರಿಬ್ಬರನ್ನೂ ಮೇಘವು ಹೊತ್ತು ನಡೆಯಿತು. ಸತ್ತ್ವಶಾಲಿಗಳಾದವರು[1] ಇತರರನ್ನು ರಕ್ಷಿಸುವ ಸ್ವಭಾವವುಳ್ಳವರಾಗಿ ವರ್ತಿಸುವುದರಲ್ಲಿ ಆಶ್ಚರ್ಯವೇನಿದೆ ? ೪೫. ಆಭರಣಗಳ ಕೆಂಪು ಹರಳುಗಳು, ಪಚ್ಚೆಗಳು (ಮೊದಲಾದ ಮಣಿಗಳ ಸಾಲುಗಳ ಕಾಂತಿಯು ಕಾಮನಬಿಲ್ಲಿನಂತಿರಲು, ಚಿಮ್ಮುತ್ತಿದ್ದ ಕಡೆಗಣ್ಣಿನ ನೋಟವು ಕುಡಿಮಿಂಚಿನ ಹಾಗಿರಲು, ಸಡಿಲಾದ ಜಡೆಯಿಂದ ಸುಗಂಧಪುಷ್ಪಗಳು ಉದುರಿ ದೊಡ್ಡ ಮಳೆಯಂತೆ ಬೀಳುತ್ತಿರಲು, ಮೇಘವನ್ನೇರಿ ನೆಗೆಯಲುದ್ಯುಕ್ತಳಾದ ಅಪ್ಸರಸ್ತ್ರೀಯು ಮಳೆಗಾಲದ ಲಕ್ಷ್ಮಿಯಂತೆ ಆಶ್ಚರ್ಯವನ್ನುಂಟುಮಾಡಿದಳು. ೪೬. ಗಗನಚಾರಿಯಾದ ಸ್ತ್ರೀಯು ತನ್ನ ಪ್ರಿಯತಮನಲ್ಲಿ ಕೋಪಗೊಂಡು ಮೇಘಗಳಲ್ಲಿ ಅವಿತುಕೊಂಡಳು. ಉಜ್ವಲ ಪ್ರಕಾಶದಿಂದ ದೊಡ್ಡ ಮಿಂಚು ಅವಳ ಕಣ್ಣರೆಪ್ಪೆಗಳ ಸಮೀಪದಲ್ಲಿ ಬೆಳಗಿ ಕಣ್ಣುಕೋರೈಸಿ ಮುಚ್ಚುವಂತಾಯಿತು. ಚಿಳಿಲ್ ಛಿಟಿಲೆಂದು ಮೋಡವು ಗುಡುಗಲು, ಭೀತಿಯಿಂದ ಆ ಖಚರಿಯು (ತನ್ನ ಪ್ರಣಯಕೋಪವನ್ನು ಮರೆತು), ಮನ್ಮಥನು ಬೆರಳೆತ್ತಿ ಹೊಗಳುವ ರೀತಿಯಲ್ಲಿ ತನ್ನ ಪ್ರಿಯನನ್ನು ಆಲಿಂಗಿಸಿದಳು ! ೪೭. ಪರ್ವತದ ಕೋಡುಗಲ್ಲ ಮೇಲಿನಿಂದ ಶೀಘ್ರವಾಗಿ ಹಾರಲುದ್ಯುಕ್ತಳಾದ ಅಪ್ಸರೆಯ ಮೇಲೆದ್ದ ಮೊಲೆಗಳು ಮುಗಿಲನ್ನು ತಾಕಿ ಅದನ್ನು ಜರ್ಜರಿತವಾಗುವಂತೆ ಘರ್ಷಿಸಲು, ಮೇಘದ

---

೧ ಣೋಪ (ಯ) ೨ ಗಿರೆ (ಯ)

1 ಘನಾಹ್ವಯ–ಘನ–ಮೋಡ ಎಂಬ ಹೆಸರಿನವನು.

ಮತ್ತೇಭ ಸುರಭೂಜಾತದ ತಳ್ತ ತಣ್ಣೆಲ ಚಂದ್ರೇಂದ್ರಾಶ್ಮಪೀಠಂಗಳೊಳ್
ತರದಿಂ ಮಂಡಿಸಿ ನೋಡುವಾಡುವ ಲಸತ್ಸಂಗೀತಮಂ ಪಾಡುವಾ
ದರದಿಂದೊಳ್ನುಡಿದೋರ್ಪ ಸಿಂಗರಿಪ ನಾನಾಲೀಲೆ ಕೆಯ್ಗಣ್ಮೆ ಕಿಂ
ಪುರುಷರ್ ಕಿನ್ನರರಚ್ಚರರ್ ಬಿನದಿಪರ್ ತತ್ಕಂದರಸ್ಥಾನದೊಳ್ ೪೮

ಚಂಪಕ ಜವನ ಲುಲಾಯಮಿಂದರನ ದಂತಿ ಮುಕುಂದನ ಪರ್ದು ಪದ್ಮಸಂ
ಭವನರಸಂಚೆ ದುರ್ಗೆಯ ಮೃಗಾಧಿಪನಿಂದುವ ಪೆರ್ಮೊಲಂ ಮನೋ
ಭವನ ಶುಕಂ ಕುಮಾರನ ಕಲಾಪಿ ಸಮೀರನ ಪುಲ್ಲೆ ಸಂತತೋ
ತ್ಸವಯುತಮೊಪ್ಪುಗುಂ ವಿಹರಿಸುತ್ತೆ ತದದ್ರಿಗತಟೀವನಂಗಳೊಳ್ ೪೯

ಉತ್ಪಲ ತಂಗದಿರ್ಗಲ್ಲ ಗಹ್ವರದ ಚೆಂದಳಿರ್ವಾಸಿನೊಳತ್ತಮಿತ್ತ ಚೆ
ಲ್ವಿಂಗಡೆಯಾಗಿ ಸೂಸಿದರಲುಂ ನಱುದಂಬುಲಮುಂ ಮೃಗೋದ್ಭವಂ
ಸಂಗಳಿಸಿರ್ದ ಕುಂಕುಮಪರಾಗಮುಮಾರ್ದಜಪುನ್ಮದಾಳಿಯುಂ
ಪಿಂಗದೆ ದೇವದಂಪತಿಯ ಕೂಟಮನೇಂ ಪಿಸುಣಾಡಲಾರ್ತುವೋ ೫೦

ಶರೀರವೆಲ್ಲವೂ ಮುರಿದಂತಾಗಲು, ಬಾಧೆಪಟ್ಟು ಸುರಿಯುತ್ತಿರುವ ಹನಿಗಳು ಕಣ್ಣೀರಿನಂತಿರಲು, ಮತ್ತೆ ಮೇಘವು ಸಹಿಸಲಾರದೆ ಅತಿಶಯವಾಗಿ ಆರ್ತನಾದವನ್ನು ಮಾಡುತ್ತಿದೆಯೋ ಎನ್ನುವಂತೆ ಗುಡುಗಿನ ಧ್ವನಿ ಉಂಟಾಯಿತು! ೪೮. ದೇವವೃಕ್ಷದ ವಿಸ್ತಾರವಾದ ತಂಪು ನೆರಳಿನಲ್ಲಿ, ಚಂದ್ರಕಾಂತಶಿಲೆಯ ಹಾಗೂ ಇಂದ್ರನೀಲಮಣಿಯ ಜಗುಲಿಗಳಲ್ಲಿ ವೈಯಾರದಿಂದ ಕುಳಿತು (ಪರಸ್ಪರ) ನೋಡುವ, ಆಡುವ, ಸೊಗಸಾಗಿ ಸಂಗೀತವನ್ನು ಹಾಡುವ, ಪ್ರಣಯಭರದಿಂದ ಮಧುರ ವಚನಗಳನ್ನು ನುಡಿಯುವ ನಾನಾ ಶೃಂಗಾರಲೀಲೆಗಳನ್ನು ಬೆಳಸಲು ಅವಕಾಶವನ್ನು ಪಡೆದು ಕಿನ್ನರರೂ, ಕಿಂಪುರುಷರೂ, ಅಪ್ಸರೆಯರೂ ಆ ಪರ್ವತದ ತಪ್ಪಲಿನಲ್ಲಿ ವಿಹರಿಸುವರು. ೪೯. ಯಮನ ಕೋಣ, ಇಂದ್ರನ ಗಜ, ವಿಷ್ಣುವಿನ ಗರುಡಪಕ್ಷಿ, ಬ್ರಹ್ಮನ ರಾಜಹಂಸ, ದುರ್ಗಿಯ ಸಿಂಹ, ಚಂದ್ರನ ದೊಡ್ಡ ಮೊಲ, ಮನ್ಮಥನ ಗಿಣಿ, ಷಣ್ಮುಖನ ನವಿಲು, ವಾಯುವಿನ ಜಿಂಕೆ (ಮೊದಲಾದ ದೇವತೆಗಳ ವಾಹನಗಳು)ಯಾವಾಗಲೂ ಆನಂದದಿಂದ ಆ ಪರ್ವತದ ತಪ್ಪಲುಗಳಲ್ಲಿರುವ ವನಗಳಲ್ಲಿ ವಿಹಾರ ಮಾಡುತ್ತಿರುವುವು. ೫೦. ಚಂದ್ರಕಾಂತಶಿಲೆಯ ಗುಹೆಗಳಲ್ಲಿ ಕೆಂಪು ಚಿಗುರುಗಳ ಹಾಸಿಗೆಯಲ್ಲಿ ಎರಡು ಪಕ್ಕಗಳಲ್ಲಿಯೂ ಸೊಗಸಾಗಿ ಉದುರಿದ್ದ ಹೂಗಳೂ, ಪರಿಮಳಿಸುವ ತಾಂಬೂಲವೂ, ಕಸ್ತೂರಿಮಿಶ್ರವಾದ ಕುಂಕುಮಕೇಸರ ಚೂರ್ಣವೂ, ಪುನುಗಿನ ಸಾಲುಗಳೂ, ದೇವದಂಪತಿಗಳ ಸುರತದ ಬಗೆಯನ್ನು ಮರೆಮಾಚದೆ ಚಾಡಿ

೧ ತದೀಯ (ರ) ೨ ಮೃದುದ್ರವಂ (ಚ)

ಚಂಪಕ
ತಳಿರಲರುಳ್ಳಲರ್ಮಿಡಿ ಪೊವಟ್ಟೆಳಗಾಯ್ ನಸುದೋರ ದೋರೆವಣ್
ಕಳಿತೆಸೆವಚ್ಚಪಣ್ಣ[೧]ಡಿದು ಬೀಗಿದ ಬಿಣ್ಗೊನೆಯಾಂತು ಬಾಗಿ ಸಾ
ರ್ದಳಿ ಗಿಳಿವಿಂಡು ಕೋಗಿಲೆಗಳಬ್ಬರದೆತ್ತರವಾಂತ ಶಾಖೆ ಸಂ
ಗ[೨]ಳಿಸಿದನೋಕಹಪ್ರಕರದಿಂ ಬಗೆಗೊಂಡುದು ಶೈಲನಂದನಂ ೫೧

ಉತ್ಪಲ
ಪಾಡುವ ತುಂಬಿ ತೊಂಡುಗೆಡೆವಗ್ಗದ ಪಂಡಿತವಕ್ಕಿ ಸಾರ್ಚಿ[೩] ಬಾಯ್
ಗೂಡಿ ವಿಲಾಸದಿಂ ಕೆಲೆವ ಪಾರಿವಮೊಯ್ಯನೆ ಕೇಗಿ[೪] ನಲ್ಮೆಯಿಂ
ದಾಡುವ ಸೋಗೆ[೫] ಮಾಮರದೊಳಿರ್ದು ಕುಕಿಲ್ವ ಪಿಕಂ ವಿಯೋಗಿಗೇಂ
ಮಾಡದೆ ಪೋಕುಮೇ ಮದನನಂಡಲೆಯಂ ನಗನಂದನಂಗಳೊಳ್ ೫೨

ಚಂಪಕ
ನಳಿನಿಯನಪ್ಪಿ ತುಂಬಿಗುರುಳಂ ನೆಱೆನೇರ್ಪಡೆ ತಿರ್ದಿ ಚುಂಬಿಸು
ತ್ತೆಳಸಿ ಸರೋರುಹಾನನಮನುಂಟಿ ರಥಾಂಗಕುಚಂಗಳಂ ಸರಃ
ಸ್ಥಳದೊಳೆ ಕೂಡಿ ಘರ್ಮಕಣವೆಂಬಿನಮಂಬುಕಣಾಳಿದಾಳ್ದದೇಂ
ಸುೞಿದುದೊ ಮೆಲ್ಲನಾಳ್ದವೊಲತಿಶ್ರಮಮಂ ವನಮಂದಮಾರುತಂ ೫೩

ಹೇಳಲು ಸಮರ್ಥವಾದುವು ! ೫೧. ಆ ಪರ್ವತದ ವನದಲ್ಲಿದ್ದ ವೃಕ್ಷರಾಜಿಗಳ ಕೊಂಬೆಗಳಲ್ಲಿ ಚಿಗುರೆಲೆಗಳೂ, ಹೂವುಗಳೂ, ಮೊಗ್ಗುಗಳೂ, ಕಸುಗಾಯಿಗಳೂ, ಎಳೆಯ ಕಾಯಿಗಳೂ, ಸ್ವಲ್ಪ ಪಕ್ವವಾದ ದೋರೆ ಹಣ್ಣುಗಳೂ, ಪಕ್ವವಾಗಿ ಮಾಗಿದ ಹಣ್ಣುಗಳೂ ಒತ್ತಾಗಿ ಕಾಣಿಸಿಕೊಂಡು ಬಿಗಿದುಕೊಂಡಿರುವ ಗೊಂಚಲುಗಳಿಂದ ಕೂಡಿದ್ದುವು. ಅವುಗಳಿಗಾಗಿ ದುಂಬಿಗಳೂ, ಗಿಳಿಗಳ ಗುಂಪೂ, ಕೋಗಿಲೆಗಳೂ ಬಂದು ಎರಗಿ ಧ್ವನಿಗಳನ್ನು ವಿಶೇಷವಾಗಿ ಮಾಡುತ್ತಿದ್ದುವು. ಇಂತಹ ಫಲ ಪುಷ್ಪ ಪಲ್ಲವಭರಿತವಾದ ವೃಕ್ಷಗಳಿಂದ ಕೂಡಿ ಅಲ್ಲಿಯ ವನಗಳು ಕಂಗೊಳಿಸಿದ್ದುವು. ೫೨. ಆ ಪರ್ವತದ ವನಗಳಲ್ಲಿ ಝೇಂಕರಿಸಿ ಹಾಡುತ್ತಿರುವ ದುಂಬಿಗಳು, ಸ್ವೇಚ್ಛೆಯಿಂದ ಕ್ರೀಡಿಸುತ್ತಿರುವುದರಲ್ಲಿ ಆಸಕ್ತವಾದ ಗಿಳಿ, ಕೊಕ್ಕಿಗೆ ಗುಟುಕಿತ್ತು ವಿನೋದದಿಂದ ಪಕ್ಕಕ್ಕೆ ಬಾಗುವ ಪಾರಿವಾಳ, ಮೆಲ್ಲಗೆ ಸಂತೋಷದಿಂದ ಗರಿಯನ್ನಾಡಿಸುವ ನವಿಲು, ಮಾವಿನ ಮರದಲ್ಲಿ ಕುಳಿತು ಕೂಜನವನ್ನು ಮಾಡುವ ಕೋಗಿಲೆ (ಮುಂತಾದುವು) ಪ್ರಿಯಸತಿಯರಿಂದ ದೂರವಾಗಿರುವ ವಿರಹಿಜನಕ್ಕೆ ಮನ್ಮಥನ ಕಾಟವನ್ನು ಮಾಡದೆ ಇರುವುವೆ ! ೫೩. ಕಮಲಿನಿಯನ್ನು ಆಲಿಂಗಿಸಿ, ದುಂಬಿಗಳೆಂಬ ಕೂದಲನ್ನು ಚೆನ್ನಾಗಿ ನೆಟ್ಟಗಾಗುವಂತೆ ತಿದ್ದಿ, ಮುದ್ದಿಸಲು ಅಪೇಕ್ಷಿಸಿ, ಮುಖಕಮಲವನ್ನು ಸೋಂಕಿ, ಚಕ್ರವಾಕಗಳೆಂಬ ಮೊಲೆಗಳನ್ನು ಅಪ್ಪಿಕೊಂಡು ಸರೋವರದಲ್ಲಿ ಕೂಡಲಾಗಿ ಬೆವರಹನಿಗಳಂತೆ ನೀರಿನ ತೊಟ್ಟುಗಳು ಕಾಣಿಸಲು, ಬಹಳವಾಗಿ ದಣಿದವನಂತೆ (ಸುರತಾಯಾಸದಿಂದ) ತೋಟದಲ್ಲಿ ಮಂದಮಾರುತವು ಬೀಸುತ್ತಿದ್ದಿತು.

---

೧ ಪಣ್ಣ (ರ,ವ) ೨ ಗೊ (ರ, ವ) ೩ ಸೋರ್ಕಿ (ಯ, ಲ) ೪ ಕೇಕಿ (ರ) ೫ ಪೊಂಗು (ರ)

ತೊಳಗಿದುದಿಂತು ರಂಜಿಪ ಕನತ್ಕನಕಾಚಲವಗ್ರದೊಳ್ ಮಹೋ
ಜ್ವಳಮಣಿಶಾಲಮಾದಿ ಕಮಠಂಬರಮಾೞಮನಾಳ್ಕಿಗಟ್ಟ್ ಸುಧಾ
ಸಲಿಲಸಮೃದ್ಧ[೧]ಮಿಂದ್ರಮಣಿಯಾಳ್ವರಿ ಬಜ್ಜರಗೊತ್ತಳಂಗಳ
ಗ್ಗಳಿಸಿರೆ ಪೆರ್ಮೆವೆತ್ತು ಪುರವೈರಿಪುರಂ ಕಳಧೌತಗೋಪುರಂ ೫೪

ಉತ್ಪಲ ಬಾಂದಳಮಂ ಪಳಂಚಲೆವ ತುಂಗವೃಷಧ್ವಜದಿಂದೆ ತಳ್ತು ಚೆ
ಲ್ವೊಂದಿದ ಭರ್ಮಹರ್ಮ್ಯದಿಂದಳಂಕೃತಿವೆತ್ತ ಗಣೇಶ್ವರಸ್ಫುರ
ನ್ಮಂದಿರಪಂಕ್ತಿಯಿಂದಮೃತಪೂರ್ಣ ಸರಸ್ಸುರಭೂರುಹೋಲ್ಲಸ
ನ್ನಂದನದಿಂ ವಿರಾಜಿಸಿದುದಗ್ಗದ ಚಾರುಪುರಂ ಪುರಾರಿಯಾ ೫೫

ಮಹಾಸ್ರಗ್ಧರೆ ಭವಸೇವಾಯಾತಲೋಕೇಶ್ವರಪರಿವೃತತೂರ್ಯಪ್ರಣಾದಂ ಪ್ರಬದ್ಧೋ
ತ್ಸವಗಚ್ಛದ್ಭದ್ರಭಾಸ್ವತ್ಸುರಗಜಗಳ ಘಂಟಾಘಣತ್ಕಾರಮುನ್ನಿ
ದ್ರವಿಲಾಸಸ್ವೈರನಿರ್ಯದ್ಗಣಕಳಕಳಮುದ್ಗೀರ್ಣಲೀಲಾಚಲದ್ದಿ
ವ್ಯವಧೂಮಂಜೀರರಾವಂ ಮಿಸುಗೆ ಸೊಗಯಿಕುಂ ತತ್ಪುರೀರಾಜಮಾರ್ಗಂ ೫೬

೫೪. ಈ ರೀತಿಯಲ್ಲಿ ಮನೋಹರವಾದ, ಉಜ್ಜ್ವಲ ಕಾಂತಿಯಿಂದ ಕೂಡಿದ ಪೊಂಬೆಟ್ಟದ ತುದಿಯಲ್ಲಿ ಅತ್ಯಂತ ಪ್ರಕಾಶಮಾನವಾದ ರತ್ನದ ಕೋಟೆಯಿಂದಲೂ, ಲೋಕವನ್ನು ಹೊತ್ತಿರುವ ಆದಿ ಕೂರ್ಮಾವತಾರಿಯ (ವಿಷ್ಣುವಿನ)ವರೆಗೂ ಆಳವಾಗಿದ್ದು ಅಮೃತ ಜಲಸಾಗರದಿಂದ ತುಂಬಿದ್ದ ಕಂದಕಗಳಿಂದಲೂ, ಇಂದ್ರನೀಲಮಣಿಗಳ ಕೋಟೆಯ ಮೇಲ್ಗಟ್ಟುಗಳಿಂದಲೂ, ವಜ್ರದ ಕೊತ್ತಳಗಳಿಂದಲೂ, ಬೆಳ್ಳಿ ಬಂಗಾರದ ಗೋಪುರಗಳಿಂದಲೂ ಕೂಡಿ ಪ್ರಶಸ್ತವಾದ ಶಿವನನಗರವು ಭವ್ಯವಾಗಿದ್ದಿತು. ೫೫. ಅಂತರಿಕ್ಷವನ್ನು ಬೀಸುವಂತೆ ಚಲಿಸುತ್ತಿರುವ ಉನ್ನತವಾದ ನಂದಿಧ್ವಜದಿಂದಲೂ, ನಳನಳಿಸುತ್ತಾ ಸೊಗಸಾಗಿರುವ ಬಂಗಾರದ ಕಳಸಗಳಿಂದ ಶೋಭಿತವಾದ ಗಣಾಧೀಶ್ವರರ ಪ್ರಕಾಶಮಾನವಾದ ಭವನಗಳ ಸಾಲುಗಳಿಂದಲೂ,ಅಮೃತ ತುಂಬಿದ್ದ ಕೊಳಗಳಿಂದಲೂ, ಕಲ್ಪವೃಕ್ಷಗಳಿಂದ ಕಂಗೊಳಿಸುತ್ತಲಿದ್ದ ಉದ್ಯಾನವನಗಳಿಂದಲೂ ತ್ರಿಪುರಾಂತಕನ ಮನೋಹರವಾದ ಪಟ್ಟಣವು ಶೋಭಿಸುತ್ತಿದ್ದಿತು. ೫೬. ಶಿವನನ್ನು ಸೇವಿಸಲು ಬರುತ್ತಿರುವ ವಿಷ್ಣು ಬ್ರಹ್ಮೇಂದ್ರಾದಿ ಲೋಕಪಾಲಕರನ್ನು ಸುತ್ತುವರಿದು ಮೊಳಗುತ್ತಿರುವ ವಾದ್ಯಗಳ ಘೋಷದಿಂದಲೂ, ಉತ್ಸವಗಳು ನಡೆಯುತ್ತಿರಲು ಮುಂದೆ ಹೊರಟಿರುವ ಮಂಗಳಕರವಾಗಿ ಶೋಭಿಸುತ್ತಿರುವ ಸುರಗಜಗಳ ಕೊರಳಿಗೆ ಕಟ್ಟಿರುವ ಘಂಟೆಗಳ ಘಣ ಘಣ ಶಬ್ದದಿಂದಲೂ, ಪ್ರಕಟವಾಗುತ್ತಿರುವ ಲೀಲೆಯಿಂದ ನಿರಂಕುಶ ಸ್ವತಂತ್ರರಾಗಿ ಹೊರಟ ಶಿವಗಣಗಳ ಕಳಕಳ ನಾದದಿಂದಲೂ, ವಿನೋದದಿಂದ ವಿಹರಿಸುತ್ತಿರುವ ದೇವತಾಸ್ತ್ರೀಯರ ಕಾಲ್ಗಡಗಗಳ ಝಣಝಣ ಧ್ವನಿಯಿಂದಲೂ ನಿನಾದಿತನಾಗಿ ಆ ಶಿವನಗರದ ರಾಜಮಾರ್ಗವು ಮೆರೆಯುತ್ತಲಿದ್ದಿತು.

---

೧ ಸಮುದ್ರ (ಚ, ರ)

ಶಾರ್ದೂಲ ಆ ಕೈಲಾಸದ ಪೂರ್ವದಿಕ್ಪಥದೊಳಿರ್ಪಂ ಹಂಸವಾಹಂ ತ್ರಿಣೇ
ತ್ರಾಕಲ್ಪಂ ಕನಕೋಪವೀತ ಕನಕೋದ್ಯದ್ದಂಡಪಾಶಾಕ್ಷಮಾ
ಲಾಕಾಂತಂ ವೃತಕೋಟಿಸಮಭಾಸ್ವದ್ಭೈರವಂ ಬ್ರಾಹ್ಮಿಯಿಂ
ಬಾ ಕಾಂತಾಮಣಿಗೂಡಿ ಮಾಣದಸಿತಾಂಗಾಖ್ಯಂ ಮಹಾಭೈರವಂ ೫೭

ಮತ್ತೇಭ ಅನಲಾಕ್ಷಂ ಭೃತಖಡ್ಗಶೂಲ ವಿಲಸತ್ ಖಟ್ವಾಂಗಢಕ್ಕಂ ಕನತ್
ಕನಕಾಂಗಂ ವೃಷವಾಹನಂ ಪ್ರವಿಲಸನ್ಮಾಹೇಶ್ವರೀಯುಕ್ತನೊ
ಲ್ದನಿಶಂ ದ್ವಾದಶಕೋಟಿಭೈರವಯುತಂ ಕಾದೊಪ್ಪುಗುಂ ಭೀಷ್ಮದಂ
ಷ್ಟ್ರನನಂತಂ ರುರುಭೈರವಂ ಹರಪುರೀಕಾಲಾಧ್ವ[1]ದಿಗ್ದ್ವಾರದೊಳ್[1] ೫೮

ಶುಕಶೂಲಾಯುಧವಜ್ರಶಕ್ತಿಧರನಾದಿತ್ಯಪ್ರಭಂ ೞಾರುಚಿಂ
ದ್ರ[2]ಕಿವಾಹಂ ದಶಕೋಟಿ ಭೈರವಯುತಂ ಕೌಮಾರಿಯೆಂದೆಂಬ ಕಾಂ
ತೆ ಕರಂ ರಂಜಿಸೆ ಚಂಡಭೈರವನುದಾರಕಿತ್ರ್ಯಂಬಕಂ ಕಾಮನಿಂಳಿ
ದಕಳಂಕಂ ಸಲೆ ಸೇವಿಪಂ ರವಿಸುತಾಶಾದ್ವಾರಮಂ ಲೀಲೆಯಿಂ ೫೯

೫೭. ಆ ಕೈಲಾಸದ ಪೂರ್ವದಿಕ್ಕಿನ ಮಾರ್ಗದಲ್ಲಿ ಹಂಸವಾಹನನಾದ ಅಸಿತಾಂಗನೆಂಬ ಹೆಸರಿನ ಮಹಾಭೈರವನು ತನ್ನ ಕಾಂತೆಯಾದ ಬ್ರಾಹ್ಮಿ ಎಂಬುವಳೊಡಗೂಡಿ ಕಾವಲಿದ್ದನು. ಅವನು ತ್ರಿಣೇತ್ರಭೂಷಿತನಾಗಿ, ಚಿನ್ನದ ಜನಿವಾರವನ್ನು ಧರಿಸಿದ್ದನು. ಕೈಯಲ್ಲಿ ಉದ್ದವಾದ ಚಿನ್ನದ ಕೋಲೂ, ಪಾಶವೂ, ಜಪಮಾಲೆಯೂ ಬೆಳಗುತ್ತಿದ್ದುವು. ಅವನಂತೆಯೇ ತೇಜಸ್ವಿಗಳಾದ ಏಳು ಕೋಟಿ ಭೈರವರು ಅವನೊಡನಿದ್ದರು. ೫೮. ಹರಪುರಿಯ ಆಗ್ನೇಯದಿಕ್ಕಿನ ದ್ವಾರವನ್ನು ರುರುವೆಂಬ ಭೈರವನು ಪ್ರಕಾಶಮಾನಳಾದ ಮಹೇಶ್ವರಿಯೆಂಬ ತನ್ನ ಕಾಂತೆಯೊಡಗೂಡಿ ಕಾವಲಿದ್ದನು. ಅವನು ಅಗ್ನಿನೇತ್ರನೂ, ಖಡ್ಗ, ಶೂಲ, ಖಟ್ವಾಂಗ, ಡಮರುಗಧಾರಿಯೂ ಆಗಿದ್ದನು. ಹೊಳೆಯುತ್ತಿರುವ ಸುವರ್ಣದಂತೆ ದೇಹಕಾಂತಿಯುಳ್ಳವನೂ, ನಂದಿವಾಹನನೂ, ಭಯಂಕರವಾದ ಕೋರೆ ದಾಡೆಗಳುಳ್ಳವನೂ ಆಗಿ, ಹನ್ನೆರಡು ಕೋಟಿ ಭೈರವರೊಡಗೂಡಿದ್ದನು. ೫೯. ಯಮ ದಿಕ್ಕಿನ ಬಾಗಿಲನ್ನು ಚಂಡಭೈರವನು ಕೌಮಾರಿಯೆಂಬ ತನ್ನ ಪತ್ನಿಯೊಡನೆ ವಿಶೇಷವಾಗಿ ಬೆಳಗುತ್ತಾ ಕಾವಲಿದ್ದು ಸೇವಿಸುತ್ತಿದ್ದನು. ಅವನು ಗಿಳಿಯನ್ನೂ, ಶೂಲಾಯುಧ, ವಜ್ರ ಮೊದಲಾದ ಆಯುಧಗಳನ್ನೂ ಧರಿಸಿದ್ದನು. ಸೂರ್ಯನಂತೆ ತೇಜಸ್ವಿಯಾದ ಅವನು ಮನೋಹರವಾದ ನವಿಲನ್ನು ವಾಹನವನ್ನಾಗಿ ಮಾಡಿಕೊಂಡು, ಹತ್ತು ಕೋಟಿ ಭೈರವರಿಂದೊಡಗೂಡಿದ್ದನು. ಮನ್ಮಥಪ್ರಭಾವದಿಂದ ಕಲುಷಿತನಾಗದ ಅವನು ವಿಶಾಲವಾದ

---

೧–೧ ದಿಗ್ಭಾಗವಮಂ (ಯ, ರ, ಲ) ; ದಿಗ್ದ್ವಾರವಮಂ (ಜ) ೨ ಧೃಕಿ (ಜ, ರ, ಲ) ೩ ದಾರಂ ೪ ಕಾದು ನಿಂ (ಯ)

ಗರುಡಾರೂಢನುಪಾತ್ತಚಕ್ರಜಲಜಂ ಕೌಮೋದಕೀಶಾರ್ಙ್ಗವೊ
ಪ್ಪಿರೆ ನಾರಾಯಣಿಗೂಡಿ ನೈರುತದಿಶಾದ್ವಾರಸ್ಥಿತಂ ಕಣ್ಗೆ ಬಂ
ಧುರನಾದಂ ಸಲೆ ಪಂಚಕೋಟಿಗಣಿತೋದ್ಯದ್ ಭೈರವರ್ ಸೇವಿಸು
ತ್ತಿರೆ ತನ್ನಂ ಘನಯೋಗಿನೀಪರಿವೃತಂ ಕ್ರೋಢಾಹ್ವಯಂ ಭೈರವಂ ೬೦

ನವಮೇಘಾಂಶುಜಟಾಧರಂ ಮುಸಲಶಂಖಂ ಖೇಟಕಂ ಖಡ್ಗಮೊ
ಪ್ಪುವ ನಾಲ್ದೋಳ್ಗಳಿನಾಱುಕೋಟಿ ಭಟರಿಂದೊಪ್ಪಿರ್ದು ವಾರಾಹಿಯೆಂ
ಬವಳೊಳ್ ಕೂಡಿ ಲುಲಾಯವಾಹನದೆ ಕಣ್ಗೆಂಬಾದನುನ್ಮತ್ತಭೈ
ರವನುದ್ಯದ್ವರುಣಾಶೆಯೊಳ್ ಪುರದ ಬಾಗಿಲ್ವಾಡದೊಳ್ ಶೂಲಿಯಾ ೬೧

ಚಂಪಕ ಅಪರ್ದು ಮದೇಭಮಂ ಪಿಡಿದು ಶಕ್ತಿಧನುಃಪವಿ ತೋಮರಂಗಳಂ
ಬಿಡೆಳ ಕನಕಾಂಶು ರಂಜಿಪೊಡಲಿಂ ಶಚಿಯೆಂಬಳೊಳೊಂದಿ ರಂಜಿಸು
ತ್ತಿಡವಲದೊಳ್ ತ್ರಿಕೋಟಿಸಮಸಾಹಸಭೈರವರೊಪ್ಪೆ ಕಾದು ನಿಂ
ದೊಡನೆಸೆದಂ ಮರುದ್ದಿಶೆಯ ಬಾಗಿಲೊಳೊಲ್ದು ಕಪಾಲಿಭೈರವಂ ೬೨

ಉತ್ಪಲ ಮಂಡಿಸಿ ಕಾಕವಾಹನದೆ ಘಂಟಿಕೆ ಶೂಲಕಪಾಲಢಕ್ಕೆಗಳ್
ಚಂಡಕರಂಗಳೊಳ್ ಪೊಳೆಯೆ ಪನ್ನೆರಡೊಂದಿದ ಕೋಟಿಭೈರವರ್

ಮೂರು ಕಣ್ಣುಗಳನ್ನು ಹೊಂದಿದ್ದನು. ೬೦. ನೈರುತ್ಯದಿಕ್ಕಿನ ದ್ವಾರವನ್ನು ಕ್ರೋಢ ನೆಂಬ ಭೈರವನು ನಾರಾಯಣಿಯೆಂಬ ತನ್ನ ಪತ್ನಿಯೊಡಗೂಡಿ ರಕ್ಷಿಸುತ್ತಿದ್ದನು. ಅವನು ಗರುಡವಾಹನನಾಗಿ, ಶಂಖ, ಚಕ್ರ, ಕೌಮೋದಕಿ ಎಂಬ ಗದೆ, ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿದ್ದನು. ಐದು ಕೋಟಿ ಮಹಾಭೈರವರು ಅವನನ್ನು ಸೇವಿಸುತ್ತಿದ್ದರು. ಮಹಾ ಯೋಗಿನೀಶಕ್ತಿಯರು ಅವನನ್ನು ಸುತ್ತುವರಿದಿದ್ದರು. ೬೧. ಶಿವನ ಪಟ್ಟಣದ ಪಶ್ಚಿಮದ ಬಾಗಿಲನ್ನು ಉನ್ಮತ್ತನೆಂಬ ಭೈರವನು ವಾರಾಹಿ ಎಂಬ ತನ್ನ ಪತ್ನಿಯೊಡ ಗೂಡಿ ರಕ್ಷಿಸುತ್ತಿದ್ದನು. ಅವನ ಜಟೆಗಳು ಹೊಸ ಮೇಘಮಾಲೆಗಳಂತಿದ್ದುವು. ಅವನು ನಾಲ್ಕು ಕೈಗಳಲ್ಲಿಯೂ ಮುಸಲ, ಶಂಖ, ಢಾಲು ಮತ್ತು ಖಡ್ಗಗಳನ್ನು ಧರಿಸಿದ್ದನು. ಕಾಡುಕೋಣವು ಅವನ ವಾಹನ. ಆರು ಕೋಟಿ ಭಟರು ಅವನನ್ನು ಪರಿವೇಷ್ಟಿಸಿದ್ದರು. ೬೨. ವಾಯುವ್ಯದಿಕ್ಕಿನ ಬಾಗಿಲನ್ನು ಕಪಾಲಿಯೆಂಬ ಭೈರವನು ಶಚಿಯೆಂಬ ಪತ್ನಿಯೊಡ ಗೂಡಿ ರಕ್ಷಿಸುತ್ತಾ ನಿಂತಿದ್ದನು. ಅವನು ಮದಗಜವಾಹನನಾಗಿ ಶಕ್ತಿ, ಧನುಸ್ಸು, ಪರಿಘ, ತೋಮರ ಮೊದಲಾದ ಆಯುಧಗಳನ್ನು ಧರಿಸಿದ್ದನು. ಅವನ ದೇಹವು ಬಂಗಾರದ ಕಾಂತಿಯಂತೆ ಹೊಳೆಯುತ್ತಿದ್ದಿತು. ಅವನ ಎಡಬಲ ಪಾರ್ಶ್ವಗಳಲ್ಲಿ ಸಮ ಪರಾಕ್ರಮಿಗಳಾದ ಮೂರು ಕೋಟಿ ಭೈರವರು ನಿಂತಿದ್ದರು. ೬೩. ಉತ್ತರದಿಕ್ಕಿನ ದ್ವಾರವನ್ನು ಭೀಷಣನೆಂಬ ಭೈರವನು ಚಾಮುಂಡಿ ಎಂಬ ಪತ್ನಿಯೊಡಗೂಡಿ ರಕ್ಷಿಸು

---

೧ ಶರ (ಯ) ೨ ನಡೆ (ರ)

ತಂಪದೆ ಸೇವಿಸುತ್ತಿರೆ ಕುಬೇರದಿಶಾಶ್ರಿತನಿರ್ದನಲ್ಲಿ ಚಾ
ಮುಂಡಿಯೊಳೊಂದಿ ಧೂಮ್ರರುಚಿಕಾಯುದ ಭೀಷಣನೆಂಬ ಭೈರವಂ* ೬೩

ಮಹಾಸ್ರಗ್ಧರೆ ಗಿರಿಕಾರೂಢಂ ಗದಾಖೇಟಕಫಲಕಮಹಾಖಡ್ಗಹಸ್ತಂ ಸುವರ್ಣ
ಸ್ಫುರಿತಾಂಗಂ ಫಾಲನೇತ್ರಂ ಸ್ವಸಮಬಲ ಲಸದ್ಭೈರವರ್ ಕೋಟಿಯೆಂಟೊ
ಪ್ಪಿರೆ ಸಂಹಾರಾಖ್ಯನಿರ್ಪಂ ಬಳವೆರಸಿ ಮಹಾಕಾಳಿಯಾಣ್ಮಂ ಕಳಾಭಾ
ಸುರನೊಲ್ದೀಶಾನದಿಗ್ದ್ವಾರಶಿದೊಳೆ ವಿಭವದಿಂ ಭೈರವಂ ಭಸ್ಮಭೂಷಂ ೬೪

ವಚನ ಇಂತು ಸಂತತಮೆಸೆವ ಪೃಥುಳಬಲರೆನಿಪ್ಪಷ್ಟಭೈರವರ ಕಾಪಿನ ಸೀಮೆಯಿಂದೊಳಗೆ ಫಣಿವರಂಗಾದೊಡಮೆಣಿಸಲರಿದೆನಿಪ ಪೆಂಪಂ ಪಡೆದತಿಪ್ರಕಾಶಮನತಿಕೌತುಕಮನತ್ಯಂತವೈಭವ ಮಳಿನುರುತರಳ ಸೌಂದರ್ಯಮನೊಳಕೊಂಡು ಕಣ್ಗೆ ಮಂಗಳಮಾಗಿ ಮನಕೆ ಮನೋಹರಮೆನಿಸಿ ಸೊಗಯಿಪ ಶಿವರಾಜಧಾನಿಯಲ್ಲಿ

ಚಂಪಕ ಘನತರಮಾಗಿ ಪೂರ್ವದಿಶೆಯಲ್ಲಿ ಖಗಾಗಮಮೇಕಲಕ್ಷಯೋ
ಜನಮಿತಗೋಪುರಾಕೃತಿಯೊಪ್ಪುಗುಮಿಂದುವಳಕ್ಷಶವಲ್ಲಿ ಕಾಂ

ತ್ತಿದ್ದನು. ಅವನು ಕಾಕವಾಹನನಾಗಿದ್ದನು. ಸಮರ್ಥವಾದ ಕೈಗಳಲ್ಲಿ ಗಂಟೆ, ಶೂಲ, ಕಪಾಲ, ಢಕ್ಕೆ ಮೊದಲಾದ ಆಯುಧಗಳು ಹೊಳೆಯುತ್ತಿದ್ದುವು. ಹನ್ನೆರಡು ಕೋಟಿ ಭೈರವರು ಗುಂಪಾಗಿ ಕೂಡಿ ಅವನನ್ನು ಸೇವಿಸುತ್ತಿದ್ದರು. ೬೪. ಈಶಾನ್ಯದಿಕ್ಕಿನ ದ್ವಾರವನ್ನು ಸಂಹಾರನೆಂಬ ಭೈರವನು ತನ್ನ ಪತ್ನಿ ಮಹಾಕಾಳಿಯೊಡಗೂಡಿ ರಕ್ಷಿಸುತ್ತಿದ್ದನು. ಅವನು ಮೂಷಕವಾಹನನಾಗಿದ್ದನು. ಕೈಗಳಲ್ಲಿ ಗದೆ, ಗುರಾಣಿ, ಹಲಗೆ, ಕತ್ತಿಗಳನ್ನು ಧರಿಸಿದ್ದನು. ಅವನ ದೇಹವು ಕಾಂಚನಕಾಂತಿಯಿಂದ ಮಿರುಗುತ್ತಿದ್ದಿತು. ಅವನಿಗೆ ಹಣೆಯಲ್ಲಿ ಕಣ್ಣಿದ್ದಿತು. ತನ್ನ ಸಮಾನ ಬಲಶಾಲಿಗಳೂ, ತೇಜೋಮೂರ್ತಿಗಳೂ ಆದ ಎಂಟು ಕೋಟಿ ಭೈರವರೊಡನೆ ಕೂಡಿದ್ದನು. ವಚನ : ಈ ರೀತಿಯಲ್ಲಿ ಶೋಭಿಸುತ್ತಿರುವ ಮಹಾಪರಾಕ್ರಮಿಗಳಾದ ಎಂಟು ಮಂದಿ ಭೈರವರಕ್ಷಣೆಗೊಳಪಟ್ಟ ಪ್ರದೇಶದೊಳಗೆ ಆದಿಶೇಷನಿಗೂ ಸಹ ವರ್ಣಿಸಲಸಾಧ್ಯವಾದ ಹಿರಿಮೆಯನ್ನು ಪಡೆದು, ಮಹಾತೇಜಸ್ಸಿನಿಂದಲೂ, ಆಶ್ಚರ್ಯಯುಕ್ತವಾಗಿಯೂ, ಅತ್ಯಂತ ವೈಭವದಿಂದಲೂ, ಮಹತ್ತರವಾದ ಸೌಂದರ್ಯದಿಂದಲೂ ಕೂಡಿ, ನೋಟಕ್ಕೆ ಮಂಗಳಪ್ರದವಾಗಿಯೂ, ಮನಸ್ಸಿಗೆ ಮನೋಹರವೂ ಆಗಿ ಸೊಗಸುತ್ತಿದ್ದ ಶಿವರಾಜಧಾನಿಯಲ್ಲಿ ೬೫. ಪೂರ್ವದಿಕ್ಕಿನಲ್ಲಿ ಖಗ್ಗೋದವು ಒಂದು ಲಕ್ಷ ಗಾವುದದಳತೆಯ ಪ್ರಶಸ್ತವಾದ ಗೋಪುರಾಕಾರದಿಂದ ಪ್ರಕಾಶಿಸುತ್ತಿರುವುದು, ಅಲ್ಲಿ ಚಂದ್ರನಂತೆ ಶುಭ್ರಕಾಂತಿಯುಳ್ಳ, ಬಂಗಾರದ ದಂಡವನ್ನು

---

೧ ಧೂಮ್ರ (ಯ, ಲ) ೨ ಯಿಂದೊ (ಯ) ೩ ದಿಗ್ಭಾಗ (ರ, ಲ) ೪-೪ ನತಿಭಾಸುರ (ಚ) ೫ ವಳೂನ (ಚ)

* ಈ ಪದ್ಯವು 'ಯ' ಪ್ರತಿಯಲ್ಲಿ ೬೨ನೆಯ ಪದ್ಯಕ್ಕೆ ಮೊದಲು ಬಂದಿದೆ.

ಚಸವಮಯ ವೇತ್ರಹಸ್ತನೆಸೆಗುಂ ಚತುರರ್ಬುದ ಸದ್ಗುಣಾವೃತಂ
ವನಜಭವಾದಿಗಳ್ ಸಮಯಮಂ ಸಲೆ ಪಾರ್ದಿರೆ ನಂದಿಕೇಶ್ವರಂ ೬೫

ತೊಳಗಿದುದೇಕಲಕ್ಷಮಿತಯೊ[1]ಜನದುದ್ಘದಗಿ ನೀಲವರ್ಣಮು
ಜ್ವಳಿಸಿರೆ ಗೋಪುರಾಕೃತಿಯನಾಳ್ಪು ಯಜುಃಶ್ರುತಿ ದಕ್ಷಿಣಾಶೆಯೊಳ್
ಬಳವದನಂತರೋಮಶಗಣಾವೃತನಲ್ಲಿ ವಿರಾಜಿಪಂ ವಧೂ
ವಿಳಸಿತ ವೀರಭದ್ರವಿಭುವಿ ಖಡ್ಗಧನುಃಶರಖೇಟಕಾನ್ವಿತಂ ೬೬

ಅತಿಸಿತಮೇಕಲಕ್ಷಪರಿಲಕ್ಷಿತಯೋಜನದುದ್ದಮಾಳ್ದು ನೀ
ಳ್ದತಿಶಯಸಾಮವೇದಮದು ಗೋಪುರವಾಗಿ ವಿರಾಜಿಕುಂ ಪಯಃ
ಪತಿದಿಶೆಯೊಳ್ ಬಟಿಕ್ಕದರ ಬಂಕದೊಳೊಪ್ಪುಗುಮುಜ್ವಳಾಂಗನ
ನ್ವಿತ ಬಹುಸಂಖ್ಯ ರುದ್ರಗಣಸೇವಿತನಗ್ಗದ ನೀಲಲೋಹಿತಂ ೬೭

ಮತ್ತೇಭ ಗಣಿತಂ ಗಾವುದವೊಂದು ಲಕ್ಷಮೆನೆ ಕೈಕೊಂಡುದ್ದಮುಂ ತಾನಥ
ರ್ವಣವೇದಂ ಘನಗೋಪುರಾಕೃತಿಯೊಳಿರ್ಕುಂ ತಾಳ್ದು ಪೊಂಬಣ್ಣಮುಂ
ಪ್ರಣುತಾಂಗಂ ಬಡಗಲ್ ಗಣಾಳಿಸಹಿತಂ ತದ್‌ದ್ವಾರದೊಳ್ ಶೌರ್ಯ[3]ಭೂ
ಷಣನಿರ್ಕುಂ ಪೃದಿಳಿದೇಟ್ಗೆಯಿಂ ಸಲೆ ಮಹಾಕಾಳಂ ಕರಾಳಾಯುಧಂ ೬೮

ಕೈಯಲ್ಲಿ ಹಿಡಿದ ನಂದಿಕೇಶ್ವರನು ನಾಲ್ಕುಸಾವಿರ ಕೋಟಿ ರುದ್ರಗಣಗಳು ತನ್ನನ್ನು ಬಳಸಿರಲು ಕಂಗೊಳಿಸುತ್ತಿದ್ದನು. ಬ್ರಹ್ಮಾದಿಗಳು (ಶಿವನ ದರ್ಶನಕ್ಕೆ) ಸಮಯವನ್ನು ಕಾಯುತ್ತಾ ಇದ್ದರು. ೬೬. ದಕ್ಷಿಣ ದಿಕ್ಕಿನಲ್ಲಿ ಒಂದು ಲಕ್ಷ ಗಾವುದದಳತೆಯ ಎತ್ತರವುಳ್ಳ ಗೋಪುರಾಕೃತಿಯ ದ್ವಾರದಲ್ಲಿ ಕಪ್ಪುಬಣ್ಣದ ಕಾಂತಿಯಿಂದ ಕೂಡಿ ಯಜುರ್ವೇದವು ಕಂಗೊಳಿಸುತ್ತಿದ್ದಿತು. ಅಲ್ಲಿ ಪ್ರಬಲರೂ ನಾಶರಹಿತರೂ ವ್ಯೋಮಕೇಶನಾದ ಈಶ್ವರನ ಜಟೆಯಿಂದ ಉದ್ಭವಿಸಿದವರೂ ಆದ ಪ್ರಮಥಗಣಗಳಿಂದ ಕೂಡಿಕೊಂಡು ಕತ್ತಿ, ಬಿಲ್ಲು, ಬಾಣ, ಕೇಟಕಧಾರಿಯಾಗಿ, ಭದ್ರಕಾಳಿಯೆಂಬ ಪತ್ನಿಯೊಡಗೂಡಿ ವೀರಭದ್ರಸ್ವಾಮಿಯು ವಿರಾಜಿಸುತ್ತಿದ್ದನು. ೬೭. ಅತಿಶಯವಾಗಿ ಧವಳಕಾಂತಿಯಿಂದ ಕೂಡಿ, ಒಂದು ಲಕ್ಷ ಗಾವುದ ಎತ್ತರವಾಗಿದ್ದು, ಉನ್ನತವೂ, ಪ್ರಶಸ್ತವೂ ಆದ ಸಾಮವೇದವು ಗೋಪುರಾಕೃತಿಯಿಂದ ಪಶ್ಚಿಮ ದಿಕ್ಕಿನಲ್ಲಿ ಪ್ರಕಾಶಿಸುತ್ತಿದ್ದಿತು. ಆ ಗೋಪುರದ್ವಾರದ ಬಳಿಯಲ್ಲಿ ಹೊಳೆಯುತ್ತಿರುವ ದೇಹಕಾಂತಿಯುಳ್ಳ ಅಸಂಖ್ಯಾತ ರುದ್ರಗಣಸೇವಿತನಾದ ನೀಲಲೋಹಿತ ರುದ್ರನು ಕಂಗೊಳಿಸಿದನು. ೬೮. ಲೆಕ್ಕಮಾಡಲು ಒಂದು ಲಕ್ಷ ಗಾವುದದಷ್ಟು ಉನ್ನತವಾಗಿ ಉತ್ತರಕ್ಕೆ ಅಥರ್ವವೇದವು ಪ್ರಶಸ್ತವಾದ ಗೋಪುರಾಕೃತಿಯನ್ನು ತಳೆದು ಹೊಂಬಣ್ಣದ ಕಾಂತಿಯಿಂದ ಪ್ರಕಾಶಿಸುತ್ತಿರುವುದು. ಅದರ ದ್ವಾರಪ್ರದೇಶದಲ್ಲಿ ಸ್ತುತ್ಯ ಸ್ವರೂಪನೂ, ಗಣಗಳ ಸಮೂಹದಿಂದ ಕೂಡಿದವನೂ, ಶೌರ್ಯಭೂಷಣನೂ, ಭಯಂಕರ ಆಯುಧಗಳನ್ನು ಧರಿಸಿದವನೂ ಆದ ಮಹಾಕಾಲನು ಉತ್ಕರ್ಷದಿಂದ

೧ ದುದ್ದತಿ (ಚ) ; ದುದ್ದದೆ (ಯ) ೨ ಭೃತ (ಛ) ೩ ಸೌರ್ಯ (ಕ, ಗ, ತ) ೪ ಷದೆ(ಯ, ಲ)

ಚಂಪಕ ಬಳಸಿಡಿದಿರ್ದ ಮಾಣಿಕದ ಮಂಟಪರಾಜಿಯು ರಮ್ಯಹರ್ಮ್ಯಸಂ
ಕುಳದ ಕನತ್ಸುವರ್ಣಮಯಶಾಲದ ನಾಗಿಲ್ದೆಸೆ ಗೋಪುರಂಗಳು
ಜ್ವಲಿಸುವ ದಾರವಟ್ಟದ ಬೆಡಂಗಮರ್ದೊಪ್ಪಿರೆ ಮಧ್ಯದಲ್ಲಿ ಕಣ್
ಗೊಳಿಸಿದುದೇಕಕೋಟಿಮಿತಯೋಜನದೋಲಗಶಾಲೆ ಶೂಲಿಯಾ ೧೯

ಮರಕತವೇದಿ ಮಾಣಿಕದ ಬೋದಿಗೆ ನೀಲದ ಕಂಬಮಿಂದುಕಾಂ
ತರುಚಿರಕುಟ್ಟಿಮಂ ಪವಳದೊಳ್ದೊಲೆ ರತ್ನದ ಜಂತೆ ಪುಷ್ಪರಾ
ಗರುಚಿ ವಿತರ್ದಿ ಮೌಕ್ತಿಕಲಸತ್ಕಲಶಂ ಪರಿಶೋಭಿಪೆತ್ತು ಬ
ಜ್ಜಿರದ ಕವಾಟವೊಂದೆ ಕರಮೊಪ್ಪಿದುದೀಶಸಭಾನಿಕೇತನಂ ೨೦

ಉತ್ಪಲ ಕನ್ನಡಿಯಲ್ಲಿ ಮಾರ್ಪೊಳೆವ ದಂತಿಯ ಮಾಳ್ಕೆಯೊಳಬ್ಜಜಾಂಡಮ
ತ್ಯುನ್ನತ ತತ್ಸಭಾಗೃಹಮಹಾಘೃಣಿಮಂಡಲದಲ್ಲಿ ತೋರ್ಕುಮು
ದ್ಯನ್ನಳಿನೀಪ್ರದೀಧಿತಿಯ ಮುಂದಣ ಮಿಂಬುಳುಮಂತೆ ತತ್ಸಭಾ
ಸನ್ನಿಧಿಯಲ್ಲಿ ಕಾಣಿಪುದು ಪನ್ನಗರಾಜಶಿಖಾಮಣಿವ್ರಜಂ ೨೧

ಕೂಡಿದ್ದನು. ೧೯. ಸುತ್ತಲೂ ನಿಬಿಡವಾಗಿದ್ದ ಮಾಣಿಕ್ಯದ ಮಂಟಪಗಳ ಸಾಲುಗಳೂ, ರಮಣೀಯವಾದ ಸೌಧಗಳೂ, ಶ್ರೇಣಿಗಳೂ, ಬೆಳಗುತ್ತಲಿದ್ದ ಕನಕಮಯವಾದ ಕೈಸಾಲುಗಳೂ, ನಾಲ್ಕು ದಿಕ್ಕಿನಲ್ಲಿರುವ ಗೋಪುರಗಳಿಂದ ಕೂಡಿದ್ದ ಬಾಗಿಲುಗಳ ಬೆಡಗೂ ಓರಣೆಯಾಗಿ ಶೋಭಿಸುತ್ತಿರಲು, ಅವುಗಳ ಮಧ್ಯದಲ್ಲಿ ಒಂದು ಕೋಟಿ ಗಾವುದ ಪ್ರಮಾಣವುಳ್ಳ ಪರಮೇಶ್ವರ ಓಲಗಶಾಲೆಯು ಕಂಗೊಳಿಸಿದುದು. ೨೦. ಪಚ್ಚೆಕಲ್ಲಿನ ಜಗುಲಿಗಳು, ಪದ್ಮರಾಗಗಳ ಕಂಭಗಳ ಮೇಲಿರುವ ತುಂಡುದೊಲೆಗಳು, ಇಂದ್ರನೀಲಮಣಿಯ ಸ್ತಂಭಗಳು, ಚಂದ್ರಕಾಂತಶಿಲೆಗಳಿಂದ ರಂಜಿತವಾದ ನೆಲ, ಹವಳದ ಉತ್ಕೃಷ್ಟವಾದ ದೂಲಗಳು, ರತ್ನದ ಅಡ್ಡ ಹಲಗೆಗಳು, ಪುಷ್ಯರಾಗಗಳ ಕಾಂತಿಯುಳ್ಳ ಜಗುಲಿ, ಮುತ್ತುಗಳಿಂದ ಅಲಂಕೃತವಾದ ಕಲಶಗಳು, ಎಲ್ಲೆಡೆ ಪ್ರಕಾಶಿಸುತ್ತಿರುವ ವಜ್ರಗಳ ಬಾಗಿಲುಗಳುಳ್ಳ ಶಿವನ ಓಲಗಶಾಲೆಯು ಶೋಭಿಸುತ್ತಿದ್ದಿತು. ೨೧. ಆನೆಯು (ಸಣ್ಣ) ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಶತಕೋಟಿ ಯೋಜನ ವಿಸ್ತೀರ್ಣವುಳ್ಳ ಬ್ರಹ್ಮಾಂಡವು ಮಹೋನ್ನತವಾದ ಆ ಸಭಾಗೃಹದ ಅತಿಶಯ ಪ್ರಭಾಮಂಡಲದಲ್ಲಿ ಅಡಗಿದಂತೆ ಕಾಣುತ್ತಿದ್ದಿತು. ಉದಯರವಿಯ ಪ್ರಜ್ವಲಿಸುವ ಪ್ರಕಾಶದ ಮುಂದೆ ಮಿಂಚುಹುಳುಗಳು (ಕಾಂತಿಹೀನವಾಗುವಂತೆ) ಆ ಸಭೆಯ ಕಾಂತಿಸಮೀಪದಲ್ಲಿ ಆದಿಶೇಷನ

---

೧ ಸಾ (ಚ) ೨ ರಾಜ (ಚ)

ವಚನ ಅಂತೊಪ್ಪುವನಲರವಿಶಶಿಕೋಟಿರುಚಿಯಂ ಪಟಿದು ಪಜ್ವಳಿಪ ವಿಶ್ವಲಪ್ರಭಾ ಮಂಡಲಂ ಪುದಿದ ಮಹಾಸ್ಥಾನಮಂಟಪದ ಮಧ್ಯದೊಳೇಕಲಕ್ಷಗಿಯೋಜನದನಿತು ವಿಗಿಸ್ತೀರ್ಣಮು ನಿತುನ್ನತಿಯನಾಳ್ದು ಕಣ್ಗೊಳಿಪ ಚಿಂತಾಮಣಿಮಹಿತ ಮಂಗಳಮಯ ಮಹಾಪೀಠಮನೀಶಾನದಿಶೆಯೊಳೈ ಶ್ವರ್ಯಮೆ ಮೃಗೇಂದ್ರಾಕಾರಂಬೆತ್ತು ವಿಮಳ ಧರ್ಮಮೆ ವೃಪಭಾಕೃತಿವಡೆದನಲಾಶೆಯೊಳ್ ಸುಜ್ಞಾನಮೆ ಶಾಂತಿದೇವತಾರೂಪದಿಂ ನಿರೃತಿಯತ್ತಲ್ ವೈರಾಗ್ಯಮೆ ವೈಭವಸ್ವರೂಪದಿನನಿಲದಿಶೆಯೊಳ್ ಪರಿವಿಡಿಯಿಂ ಪೂರ್ವದಕ್ಷಿಣಪಶ್ಚಿಮೋತ್ತರಂಗಳೊಳ್ ಭೂತರೂಪಂದಾಳ್ದ ಧರ್ಮಮುಮಂ ವಿಕ ಟಾಂಗಮೆನಿಪ ಜ್ಞಾನಮಂ ಘೋರವೇಷಂಬಡೆದ ವೈರಾಗ್ಯಮಂ ವಿಕೃತಕಾಯಾನ್ವಿತಮಾದನೈಶ್ವರ್ಯಮಂ ಮೆಟ್ಟಿನಿಂದುಮಿಂತೆಣ್ದೆಸೆಯೊಳೆಣ್ಬರಿಜಂ ಪೊತ್ತು ಸೇವಿಸುತ್ತಮಿರೆ ತದಂತರಾಳಭಾಸುರಮೆನಿಸಿ

ಮಹಾಸ್ರಗ್ಧರೆ ಫಣಿರಾಜಂ ನಾಳಮಾಗುತ್ತಿರೆ ಮಿಸುಪೆಸಳೆಂಟಾಗೆ ನಿರ್ವ್ಯಾಜದಿಂ ಸಂ
ದಣಿಮಾದ್ಯೈಶ್ವರ್ಯಮುಂ ವಾಮೆಯೆ ಮೊದಲೆನಿಪಾ ಶಕ್ತಿಗಳ್ ಕರ್ಣಿಕಾಲ

ಹೆಡೆಯ ರತ್ನಗಳ ಸಾಲುಗಳು (ನಿಸ್ತೇಜವಾಗಿ) ಇದ್ದುವು. ವಚನ: ಈ ವಿಧವಾಗಿ ಕೋಟಿ ಸೂರ್ಯರ, ಕೋಟಿ ಚಂದ್ರರ, ಕೋಟಿ ಅಗ್ನಿಗಳ ಪ್ರಕಾಶವನ್ನು ತಿರಸ್ಕರಿಸಿ ಬೆಳಗುತ್ತಲಿದ್ದ ಮಹಾಪ್ರಭಾಮಂಡಲವು ತುಂಬಿದ್ದ ಮಹಾಸ್ಥಾನ ಮಂಟಪಮಧ್ಯದಲ್ಲಿ ಒಂದು ಲಕ್ಷ ಯೋಜನದಷ್ಟು ವಿಸ್ತಾರವಾಗಿಯೂ, ಅಷ್ಟು ಎತ್ತರವಾಗಿಯೂ ಇದ್ದು ಕಂಗೊಳಿಸುತ್ತ 'ಲಿದ್ದ, ಅನರ್ಘ್ಯವಾದ ಚಿಂತಾಮಣಿಗಳಿಂದ ಶೋಭಿಸುತ್ತ, ಮಂಗಳಮಯವಾದ ಮಹಾ ಪೀಠವಿದ್ದಿತು. ಅದರ ಈಶಾನ್ಯದಿಕ್ಕಿನಲ್ಲಿ ಪ್ರಭುಶಕ್ತಿಯೇ ಸಿಂಹದ ರೂಪವನ್ನು ಹೊಂದಿ, ಅಗ್ನಿದಿಗ್ಭಾಗದಲ್ಲಿ ಪವಿತ್ರವಾದ ಧರ್ಮವೇ ವೃಷಭವನ್ನು ಹೊಂದಿ, ನೈರುತ್ಯ ದಿಕ್ಕಿನಲ್ಲಿ ಉತ್ಕೃಷ್ಟವಾದ ಜ್ಞಾನವೇ ಶಾಂತಿದೇವತಾರೂಪದಿಂದ ಕೂಡಿ, ವಾಯುವ್ಯ ದಿಕ್ಕಿನಲ್ಲಿ ವೈರಾಗ್ಯವೇ ವೈಭವಸ್ವರೂಪದಿಂದ ಇದ್ದುವು. ಕ್ರಮವಾಗಿ ಅವು ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಲ್ಲಿ ಭೂತಾಕಾರವನ್ನು ಹೊಂದಿದ್ದ ಅಧರ್ಮವನ್ನೂ ಅಂದಗೆಟ್ಟು ವಿಕಾರರೂಪದಿಂದಿದ್ದ ಅಜ್ಞಾನವನ್ನೂ,ಭಯಂಕರರೂಪದಿಂದಿದ್ದ ಅವೈರಾಗ್ಯ ವನ್ನೂ, ವಕ್ರವಾದ ದೇಹದಿಂದಿದ್ದ ಅನೈಶ್ವರ್ಯ ಮೊದಲಾದುವನ್ನೂ ತುಳಿದು ನಿಂತು ಇದ್ದವು. ಈ ರೀತಿಯಾಗಿ ಎಂಟು ದಿಕ್ಕಿನಲ್ಲಿಯೂ ಎಂಟು ಬಗೆಯ ಆಕಾರಗಳನ್ನು ಪಡೆದು ಸೇವಿಸುತ್ತಿರಲು, ಅದರ ಮಧ್ಯೆ ಮನೋಹರವಾಗಿ ಕಮಲಾಸನವು ಶೋಭಿಸು ತ್ತಿದ್ದಿತು. ೭೨. ಅದಕ್ಕೆ ಆದಿಶೇಷನೇ ಕಾಂಡವಾಗಿಯೂ, ಅಣಿಮಾದಿ ಅಷ್ಟೈ ಶ್ವರ್ಯಗಳೇ ತಮತಮಗೆ ಕೂಡಿಕೊಂಡು ಎಂಟು ಎಸಳುಗಳಾಗಿಯೂ, ವಾಮಾದಿ ಶಕ್ತಿಸ್ವರೂಪಿಣಿಯರೇ ಮಧ್ಯದಲ್ಲಿನ ದಿಂಡಾಗಿಯೂ ಶೋಭಿಸುತ್ತಿದ್ದರು. ವಿದ್ಯಾಧಿ

೧–೧ ಯೋಜನದ ಎ (ಚ)

ಕ್ಷಣಮಂ ತಾಳ್ದೊಪ್ಪೆ ವಿದ್ಯಾಧಿಪರೆ ತೊಳಪ ತತ್ಕೇಸರಾಕಾರದಿಂ ಸಂ
ದಣಿಸುತ್ತಿಂ ತೋರೆ ಸೂರ್ಯಾನಲಶಶಿಯುತಮೊಪ್ಪಿರ್ದುದಂ ಭೋಜಪೀಠಂ ೭೨

ವಚನ ತತ್ಪದ್ಮಪೀಠದೊಳ್ ಕೌಸುಂಭತಲ್ಪಮೆನೆ ಕೆಂಬೊಳೆಪಿಂ ತೊಳಪ ಮಹಾಬಿಂದುವೆಂಬ ಮೆಲ್ವಾಸೆಯಲ್ಲಿ ಗಾಡಿಯಿಂ ಮೂರ್ತಿಗೊಂಡು

ಮತ್ತೇಭ ಚಿದಚಿತ್ಪ್ರೇರಕನದ್ವಿತೀಯನನಘಂ ವೇದಾಂತವೇದ್ಯಂ ಕಲಾ
ಸ್ಪದನಾದ್ಯಂತವಿದೂರನಾರ್ಯನಜಡಂ ವಿಶ್ವಾಧಿಕಂ ವಿಶ್ವಮೂ
ರ್ತಿ ದಯಾವಾರ್ಧಿ ಜಗತ್ಸನಿಸ್ಥಿತಿಲಯಾಧಾರಂ ಮಹಾಭೋಗಮೋ
ಕ್ಷದನಬ್ಜಾಕ್ಷಮುಖಾಮರಾರ್ಚಿತಪದಂ ಕಣ್ಗೊಪ್ಪಿದಂ ಶಂಕರಂ ೭೩

ಉತ್ಪಲ ಬಾಲಬೊಟಿ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ ಭಾ
ಳಾಂಬಕಮುಲ್ಲಸತ್ಫಣಿಪಕುಂಡಲಮಾಯತಬಾಹುಕೃತ್ತಿ ವ
ಸ್ತ್ರಂ ಬಗೆಗೊಳ್ವ ನುಣ್ಗರೆ ವರಾಭಯಶೂಲಮೃಗಾಂಕಪಾಣಿಯುಂ
ಕಂಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ ೭೪

ದೇವತೆಗಳ ಬೆಳಗುತ್ತಿರುವ ಅಹರ ಕುಸುಮಗಳಾಗಿ ಆಸನವು ಸೂರ್ಯಾಗ್ನಿಚಂದ್ರರ ಪ್ರಕಾಶದಿಂದ ಕೂಡಿದ್ದಿತು. ವಚನ : ಆ ಪದ್ಮಪೀಠದಲ್ಲಿ ಕೇಸರಿಬಣ್ಣದ ಹಾಸಿಗೆಯೊಬಂತೆ ಅರುಣಕಾಂತಿಯಿಂದ ಬೆಳಗುತ್ತಲಿದ್ದ ಮಹಾಬಿಂದುವೆಂಬ ಮೆಲ್ವಾಸಿನಲ್ಲಿ ಉಪಸ್ಥಿತನಾಗಿ ಶಂಕರನು ಕಂಗೊಳಿಸಿದ್ದನು. ೭೩. ಶಿವನು ಜೀವಾತ್ಮರಿಗೂ, ಕಾಲ, ಆಕಾಶ, ವಾಯು ಮುಂತಾದುವುಗಳಿಗೆ ಪ್ರೇರಕನು, ಏಕಮಾತ್ರನು, ಪಾಪರಹಿತನು, ಉಪನಿಷತ್ತುಗಳಿಂದ ತಿಳಿಯತಕ್ಕವನು, ಚತುಷ್ಷಷ್ಟಿ ಕಲೆಗಳಿಗೆ ಕಾರಣಸ್ವರೂಪನು, ಆದ್ಯಂತರಹಿತನು, ಪೂಜ್ಯನು, ಆವರಣ, ವಿಕ್ಷೇಪಗಳಿಲ್ಲದ ನಿಜಸ್ವರೂಪವುಳ್ಳವನು. ವಿಶ್ವದಲ್ಲೆಲ್ಲಾ ಶ್ರೇಷ್ಠನು, ಪ್ರಪಂಚವೇ ತನ್ನ ಆಕಾರವಾಗುಳ್ಳವನು, ಕೃಪಾಸಾಗರನು ಮತ್ತು ಲೋಕಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು, ಅತ್ಯುತ್ಕೃಷ್ಟವಾದ ಐಹಿಕ ಭೋಗಗಳನ್ನೂ, ಸಗುಣ, ನಿರ್ಗುಣ ಮುಕ್ತಿಗಳನ್ನೂ ಅನುಗ್ರಹಿಸುವವನು, ವಿಷ್ಣುವೇ ಮೊದಲಾದ ದೇವತೆಗಳು ಅವನ ಪಾದಸೇವೆಯನ್ನು ಮಾಡುವರು. ೭೪. ಅವನ ಕೆಂಜಡೆಯ ಮುಡಿಯಲ್ಲಿ ದೇವಗಂಗೆಯೂ, ಚಂದ್ರಲೇಖೆಯೂ ಇದ್ದುವು. ಹಣೆಯಲ್ಲಿ ಫಾಲನಯನ, ಶೋಭಿಸುತ್ತಿರುವ ನಾಗೇಂದ್ರನೇ ಕರ್ಣಾಭರಣ, ಚರ್ಮಾಂಬರ, ಕಂಠ ಪ್ರದೇಶದಲ್ಲಿ ಮನೋಹರವೂ, ನುಣುಪೂ ಆಗಿರುವ ಕಪ್ಪು ಛಾಯೆ, ಕೈಗಳಲ್ಲಿ ವರ, ಅಭಯ, ಶೂಲ ಮತ್ತು ಮೃಗ, ಅಗಲದೆ ತನ್ನ ತೊಡೆಯಲ್ಲಿ ವಿರಾಜಮಾನಳಾದ

೧ ಸತ್ಕೇಸ (ಯ)

ತಾಪತ್ರಯಾಪಹಾರಿ ವಿ
ರೂಪಾಕ್ಷಂ ಭುಜಗಭೂಷನನಘನವಿದ್ಯಾ
ಲೋಪಂ ಭೃತಶಿಸಿತಸಿಭಸಿತಾಶಿ
ಲೇಪಂ ಕಣ್ಗೆಸೆದನಭವನನುಪಮವಿಭವಂ ೭೫

ಚಂಪಕ ಎಳವೆಱೆಯಾಂತ ರತ್ನಮಕುಟಂ ಮಣಿಭೂಷಣಮಿಂದುಬಿಂಬ ಮು
ಜುಳವದನಂ ನವಾರುಣಕರಾಂಶುಕಮುಜ್ವಳಕಾಯಕಾಂತಿ ಸಂ
ದಳಿಸೆ ಮೃಡಾಂಕಪೀಠಮನಳಂಕರಿಸುತ್ತೆ ಶುಭಾಂಗಿ ಸರ್ವಮಂ
ಗಳೆ ರತಿಕೋಟಿಯುಂ ಪೞಿದು ರಂಜಿಸಿದಳ್ ಪದವೆತ್ತ ಚೆಲ್ವಿನಿಂ ೭೬

ಮಿಸುಪಲರ್ಗಣ್ಣ ಕಾಂತಿ ತಿಳಿಜೊನ್ನಮಿದೆಂಬಿನಮಾಳ್ದ ಭೂಷಣ
ಪ್ರಸರದೆ ರನ್ನದೊಳ್ವೆಳಗು ಚೆಂಬಿಸಿಲೆಂತಿರೆ ತಾಳ್ದಲಂಪನೆ
ಣ್ದೆಸೆಯೊಳಲರ್ದು ಪರ್ಬಿ ವಿಸಟಂಬರಿಯುತ್ತಿರೆ ಮಂತ್ರದೇವತಾ
ವಿಸರವೊಜಲ್ದು ಸೇವಿಸೆ ಪದಾಬ್ಜಮನದ್ರಿಜೆ ಕಣ್ಗೆ ತೋರಿದಳ್ ೭೭

ಮತ್ತೇಭ ಕರದೊಳ್ ಕಾನಕಚಾಮರಂಬಿಡಿದು ವೇದವ್ರಾತಮಂ ಪೆತ್ತ ಭಾ
ಸುರ ಗಾಯತ್ರಿ ಕಡಂಗಿ ಡಾಳಿಸೆ ಮಹಾಸಾವಿತ್ರಿ ತಾಳ್ದಲ್ಲಿ ನಿಂ

ಪಾರ್ವತಿಯಿಂದ ಕೂಡಿ ಮಹೇಶ್ವರನು ಶೋಭಿಸುತ್ತಿದ್ದನು. ೭೫. ಅಭವನು ಮೂರು ಬಗೆಯ ಪಾಪಗಳನ್ನು[1] ನಿವಾರಿಸುವವನು, ವಿರೂಪಾಕ್ಷ, ಸರ್ಪಾಭರಣ, ಪಾಪದೂರ, ಅಜ್ಞಾನರಹಿತ, ಶುಭ್ರವಾದ ಭಸ್ಮಭೂಷಿತ ಮತ್ತು ಉಪಮಾತೀತವಾದ ವೈಭವದಿಂದ ಕೂಡಿದವನು. ೭೬. ರತ್ನಕಿರೀಟದಲ್ಲಿ ಖಚಿತನಾದ ಬಾಲಚಂದ್ರ, ಮಣಿಭೂಷಣಗಳು. ಚಂದ್ರಬಿಂಬದಂತೆ ಮನೋಹರವಾದ ಮುಖ, ನವೀನ ಅರುಣಕಿರಣಗಳಂತೆ ಉಜ್ಜ್ವಲ ವಾದ ಉಡಿಗೆಗಳನ್ನು ಧರಿಸಿದ ಶಿವನ ಶರೀರವು ದೇದೀಪ್ಯಮಾನವಾಗಿದ್ದಿತು. ಶಿವನ ಅಂಕಪೀಠಸ್ಥಳಾಗಿ ಶೋಭನಾಂಗಿಯೂ, ರತಿ-ರತಿ ಕೋಟಿ ಲಾವಣ್ಯವನ್ನು ಧಿಕ್ಕರಿಸುವ ಸೌಂದರ್ಯನಿಧಿಯಾದ ಸರ್ವಮಂಗಳೆಯು ಶೃಂಗಾರಸಾಕಾರಳಾಗಿ ರಂಜಿಸಿದಳು. ೭೭. ಹೊಳೆಯುತ್ತಿರುವ ಕಮಲನಯನಗಳ ಕಾಂತಿಯು ತಿಳಿಬೆಳುದಿಂಗಳಂತಿದ್ದಿತು. ಆಭರಣ ಸಮೂಹಗಳ ರತ್ನಪ್ರಭೆಯು ಎಳಬಿಸಿಲಿನಂತಿದ್ದಿತು. ವ್ಯಾಪಿಸುತ್ತಲಿದ್ದ ಅವು ಗಳ ಪ್ರಭಾಮಂಡಲವು ಎಂಟು ದಿಕ್ಕುಗಳನ್ನೂ ಆವರಿಸುತ್ತಿದ್ದಿತು. ಮಂತ್ರದೇವತೆಗಳ ಸಮೂಹವು ಗಾನ ಮಾಡುತ್ತಾ ಪಾದಕಮಲಗಳನ್ನು ಸೇವಿಸುತ್ತಿರಲು, ಅದ್ರಿಜೆಯು ಗೋಚರಿಸಿದಳು. ೭೮. ವೇದರಾಶಿಗೆ ಮಾತೆಯಾದ ಗಾಯಿತ್ರಿಯು ಕೈಯಲ್ಲಿ ಕನಕ-ಚಾಮರಗಳನ್ನು ಹಿಡಿದು ಉತ್ಸಾಹದಿಂದ ಬೀಸುತ್ತಿದ್ದಳು. ಶಕ್ತಿದೇವತಾಸಮೂಹ

---

೧ ಪಾಪ (ಚ) ೨ ಧೃತ (ಯ); ಭಾ (ರ, ಲ) ೩-೩ ಭಸ್ಮಾ (ಗ, ತ, ರ)

[1] ಮೂರು ಪಾಪಗಳು: ಕಾಯಿಕ, ವಾಚಿಕ ಮತ್ತು ಮಾನಸಿಕ.

ದಿರೆ ಶಕ್ರಿವೃಷಮಾನ್ಯೆ ಪೊಂಡವಳಿಗೆಯಾಂತಿರ್ದಾದಿಗಿದೇವೀಸಮು
ತ್ಕರವೋಲ್ದಾಂತಿರೆ ರತ್ನವಾವುಗೆಯನೊಪ್ಪಿರ್ದಂ ಭವಾನೀಧವಂ ೭೮

ವಚನ ಮತ್ತಮಾ ಮಹೇಶ್ವರಂ ವ್ಯೋಮದಂತೆ ವಿತತಕ್ಷಣರುಚಿಮಹಾಧ್ವನಿಯುಕ್ತ ಘನಗಣ ಸಮೇತನುಂ, ಸದಾರಾಜಹರಿಸಮಂಚಿತನುಂ, ವನದಂತೆ ಸಮುನ್ಮೀಳಿತ ವಿಶಾಖಾಂಕನಗಜಾತಾನ್ವಿತನುಂ, ಮಧುರಸಾರೋಜ್ಜ್ವಲಸುಮನೋವಿರಾಜಿತನುಂ, ವಿಪಿನದಂತನೇಕಪಾರಿಜಾತಾಚ್ಛಪುನ್ನಾಗಕದಂಬಾಕಲಿತ

ದೊಡಗೂಡಿ ಪೂಜ್ಯಳಾದ ಮಹಾಸಾವಿತ್ರಿಯು ಹೊನ್ನಿನ ಪೀಕದಾನಿಯನ್ನು ಹಿಡಿದು ನಿಂತಿದ್ದಳು. ವಾಣಿಯೇ ಮೊದಲಾದ ದೇವತಾಸಮೂಹವು ಶಿವನ ರತ್ನಪಾದುಕೆ ಗಳನ್ನು ಹೊತ್ತು ನಿಂತಿರಲು, ಭವಾನೀಪತಿಯು ಕಂಗೊಳಿಸುತ್ತಲಿದ್ದನು. ವಚನ : ಮತ್ತೆ ಆ ಪರಮೇಶ್ವರನು (I) ವಿತತ-ವಿಸ್ತಾರವಾದ, ಕ್ಷಣ-ಅಭಿಷೇಕ ಪೂಜಾದಿ ಉತ್ಸವ ಗಳಲ್ಲಿ, ರುಚಿ-ಅನುರಾಗವುಳ್ಳ, ಮಹಾಧ್ವ-ಉಪಾಸನಾಮಾರ್ಗಗಳಲ್ಲಿ, ನಿಯುಕ್ತ-ನಿಷ್ಠ ರಾದ, ಘನ-ನಿಶ್ಚಲರಾದ, ಗಣ-ಶಿವಭಕ್ತರಾದ ಪ್ರಮಥಗಣಗಳಿಂದ, ಸಮೇತನುಂ-ಕೂಡಿ ದವನೂ, (II) ಆಕಾರದ ಪರವಾಗಿ-ವಿಸ್ತಾರವಾದ ಮಿಂಚುಗಳಿಂದಲೂ, ಗುಡುಗು ಗಳಿಂದಲೂ ಕೂಡಿದ ಮೇಘರಾಶಿಯಿಂದ ಕೂಡಿರುವುದು ; ಮಹೇಶ್ವರನು (I) ಸದಾರ- ಪತ್ನೀಸಮೇತರಾದ, ಅಜ-ಬ್ರಹ್ಮನಿಂದಲೂ, ಹರಿ-ವಿಷ್ಣುವಿನಿಂದಲೂ, ಸಮಂಚಿತಂ- ಚೆನ್ನಾಗಿ ಪೂಜಿತನಾದವನು ; ಆಕಾರವು (II) ಸದಾ-ಯಾವಾಗಲೂ, ರಾಜ-ಚಂದ್ರ ನಿಂದಲೂ, ಹರಿ-ಸೂರ್ಯನಿಂದಲೂ ಅಥವಾ ವಾಯುವಿನಿಂದಲೂ, ಸಮಂಚಿತಂ- ಸಂಚಾರವನ್ನು ಹೊಂದಿರುವುದು. ಶಿವನು (I) ಸಮುನ್ಮೀಳಿತ-ಚೆನ್ನಾಗಿ ಏರಿ ಕುಳಿತಿರುವ, ವಿಶಾಖಾ-ಕುಮಾರಸ್ವಾಮಿಯುಳ್ಳ, ಅಂಕ-ತೊಡೆಗಳುಳ್ಳ, ನಗಜಾತಾ-ಪಾರ್ವತೀದೇವಿ ಯೊಡನೆ, ಅನ್ವಿತಂ-ಕೂಡಿದವನು ವನವು (II) ಸಮುನ್ಮೀಳಿತ-ಚೆನ್ನಾಗಿ ಮೇಲೆ ಸೇರಿ ಕುಳಿತ, ವಿ-ಪಕ್ಷಿಗಳುಳ್ಳ, ಶಾಖಾ-ಕೊಂಬೆಗಳೇ, ಅಂಕ—ಗುರ್ತಾಗಿವುಳ್ಳ, ನಗಜಾತ-ವೃಕ್ಷ ರಾಜಿಗಳಿಂದ, ಅನ್ವಿತಂ-ಕೂಡಿರುವುದು ; ಶಿವನು (I) ಮಧುರ-ಪ್ರಿಯವಾದ, ಸಾರ- ಜ್ಞಾನ, ಬಲ, ಕ್ರಿಯೆಗಳಿಂದ, ಉಜ್ಜ್ವಲ-ಶೋಭಿಸುವ. ಸುಮನಸ್—ದೇವತೆಗಳಿಂದಲೂ, ಭಕ್ತರಿಂದಲೂ, ವಿರಾಜಿತಂ-ಪ್ರಕಾಶಿಸುವನು ; ವನವು (II) ಮಧುರಸ-ಮಕರಂದರಸ ದಿಂದ, ಅರ-ವಿಶೇಷವಾಗಿ, ಉಜ್ಜ್ವಲ-ಪ್ರಕಾಶಿಸುವ, ಸುಮ-ಹೂಗಳಿಂದ, ರಾಜಿತಂ- ಶೋಭಿಸುತ್ತಿರುವುದು ; ಶಿವನು (I) ಅನೇಕಗಳಾದ ಪಾರಿಜಾತಾದಿ ಪುಷ್ಪಗಳ, ಶುಭ್ರ ವಾದ ಪುನ್ನಾಗಪುಷ್ಪಗಳ ರಾಶಿಯಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನು ; ವನವು (III) ಅನೇಕಪ-ದ್ವಿಪ-ಸೊಂಡಿಲಿನಿಂದಲೂ, ಬಾಯಿಯಿಂದಲೂ ಪಾನಮಾಡುವ ಆನೆಗಳಿಗೆ,

---

೧-೧ ಯಂ ವಾಣ್ಯಾದಿ (ಯ, ರ, ಲ); ಯಂತಿರ್ದಾದಿ (ಚ) ೨ ವಿತತ (ಯ, ರ, ಲ)
೩-೩ ಹಂಸಸಮಂಚಿ (ಯ); ಹರಿಹರಿಮುಂಚಿ (ಲ)

ಪದನುಂ, ಸುರಸಭಾಸಮಾನಸಶಕ್ತಿಶರಭವಾರಚಿತವಿಭ್ರಮನುಂ, ಸಮುದ್ರದಂತೆ ನಿಜಪದಾಶ್ರಿತಾಹೀನ ಭೋಗಸ್ವಪದಚ್ಯುತಶ್ರೀಸುಖಪ್ರದನುಂ, ಅನಂತಾಚಲಾತಿವ್ಯಾಪ್ತಸ್ವಪ್ರಭಾವಮುಕ್ತಾಳಿಪರಿಮಿಳಿತನುಂ;

*ವಿಷಧರನಾಗಿಯುಂ ಚಿರಪ್ರಭಾಸಂಗತನುಂ, ಭುವನಪತಿಯಾಗಿಯುಮಜಡಾಶ್ರಯನುಂ

ಅರಿ-ಶತ್ರುಗಳಾದ ಸಿಂಹಗಳ, ಜಾತ-ಗುಂಪುಗಳಿಂದಲೂ, ಅಚ್ಛ-ಕರಡಿಗಳಿಂದಲೂ, ಪುನ್ನಾಗ-ಗಂಡಾನೆಗಳ, ಕದಂಬ-ಗುಂಪುಗಳಿಂದಲೂ, ಆಕಲಿತ-ಮಾಡಿದ, ಪದಂ-ಸ್ಥಾನ ವುಳ್ಳದ್ದು : ಪರಮೇಶ್ವರನು (I) ಸುರಸಭಾ-ದೇವಸಭೆಯಲ್ಲಿ, ಸಮಾನ-ಮಾನದಿಂದ ಕೂಡಿದ, ಸಶಕ್ತಿ-ಶಕ್ತ್ಯಾಯುಧವನ್ನು ಹಿಡಿದಿರುವ, ಶರಭವ-ಷಣ್ಮುಖಸ್ವಾಮಿಯಿಂದ, ಆರಚಿತ-ಮಾಡಲಾದ, ವಿಭ್ರಮಂ-ವಿಲಾಸಕೇಳಿಯುಳ್ಳವನು ; ವನವು (II) ಸುರಸ-ಒಳ್ಳೆಯ ಪ್ರೀತಿಯಿಂದ, ಭಾಸಮಾನ-ಬೆಳಗುತ್ತಿರುವ, ಸಶಕ್ತಿ-ಸಮರ್ಥವಾದ, ಶರಭ-ಶರಭಪಕ್ಷಿಗಳ, ವಾರ-ಗುಂಪಿನಿಂದ, ಜಿತ-ಜೋಡಿಸಲಾದ, ವಿಭ್ರಮಂ-ವಿನೋದಕೇಳಿಯ್ಯು ಳ್ಳದ್ದು; ಶಿವನು (I) ನಿಜಪದ-ತನ್ನ ಪಾದಗಳನ್ನು, ಆಶ್ರಿತ-ಸೇರಿದವರಿಗೆ ಅಹೀನ-ಕೊರತೆ ಯಿಲ್ಲದ, ಅಂದರೆ ಉತ್ಕೃಷ್ಟವಾದ, ಭೋಗ-ಸುಖವನ್ನೂ, ಸ್ವಪದ-ತಮ್ಮ ಪದವಿಯಿಂದ ಚ್ಯುತ-ಭ್ರಷ್ಟರಾದವರಿಗೆ, ಶ್ರೀ-ಭಾಗ್ಯವನ್ನೂ, ಸುಖ-ಸಂತೋಷವನ್ನೂ, ಪ್ರದಂ-ಅನು ಗ್ರಹಿಸುವವನು; ಸಮುದ್ರವು (II) ನಿಜಪದ-ತನ್ನ ಸ್ಥಾನವನ್ನು, ಆಶ್ರಿತ-ಅವಲಂಬಿಸಿದ, ಅಹೀನ-ನಾಗರಾಜನಾದ ಶೇಷನ, ಭೋಗ-ಶರೀರದಲ್ಲಿ, ಸ್ವಪತ್-ಮಲಗಿರುವ, ಅಚ್ಯುತ-ವಿಷ್ಣುವಿಗೆ, ಶ್ರೀ-ಲಕ್ಷ್ಮಿಯನ್ನು, ಸುಖ-ಸಂತೋಷವನ್ನು, ಪ್ರದಂ-ಕೊಡುವವನು ; ಶಿವನು (I) ಅನಂತ-ನಾಶವಿಲ್ಲದ, ಅಚಲ-ನಿಶ್ಚಲವಾದ, ಅತಿವ್ಯಾಪ್ತ-ಹೆಚ್ಚಾಗಿ ಹರಡು ತ್ತಿರುವ, ಸ್ವಪ್ರಭಾವ-ತನ್ನ ಸಾಮರ್ಥ್ಯವುಳ್ಳ, ಮುಕ್ತ-ಮುಕ್ತಿಗಳನ್ನು ಪಡೆದವರ, ಆಳಿ-ಸಮೂಹದಿಂದ, ಪರಿಮಿಳಿತಂ-ಕೂಡಿದವನು ; ಸಮುದ್ರವು (II) ಅನಂತ-ಅಗಣಿತವಾದ, ಅಚಲ-ಬೆಟ್ಟಗಳಿಂದ, ಅತಿ-ವಿಶೇಷವಾಗಿ, ವ್ಯಾಪ್ತ-ವ್ಯಾಪಿಸಲ್ಪಟ್ಟ, ಸು-ಉತ್ಕೃಷ್ಟವಾದ, ಅಪ್-ನೀರಿನಿಂದ, ಪ್ರ-ಹೆಚ್ಚಾದ, ಭಾವ-ಉತ್ಪತ್ತಿಯುಳ್ಳ, ಮುಕ್ತ-ಮುತ್ತುಗಳ, ಆಳಿ-ಸಾಲುಗಳಿಂದ ; ಪರಿ-ಎಲ್ಲೆಡೆಯೂ, ಮಿಳಿತಂ-ಕೂಡಿದ್ದು ; ಜಲವನ್ನು ಧರಿಸಿದ ಮೇಘವು ಚಿರಕಾಲ ಬೆಳಗುವ ಮಿಂಚಿನೊಡನೆ ಕೂಡಿದೆ, ಎಂದರೆ ಮಿಂಚು ಕ್ಷಣಪ್ರಭೆಯೇ ಹೊರತು ಚಿರಪ್ರಭೆಯಲ್ಲ. ಆದುದರಿಂದ ವಿರೋಧ ಕಾಣಿಸಿತು. ವಿಷಧರನಾಗಿಯೂ ಅಂದರೆ ನೀಲ ಕಂಠನಾಗಿ ಶಾಶ್ವತಪ್ರಭೆಯಿಂದ ಕೂಡಿದವನು ಎಂದರೆ ವಿರೋಧ ಪರಿಹಾರವಾಯಿತು. ಜಲರಾಶಿಗೆ ಒಡೆಯನಾದರೂ, ನೀರಿಗೆ ಆಶ್ರಯನಲ್ಲವೆಂದರೆ ವಿರೋಧ. ಲೋಕಗಳಿಗೆ

---

೧ ಪದಾ (ಯ, ರ, ಲ)

* ಕೆಲವು ಪ್ರತಿಗಳಲ್ಲಿ ಇಲ್ಲಿ "ವಿರೋಧಾಭಾಸ" ಎಂದು ಮುಂದಿನ ಗದ್ಯಭಾಗವನ್ನು ಕುರಿತು ಸೂಚನೆ ಕೊಟ್ಟಿದೆ.

ನರಗರ್ವಸರ್ವಾಪಹಕನಾಗಿಯುಮರ್ಜುನರುಚಿಯುಂ, ಸಾಮಜಪಪ್ರಿಯನಾಗಿಯುಂಪಂಚಾನನಪ್ರಥಿತನುಂ, ಸದ್ಯೋಜಾತನಾಗಿಯುಂ ಭವರಹಿತನುಂ, ಸವ್ಯೋಮಾಂಗವಿಶಿಷ್ಟನಾಗಿಯುಂ ಜಾತರೂಪರುಚಿಮದ್ವಿಗ್ರಹನುಂ, ಅಜಾತಶತ್ರುವಾಗಿಯುಮನಂತಾರಿಪುರಾರಾತಿಯುಂ, ಸದಾಲೋಕಭರಿತನಾಗಿಯುಮಂಧಕಾರಾತಿಪ್ರಥಿತನುಂ, ಸಕಲಾದಿತ್ಯಗ್ರಹಣೋಪಯುಕ್ತನಾಗಿಯುಮಧಿಕೋಪರಾಗರಹಿತನುಂ, ಶುಕಾಮೃತ

ಒಡೆಯನಾದರೂ, ಅಜ್ಞಾನಿಗಳಿಗೆ ಆಶ್ರಯನಲ್ಲವೆಂದರೆ, ಜ್ಞಾನಿಗಳಿಗೆ ಆಧಾತವಾದವನು ಎಂದರೆ ವಿರೋಧ ಪರಿಹಾರವಾಯಿತು. ಅರ್ಜುನನ ಗರ್ವಭಂಜಕನಾದರೂ, ಅರ್ಜುನನಲ್ಲಿ ಪ್ರೀತಿಯುಳ್ಳವನು ಎಂದರೆ ವಿರೋಧ ಕಾಣಿಸಿತು. ಅರ್ಜುನನ ಗರ್ವಭಂಜಕನಾದರೂ, ಬಿಳುಪಾದ ಕಾಂತಿಯುಳ್ಳವನು ಎಂದರೆ ವಿರೋಧವು ಪರಿಹಾರವಾಯಿತು.[1] ಗಜರಾಜನಿಗೆ ಪ್ರಿಯನಾದರೂ ಸಿಂಹದಿಂದ ಪ್ರಸಿದ್ಧವಾದುದು ಎಂದರೆ ವಿರೋದ ಸಾಮವೇದದ ಮಂತ್ರಪಠನದಲ್ಲಿ ಪ್ರಿಯನಾಗಿದ್ದು ಪಂಚಮುಖದಿಂದ ಪ್ರಸಿದ್ಧನಾಗಿರುವವನು ಎಂದಾಗ ವಿರೋಧ ಪರಿಹಾರ. ಆಗಲೇ ಹುಟ್ಟಿದವನಾದರೂ, ಹುಟ್ಟುವಿಕೆಯಿಲ್ಲದವನು ಎಂದರೆ ವಿರೋಧ. ಸದ್ಯೋಜಾತಮುಖದಿಂದ ಕೂಡಿರುವನಾದರೂ ಹುಟ್ಟು-ಸಾವುಗಳಿಂದ ಕೂಡಿದ ಸಂಸಾರದ ದುಃಖವಿಲ್ಲದವನು ಎಂದರೆ ವಿರೋಧ ಪರಿಹಾರ. ಆಕಾಶವನ್ನೇ ಶರೀರಕಾಂತಿ ಹೊಂದಿಯೂ, ಹುಟ್ಟಿದವರಂತೆ ಸುಂದರ ತನುಕಾಂತಿಯುಳ್ಳವನೆಂದರೆ ವಿರೋಧ. ಸವ್ಯ-ಎಡಭಾಗವಾದ, ಉಮಾಂಗ-ಪಾರ್ವತಿಯ ದೇಹದಿಂದ, ವಿಶಿಷ್ಟವಾಗಿಯೂ-ಕೂಡಿದವನಾಗಿಯೂ, ಜಾತರೂಪ-ಬಂಗಾರದ, ರುಚಿಮತ್-ಕಾಂತಿಯುಳ್ಳ, ವಿಗ್ರಹನುಂ-ಶರೀರವುಳ್ಳವನು ; ಅರ್ಧನಾರೀಶ್ವರನೂ, ಹಿರಣ್ಯವರ್ಣನೆಂದರೆ ವಿರೋಧ ಪರಿಹಾರ. ಅಜಾತಶತ್ರುವಾಗಿಯುಂ-ಧರ್ಮರಾಯನಾದರೂ (ಹುಟ್ಟದೇ ಇರುವ ಶತ್ರುಗಳುಳ್ಳವನು), ಅನಂತ-ಅನೇಕ, ಅರಿಪುರ-ಶತ್ರುನಗರಗಳಿಗೆ, ಅರಾತಿ-ವಿರೋಧಿಯಾದವನು ಎಂದು ವಿರೋಧ ಕಾಣಿಸಿತು. ಅ-ವಿಷ್ಣುವಿಗೆ, ಜಾತ-ಹುಟ್ಟಿದ ಕಾಮನಿಗೆ ಶತ್ರುವಾದರೂ, ಅನಂತ-ನಾಶವಿಲ್ಲದವನು, ಅರಿ-ತಾರಕಾಸುರನ ಪುತ್ರರಾದ ದನುಜರ, ಪುರ-ತ್ರಿಪುರಗಳಿಗೆ, ಅರಾತಿ-ಶತ್ರುವಾಗಿರುವನು ಎಂದರೆ ವಿರೋಧ ಪರಿಹಾರ. ಸತ್-ಒಳ್ಳೆಯ, ಆಲೋಕ-ಪ್ರಭೆಯಿಂದ, ಭರಿತನಾಗಿಯು-ತುಂಬಿದ್ದರೂ, ಅಂಧಕಾರ-ಕತ್ತಲೆಯಿಂದ, ಅತಿಪ್ರಥಿತನುಂ-ಅತ್ಯಂತ ಪ್ರಸಿದ್ಧನು ಎಂಬುದು ವಿರೋಧ. ಸದಾ-ಯಾವಾಗಲೂ, ಲೋಕಭರಿತಂ-ಲೋಕಗಳಲ್ಲೆಲ್ಲಾ ತುಂಬಿರುವವನಾಗಿಯೂ, ಅಂಧಕ-ಅಂಧಕಾಸುರನಿಗೆ, ಅರಾತಿ-ಶತ್ರುವೆಂದು, ಪ್ರಥಿತಂ-ಪ್ರಸಿದ್ಧನಾದವನು ಎನ್ನುವಾಗ ವಿರೋಧ

---

೧ ನಿರ್ವಾಪ (ಯ, ರ, ಲ)

1 ವಿಷದರ-ಮೇಘ ; ನೀಲಕಂಠ ; ಭುವನ-ಲೋಕ ; ನೀರು. ನರ-ಅರ್ಜುನ ; ಅರ್ಜುನ-ಬಿಳುಪಾದ ಕಾಂತಿ.

ಫಲಪ್ರದನಾಗಿಯುಮವನಸ್ವಭಾವನುಂ, ಕಾಮದೇಹೋಪೇತನಾಗಿಯುಂ ದರ್ಪಕೋಪಗತವಿಗ್ರಹ ವಿದಾರಣನುಮೆನಿಸಿರ್ದನಂತುಮಲ್ಲದೆಯುಂ

ಚಂಪಕ ಹರಿತನಯಾರಿಯೆಂದೆನಿಸಿಯುಂ ಧವಳಾಂಶುಕಧಾರಿ ನೀಲಕಂ
ಧರನೆನಿಸಿರ್ದುಮಾದ್ಯತಸುಮಾನಸಹಂಸನುಪಾತ್ರಸಿಂಧುರಾ

ಪರಿಹಾರ.[1] ಸಕಲ-ಆದಿತ್ಯ-ಗ್ರಹಣ-ಉಪಯುಕ್ತನಾಗಿಯುಂ ಸಂಪೂರ್ಣ ಸೂರ್ಯ ಗ್ರಹಣದಿಂದ ಕೂಡಿದವನಾದರೂ, ಅಧಿಕ-ಉಪರಾಗ-ರಹಿತನುಂ, ಹೆಚ್ಚಾದ ಗ್ರಹಣ ರಹಿತನು ಅಂದರೆ ವಿರೋಧ. ಸಕಲ-ಸಮಸ್ತ,ಆದಿತ್ಯ-ದೇವತೆಗಳ, ಗ್ರಹಣ-ಅಂಗೀಕಾರಕ್ಕೆ, ಉಪಯುಕ್ತ-ಯೋಗ್ಯನಾದರೂ, ಅಧಿಕೋಪ-ಇರುವ ಕ್ರೋಧದೀದಲೂ, ರಾಗ-ಅಭಿಲಾಷೆಯಿಂದಲೂ, ರಹಿತಂ-ಶೂನ್ಯನು ಎಂದಾಗ ವಿರೋಧ ಪರಿಹಾರವಾಯಿತು. ಶುಕ-ಗಿಳಿಗಳಿಗೆ, ಅಮೃತಫಲ-ರುಚಿಯಾದ ಹಣ್ಣನ್ನು, ಪ್ರದಂ-ಕೊಡುವನಾದರೂ, ಅವನ ಸ್ವಭಾವಂ-ವನಗಳ ಸಹಜ ಧರ್ಮವಿಲ್ಲದವನು ಎಂದರೆ ವಿರೋಧ ; ಶುಕ-ಶುಕ ಮಹರ್ಷಿಗಳಿಗೆ, ಅಮೃತಫಲ-ಮೋಕ್ಷಫಲವನ್ನು, ಪ್ರದಂ-ಅನುಗ್ರಹಿಸುವವನು, ಅವನ-ರಕ್ಷಣೆಯೇ ಸ್ವಭಾವವಾಗುಳ್ಳವನು ಎಂದರೆ ವಿರೋಧ ಪರಿಹಾರ. ಕಾಮದೇಹ-ಮನ್ಮಥನ ಶರೀರದೊಡನೆ, ಉಪೇತನಾಗಿಯೂ-ಕೂಡಿದ್ದರೂ, ದರ್ಪಕ-ಮನ್ಮಥನಿಂದ, ಉಪಗತ-ಪ್ರಾಪ್ತವಾದ, ವಿಗ್ರಹ-ದೇಹದ, ವಿದಾರಣಂ-ಸೀಳುವಿಕೆಯುಳ್ಳವನು ಎಂದರೆ ವಿರೋಧ; ಕಾಮದೇಹೋಪೇತಂ-ಸಂಕಲ್ಪಮಾತ್ರದಿಂದ ಧರಿಸಬಲ್ಲ ದೇಹಗಳುಳ್ಳವ ನಾದರೂ, ದರ್ಪ-ಗರ್ವದಿಂದಲೂ, ಕೋಪ-ಕ್ರೋಧದಿಂದಲೂ, ಗತ-ಸಮೀಪಿಸಿದವರ, ವಿಗ್ರಹ-ದೇಹವನ್ನು, ವಿದಾರಣಂ-ಸೀಳುವವನು, ಅಂದರೆ ವಿರೋಧ ಪರಿಹಾರ. ಅಷ್ಟೇ ಅಲ್ಲದೆ ೭೯. ಹರಿತನಯಾರಿ-ಸೂರ್ಯನ ಮಗಳಾದ ಯಮುನೆಗೆ ವಿರೋಧಿಯೆನಿಸಿದರೂ ಧವಳಾಂಶಿಕಧಾರಿ-ಬಿಳುಪಾದ ಕಿರಣಗಳನ್ನು ಧರಿಸಿದ ಗಂಗೆಯು ಯಮುನೆಯನ್ನು ಕೂಡುವುದೆಂದರೆ ವಿರೋಧ ಪ್ರಕಟವಾದಂತಾಯಿತು. ಈ ವಿರೋಧವು ಶಿವನಲ್ಲಿ-ಹರಿತನಯಾರಿ-ವಿಷ್ಣುವಿನ ಅಥವಾ ಸೂರ್ಯನ ಮಗನಾದ ಮನ್ಮಥ ಅಥವಾ ಯಮನಿಗೆ ಶತ್ರುವಾದರೂ, ಧವಳಾಂಶುಕಧಾರಿ-ಶುದ್ಧ ಸ್ಫಟಿಕ ಸಂಕಾಶ ಅಥವಾ ಶುಭ್ರವಸ್ತ್ರಧಾರಿ ಎಂದರೆ ವಿರೋಧದಂತೆ ತೋರುವುದೇ ಹೊರತು ವಾಸ್ತವ ವಿರೋಧವಿಲ್ಲ. ನೀಲಕಂಧರ ನೆನಿಸಿರ್ದುಂ-ನವಿಲು ಎಂದಾಗ್ಯೂ, ಸುಮಾನಸಹಂಸ-ಮಾನಸಸರೋವರದಲ್ಲಿನ ಹಂಸೆ ಎಂದರೆ ವಿರೋಧ. ಶಿವನು ಕರಿಗೊರಳನಾದರೂ ಶ್ರೇಷ್ಠರಾದ ಯತಿಗಳೊಡಗೂಡಿ

---

[1] ಸಾಮಜ-ಆನೆ ; ಸಾಮವೇದ ಮಂತ್ರ, ಪಂಚಾನನ-ಸಿಂಹ ; ಐದು ಮುಖಗಳಿಂದ ಪ್ರಸಿದ್ಧನಾದವನು ಶಿವ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ವೆಂಬುವು ಶಿವನ ಪಂಚಮುಖಗಳು. ಉಪರಾಗ-ಗ್ರಹಣ.

ಜರುಚಿರನಾಗಿಯುಂ ತತಜಡಾಶ್ರಯವಿಪ್ರಿಯನಪ್ರಮೋಹಗಭಾ
ಸುರನೆನಿಸಿರ್ದುಮನ್ವಿತನಯಸ್ಥಿತಿಯೊಪ್ಪಿದನದ್ರಿಜಾಧವಂ ೭೯

ವಚನ ಮತ್ತಮಾಗಳೋರಣಂಗೊಂಡು [೨]ಶರಚ್ಛಶಾಂಕ[೨]ರುಚಿಯೊಳ್ [೩]ಸೆಣಸಲೆ[೩]ಳಸಿ ನೆಗೆವಾವೆನಿಸಿ ರಂಜಿಪ ಧವಳಚಾಮರಮಂ ಬಿಂಕದಿಂ ಕೊಂಕಿ ನಿಂದ ಸೂಚಿಬಿದು ತೋಳ್ಗಳಂ[೪] ನೆಗಪಿ ಡಾಳಿಪ ಗಾಯತ್ರ್ಯಾದಿ ಪರಮಶಕ್ತಿಯರಿಂ, ಕರಾಂಬುಜಂ ಸೆಜೆವಿಡಿದ ಪೂರ್ಣೇಂದುವೆಂಬಂತೆಸೆವ[೫] ಮಣಿದರ್ಪಣಮನಣಿಯರಂಬಿಡಿದು ಸಿರಿಮೊಗಕ್ಕೆ ತೋರ್ಪ ಕಳಾಮಾಲಿ-ನಿಯರಿಂ[೬], ಪಾಡಿ ಪಸಿದು ಬಸವಳಿದ ಕಂಬಳಾಶ್ವತರನಾಶ್ವಾಸಿಪಂತಲರಬಿಜ್ಜಣಿಗೆಯಿಂದೆಲರನೊಡರ್ಚಿ ಬೀಸುವ ರೋಹಿಣಿಯಿಂ[೬]

ದವನು ಎಂದರೆ ವಿರೋಧ ಪರಿಹಾರ. ಉಪಾತ್ತ-ಸಿಂಧುರಾಜ-ರುಚಿರನು—ಸೇರುತ್ತಿರುವ ನದಿಗಳಿಗೆ ಒಡೆಯನಾದ ಸಮುದ್ರವು, ತತ—ಜಡಾಶ್ರಯ-ವಿಪ್ರಿಯಂ-ಜಲರಾಶಿಯಾದ ಕಡಲಿಗೆ ಅನಿಷ್ಟಕಾರಿ ಎಂದರೆ ವಿರೋಧ ಕಾಣಿಸುವುದು. ಶಿವನು ಉಪಾತ್ತ-ಪಡೆದ, ಸಿಂಧು-ಗಂಗೆಯಿಂದಲೂ, ರಾಜ-ಚಂದ್ರನಿಂದಲೂ, ರುಚಿರಂ-ಮನೋಹರನೆಂದರೆ ವಿರೋಧ ವಿಲ್ಲ. ತತಜಡಾಶ್ರಯ ವಿಪ್ರಿಯಂ-ವ್ಯಾಪಕವಾದ ಜಡತನಕ್ಕೆ, ಅಥವಾ ಅಜ್ಞಾನಗಳಿಗೆ ಪ್ರಿಯನಲ್ಲವೆಂದರೆ ವಿರೋಧ. ಅಪ್ರಮೋಹ ಭಾಸುರಂ-ಅತಿಶಯವಾದ ಮೋಹದಿಂದ ಪ್ರಕಾಶಿತನಲ್ಲದವನು, ಅಂದರೆ ಎನಿಸಿರ್ದು, ನ್ಯಾಯದಿಂದ ಕೂಡಿದವನು, ಮೋಹದಿಂದ ಕೂಡಿದವನಿಗೆ ನ್ಯಾಯವೆಲ್ಲಿ? ಇದು ವಿರೋಧ. ಪ್ರಮೋಹ-ಹೆಚ್ಚಾದ ಮೋಹದಿಂದ, ಭಾಸುರಂ-ಬೆಳಗುವವನು,ನ-ಅಲ್ಲ, (ಅಜ್ಞಾನ ಗೋಚರನಲ್ಲ) ನ್ಯಾಯಸ್ಥಿತಿಯಿಂದ ಕೂಡಿ ದವನು, (ಜ್ಞಾನಗಮ್ಯನು) ಎಂದು ವಿರೋಧ ಪರಿಹಾರ. ಈ ರೀತಿಯಲ್ಲಿ ಪಾರ್ವತೀ ವಲ್ಲಭ ಕಂಗೊಳಿಸಿದನು. ವಚನ : ಮತ್ತೆ ಆ ಸಮಯದಲ್ಲಿ ಗಾಯಿತ್ರಿಯೇ ಮೊದಲಾದ ಉತ್ತಮ ಶಕ್ತಿದೇವತೆಯರು ವಿಲಾಸದಿಂದ ಬಳುಕುತ್ತಾ, ನಿಂತು, ಸಮಯವನ್ನರಿತು ತನ್ನ ಭುಜಗಳನ್ನೆತ್ತಿ, ಶರತ್ಕಾಲದ ಚಂದ್ರನ ಕಾಂತಿಯೊಡನೆ ಸ್ಪರ್ಧಿಸಲು ಬಯಸಿ, ನೆಗೆಯುತ್ತಿರುವ ಸರ್ಪಗಳಂತೆ ಬೆಳಗುತ್ತಿರುವ ಚಾಮರಗಳನ್ನು ಬೀಸುತ್ತಿದ್ದರು. ಕಳಾಮಾಲಿನಿಯರೆಂಬ ದೇವತೆಗಳು ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿದ್ದ ರನ್ನಗನ್ನಡಿ ಯನ್ನು ತಮ್ಮ ಕರಕಮಲಗಳಲ್ಲಿ ಹಿಡಿದು ಶಿವನ ಸಿರಿಮೊಗಕ್ಕೆ ತೋರುತ್ತಿದ್ದರು. ರೋಹಿಣೀದೇವತೆಯರು ಸರ್ಪಕುಂಡಲಾಕೃತಿಯಲ್ಲಿದ್ದು ಸಾಮಗಾನ ಮಾಡುತ್ತಲಿದ್ದ ಕಂಬಳ, ಅಶ್ವತರು ಹಾಡಿ, ಹಸಿದು, ಬಳಲಿದರೆ, ಅವರು ವಿಶ್ರಮಿಸಿಕೊಳ್ಳಲನುವಾಗು ವಂತೆ ಹೂವಿನ ಬೀಸಣಿಗೆಯಿಂದ ಗಾಳಿಯನ್ನು ಬೀಸುತ್ತಿದ್ದರು. ಭಾನುದೇವತೆಯು ಶಿವನಿಗೆ ಮಂಗಳಗೀತೆಗಳನ್ನು ಹಾಡಿ ರನ್ನದಾರತಿಯನ್ನು ಬೆಳಗುತ್ತಿದ್ದಳು.

---

೧ ಮೋದ (ಚ) ೨-೨ ಶಾರದಶಶಾಂಕ (ಯ) ೩-೩ ಸಲ್ವೆ (ಚ, ತ) ೪ ತೋಳಂ (ಜ) ೫ ನವ (ಯ) ೬-೬ ನಿಯಿಂ (ಚ, ಜ, ಯ, ರ, ಲ)

ಮಂಗಳಗೀತೆ[೧]ಯುಂ ಪಾಡಿ ಮಣಿವೆಳಗಿನಾರತಿಯುಂ ಬೆಳಗುವ ಭಾನುಭಾಮೆಯುಂ, ನಿಜಕರತಳೋದ್ಧೃತ ಸಹಸ್ರದಳಪುಂಡರೀಕಮೆನೆ ಮಿಸುಪ ಮೌಕ್ತಿಕಚ್ಛತ್ರಮುಮಂ ತಳೆದೋಲಗಿಪ ರಮಾದೇವಿಯುಂ, ಸಲ್ಲಲಿತವಲ್ಲಕಿಯ ಮೆಲ್ಲುಲಿಯೊಡನೆ ಪಂಚಮದಿಂಚರಂ ಮಿಗೆ ಸವಿ ಸವೆಯದ ಸಾರಸಂಗೀತಮಂ ಕೇಳಿಪ

ಶ್ರೀದೇವಿಯು ಸಹಸ್ರದಳದ ಬಿಳಿನೈದಿಲೆಯಂತಿರುವ ಮುತ್ತಿನ ಛತ್ರಿಯನ್ನು ತನ್ನ ಕೈಗಳಲ್ಲಿ ಎತ್ತಿ ಹಿಡಿದಿದ್ದಳು. ಸರಸ್ವತಿಯು ಲಲಿತ ಮನೋಹರವಾದ ವೀಣೆಯ ಮಂಜುಳನಾದದೊಡನೆ ಕೋಕಿಲೆಯ ಕೂಜನವನ್ನು ಅನುಕರಿಸುವ ಪಂಚಮದಲ್ಲಿ ಅತಿ ಮಧುರವಾಗಿ ಹಾಡಿ, ಸಂಗೀತಶ್ರವಣವನ್ನು ಮಾಡಿಸುತ್ತಿದ್ದಳು. ಕಾಳಿಕೆಯೆಂಬ ಜಲ ದೇವತೆಯು ಮಧುರ, ಶೀತಲ, ಪರಿಮಳೋದಕವನ್ನು ತುಂಬಿದ ಕನಕಕಳಸಗಳನ್ನು ಹಿಡಿದು ನಿಂತಿದ್ದಳು. ಶಚೀದೇವಿಯೇ ಮೊದಲಾದ ದೇವತಾಸ್ತ್ರೀಯರು ಪದ್ಮರಾಗ ಖಚಿತವಾದ ಗಿಂಡಿಗಳನ್ನು ಹಿಡಿದು ಬೆಳಗುತ್ತಿದ್ದರು. ಉಪಶಾಂತಿಯೆಂಬ ದೇವತೆಯು ಸರಸಪರಿಮಳಕ್ಕೆ ಸಂತೋಷದಿಂದ ಝೇಂಕರಿಸಿ ಎರಗುತ್ತಿದ್ದ ಭ್ರಮರಶ್ರೇಣಿಗಳಿಂದ ಪರಿಮಳವನ್ನು ಕೆದರುತ್ತಿದ್ದ ಅರೆಬಿರಿದ ಪುಷ್ಪಗಳಿಂದ ಶಿವನ ಚರಣತಲವನ್ನು ಸಿಂಗರಿಸು ತ್ತಿದ್ದಳು. ಸಪ್ತಮಾತೃಕಾದೇವಿಯರು ಶೂಲ, ಕಪಾಲ, ಖಡ್ಗ, ಪರಶು ಮೊದಲಾದ ಆಯುಧಗಳನ್ನು ಹಿಡಿದು ಶಿವನ ಸಮೀಪದಲ್ಲಿ ನಿಂತಿದ್ದರು. ಅವರತ್ತುನಾಲ್ಕು ಕೋಟಿ ಯೋಗಿನೀಗಣಗಳು ಕರಕಮಲಗಳನ್ನು ಹಣೆಯಲ್ಲಿರಿಸಿ ಆಜ್ಞೆಗಾಗಿ ಕಾದು ನಿಂತಿದ್ದರು. ಮಂತ್ರದೇವತೆಯರು (ಶಿವನ ದರ್ಶನಾರ್ಥಿಗಳನ್ನು) ಕೂಗಿ, ಸಮ್ಮುಖಕ್ಕೆ ಗಾಯಿತ್ರಿಯೇ ಮೊದಲಾದ ಉತ್ಕೃಷ್ಟ ಶಕ್ತಿದೇವತೆಯರಿಂದಲೂ ಕರಕಮಲಗಳು ಸೆರೆವಿಡಿದ ಪೂರ್ಣ ಚಂದ್ರನೋ ಎಂಬಂತೆ ಬೆಳಗುವ ರನ್ನಗನ್ನಡಿಯನ್ನು ಹಿಡಿದು (ಶಿವನ) ಸಿರಿಮೊಗಕ್ಕೆ ತೋರಿಸುವ ಕಳಾಮಾಲಿನಿಯರೆಂಬ ದೇವತೆಯರಿಂದಲೂ, ಹಾಡಿ, ಹಸಿದು ಬಳಲಿದ ಕಂಬಳ, ಅಶ್ವತರೆಂಬ (ಸರ್ಪಕುಂಡಲಗಳ ರೂಪಿನಿಂದಿದ್ದ) ಸಾಮಗಾಯಕರನ್ನು ವಿಶ್ರಮಿಸಿಕೊಳ್ಳುವಂತೆ ಹೂವಿನ ಬೀಸಣಿಗೆಯಿಂದ ಗಾಳಿಯನ್ನು ಬೀಸುವ ರೋಹಿಣೀ ದೇವಿಯರಿಂದಲೂ, ಮಂಗಳಗೀತಗಳನ್ನು ಹಾಡಿ, ರತ್ನಕಾಂತಿಯ ಆರತಿಯನ್ನು ಬೆಳಗುವ ಭಾನುವೆಂಬ ದೇವತೆಯಿಂದಲೂ, ತನ್ನ ಕರತಳದಿಂದ ಎತ್ತಿಹಿಡಿದ ಸಹಸ್ರದಳದ ಬಿಳಿ ನೈದಿಲೆಯಂತಿರುವ ಮುತ್ತಿನ ಛತ್ರಿಯನ್ನು ಹಿಡಿದು ಸೇವಿಸುವ ಶ್ರೀದೇವಿಯಿಂದಲೂ, ಲಲಿತಮನೋಹರವಾದ ವೀಣೆಯ ಮೃದುನಾದದೊಂದಿಗೆ ಪಿಕಕೂಜನವನ್ನು ಅನು ಕರಿಸುವ ಪಂಚಮಸ್ವರವು ವಿಶೇಷವಾಗಿ ಅನೂನ ಮಾಧುರ್ಯದಿಂದ ಗಾನವನ್ನು ಶ್ರವಣಮಾಡಿಸುವ ಆಟವನ್ನು ಹೂಡಿದ ಸರಸ್ವತೀದೇವಿಯಿಂದಲೂ. ಮಧುರ ಶೀತಲ ಪರಿಮಳೋದಕವನ್ನು ತುಂಬಿದ ಕನಕಕಳಸಗಳನ್ನು ವಿಲಾಸದಿಂದ ಹಿಡಿದು ನಿಂತ ಕಾಳಿಕೆ

---

೧ ಗೀತಿ (ಯ್ಮ ರ, ಲ, ವ)

೧ಕೇಳಿಕೆ೧ಪಿಡಿದ ಭಾರತಿಯಿಂ,ಮಧುರಶೀತಳ ಸುರಭಿಸಲಿಲಸಂಭೃತ ಕನಕ೨ಭೃಂಗಾರಮಂ೨ಶೃಂಗಾರಂಬೆತ್ತು ಪಿಡಿದು ನಿಂದ ವರುಣಾಂಗನೆಯಿಂ,ಕೆಂಬರಲ ಕಾಳಂಜಿಪಿಡಿದು ಮಿಸುಪ ಪುಲೋಮಜಾದಿ ರಮಣಿಯರಿಂ, ಸರಸಪರಿಮಳಕ್ಕೆ ಪಱಿಮುಱಿ೩ಗೊಂಡು ಮೊರೆದೆಱಗುವ ಪಱಿಮೆಪಱಿಮುಱುಗಲಿಂ ತಳ್ತ ನಱುಗಂಪನು ಗುಳ್ಪುರೆಪಿರಿದರಲಮಾಲೆಯಿಂ ಪದತಳಮಂ ಪದೆದಲಂಕರಿಪ ರತಿಯುವತಿಯಿಂ, ಶೂಲ೪ಕಪಾಲ ಖಡ್ಗ೪ ಪರಶ್ವಾದ್ಯಾಯುಧಂಬಿಡಿದು ಒಟ್ಟೈಸಿಲಸಿ ನಿಂದ ಮಾತೃಕಾದೇವಿಯರಿಂ, ಕರಾಂಬುಜಂಗಳಂ ನೊಸಲೊಳಿರಿಸಿ ಬೆಸನಂ ಸಾರ್ದು ನಿಂದ ಯೋಗಿನಿಯರಿಂ, ಕರೆಕರೆದು ಸಮ್ಮುಖಂಗೆಯ್ವ ಮಂತ್ರಶಕ್ತಿಯರಿಂ, ಪರಸಿ ಪಾಡುವನಸೂಯೆ ಮೊದಲಾದ ಮುನಿವನಿತೆಯರಿಂ, ಸಹಜ೫ಸದ್ಗುಣಗಣಮಂ೫ ಸರಸರವದಿಂ ಸಾರ್ದು ಸಂಕೀರ್ತನಂಗೆಯ್ವ ಶ್ರುತಿಸತಿಯರಿಂ, ಶೃಂಗಾರಲಕ್ಷ್ಮಿಯಂಗಂಬಡೆದನೇಕರೂಪದಿಂ ನಿಂದಂತೆ ಪೊಂದೆರೆ ಸರಿಯೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಗೆದರ್ದು ಮೋಹಿಸಿ ನಿಂದು ಕಟ್ಟಿದಿರೊಳ್ ಸಭಾಸದರೆಲ್ಲರ್ ಮೆಚ್ಚೆ ಚತುರತರಚತುರ್ವಿಧನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ, ವಾಮಪಾರ್ಶ್ವ೬ದೊಳ್ ನಿಂದು ಶಿವ೬ಸಹಸ್ರನಾಮಮಂ ಜಪಿಯಿಸುತ್ತಿರ್ಪ ಮುಕುಂದನಿಂ,

ಎಂಬ ಜಲದೇವತೆಯಿಂದಲೂ, ಪದ್ಮರಾಗಖಚಿತವಾದ ಗಿಂಡಿಗಳನ್ನು ಹಿಡಿದು ಬೆಳಗುತ್ತಿದ್ದ ಶಚೀದೇವಿಯೇ ಮೊದಲಾದ ದೇವರಮಣಿಯರಿಂದಲೂ, ಸರಸ ಪರಿಮಳಕ್ಕೆ ಸಂತೋಷಗೊಂಡು ಝೇಂಕರಿಸಿ ಎರಗುವ ದುಂಬಿಗಳ ತಂಡದಿಂದ ಕೆದರಿದ ಸುವಾಸನೆಯನ್ನು ಸೂಸುತ್ತಿರುವ, ಅರೆಬಿರಿದ ಹೂಮಾಲೆಯಿಂದ ಪದತಳವನ್ನು ಸಿಂಗರಿಸುವ ಉಪಶಾಂತಿಯೆಂಬ ದೇವತೆಯಿಂದಲೂ, ಶೂಲ, ಕಪಾಲ, ಖಡ್ಗ, ಪರಶು ಮೊದಲಾದ ಆಯುಧಗಳನ್ನು ಹಿಡಿದು ಹತ್ತಿರದಲ್ಲಿ ನಿಂತ ಸಪ್ತಮಾತೃಕಾದೇವಿಯರಿಂದಲೂ, ಕರಕಮಲಗಳನ್ನು ಹಣೆಯಲ್ಲಿರಿಸಿ ಆಜ್ಞೆಗಾಗಿ ಕಾದು ನಿಂತಿರುವ ಚತುಷ್ಷಷ್ಟಿಕೋಟಿ ಯೋಗಿನೀ ಗಣದಿಂದಲೂ, ಕರೆಕರೆದು ಸಮ್ಮುಖಕ್ಕೆ ಕಾಣಿಸುವ ಮಂತ್ರದೇವತೆಯರಿಂದಲೂ, ಹರಸಿ ಹಾಡುವ ಅನುಸೂಯೆಯೇ ಮೊದಲಾದ ಮುನಿಪತ್ನಿಯರಿಂದಲೂ, (ಶಿವನ) ಸಹಜವಾದ ಸದ್ಗುಣರಾಶಿಯನ್ನು ಕೋಮಲ ಕಂಠದಿಂದ ವಿಷಯೀಕರಿಸಿ ಕೀರ್ತನೆಯನ್ನು ಮಾಡುವ ಉಪನಿಷದ್ದೇವಿಯರಿಂದಲೂ, ಶೃಂಗಾರದ ಸೊಬಗು ಮೂರ್ತಿಗೊಂಡು ಅನೇಕ ರೂಪಾಗಿ ನಿಂದಂತೆ ಹೊನ್ನಿನ ತೆರೆ ಪಕ್ಕಕ್ಕೆ ಸರಿಯಲು ಹೂವಿನೆಸಳಂತಿರುವ ಕೈಗಳಿಂದ ಪುಷ್ಪಾಂಜಲಿಯನ್ನು ಮಾಡಿ, ಸಭಾಸದರೆಲ್ಲರೂ ಮೆಚ್ಚುವಂತೆ ಕುಶಲತೆಯಿಂದ ಹಾವ, ಭಾವ, ವಿಲಾಸ, ವಿಭ್ರಮಗಳೆಂಬ ನಾಲ್ಕು ಬಗೆಯ ನರ್ತನವನ್ನು ವಿಸ್ತರಿಸುವ ರಂಭಾದಿ ದೇವತಾನರ್ತಕಿಯರಿಂದಲೂ, ಎಡಪಾರ್ಶ್ವದಲ್ಲಿ ನಿಂತು ಶಿವಸಹಸ್ರನಾಮ

---

೧-೧ ಕಳೆ (ಯ) ಕೇಳಿ (ವ) ೨-೨ ಕಲಶಮಂ (ರ) ೩ ಮುರಿ (ಜ) ೪-೪ ಕಪಾಲಕಂ ಕಾಲಖಡ್ಗ (ಯ) ೫-೫ ಮನೆ ಸಂದಣಿಮಾದಿ ಗುಣಗಣಮಂ (ಯ); ಸಂಡಣೆಯ ಗಣಮಂ (ರ) ೬-೬ ದೊಳ್ ಶಿವ (ಜ, ಯ, ರ, ಲ)

ದಕ್ಷಿಣದೊಳಕ್ಷೀಣರವದಿಂ ಲಕ್ಷಣಂಬಿಡಿದು ಚತುರ್ಮುಖದಿಂ ರುದ್ರಸೂಕ್ತರಥಂತಗಿರಾದಿ ಮಂತ್ರಮ ನೋದುವಬ್ಜಭವನಿಂ ವಿವಿಧವಿನಿಯೋಗಮಂ ಮಾಳ್ಪ ಲೋಕೇಶ್ವರರಿಂ, ಕರೆಗಣ್ಮುವಾನಂದಾಶ್ರುವಿಂ ಗುಡಿಗಟ್ಟಿದ ಪುಳಕದಿಂ ಸಾತ್ವಿಕಭಕ್ತಿವೆರಸು ಪೊರೆಯೇರಿ ನೊಸಲೊಳಮರ್ಚಿದಂಜಲಿಪುಟದಿಂ ಪೊಗಳ್ವ ಪರಮತಪೋಧನರಿಂ ನೆರೆದೊತ್ತರಿಪ ಸುರ ಸಿದ್ಧ ಸಾಧ್ಯ ಗಂಧರ್ವಾದಿಗಳ ವಿಸರದಳವಿಗಳೆದ ಕಳಕಳಮಂ ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ ಸಮುಚಿತಸ್ಥಾನದೊಳಿಂಬುಕೆಯ್ವುವ ಭೀಮ ಕಂಕಾಳಿಗಳೆಂಬ[೨] ವೇತ್ರಧರರಿಂ ಸಮಯಂಬಡೆದು ಸಾರ್ದೊಯ್ಯನೆ ಕರ್ಣಾಭರಣಮಂ ಪೊರ್ದಿ ಸಮುಚಿತಕಾರ್ಯವಿಜ್ಞಾಪನಂಗೆಯ್ವ ನಂದಿಕೇಶ್ವರನಿಂ ಸದ್ಧರ್ಮಮೆ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ ಬಹುವಿಧ ವಿಕಟವೇಷದಿಂ ವಿಕೃತಿದೋಱಿ ನಗೆಯಂ ಬೀಱಿ ನಲಿದು ನರ್ತಿಪ ಭೃಂಗಿರಿಟಿಯಿಂ ಸಂಗೀತಮಂ ಪಾಡಿ ಮೋಹಿಪ ಗರುಡಗಂಧರ್ವಚಾರಣರಿಂದೋರಣಂಬಿಡಿದೋರಂತೆ ನಿಂದ ವೀರಪ್ರಮಥರಿಂ ನೆರೆನೆರೆದು ತರಂಗೊಂಡು ಸಂದಣಿಸಿ ನೆಲಸಿದ ಸುರವಿಸರದಿನನಂತಾಶ್ಚರ್ಯ

ಗಳನ್ನು ಪಠಿಸುತ್ತ ಪ್ರಕಾಶಿಸುತ್ತಲಿದ್ದ ವಿಷ್ಣುವಿನಿಂದಲೂ, ಬಲಭಾಗದಲ್ಲಿ ಎತ್ತರದ ಧ್ವನಿಯಿಂದ ಶಿಕ್ಷೆಯೆಂಬ ವೇದಲಕ್ಷಣವನ್ನನುಸರಿಸಿ ನಾಲ್ಕು ಮುಖಗಳಿಂದಲೂ, ನಮಕ ಚಮಕಗಳೆಂಬ ಶತರುದ್ರಾಧ್ಯಾಯಗಳು, ಶಿವಾಧಿಕ್ಯಪ್ರತಿಪಾದಕವಾದ ಸಾಮಸೂಕ್ತ ವನ್ನು, ಋಕ್, ಅಥರ್ವಣ ವೇದಮಂತ್ರಗಳನ್ನು ಓದುವ ಬ್ರಹ್ಮನಿಂದಲೂ, ವಿವಿಧ ಸೇವಾಕಾರ್ಯಗಳಲ್ಲಿ ನಿರತರಾದ ಇಂದ್ರಾದಿ ಲೋಕಪಾಲಕರುಗಳಿಂದಲೂ, ಉದುರು ತ್ತಿರುವ ಆನಂದಾಶ್ರುವಿನಿಂದಲೂ, ನಿಮಿರಿನಿಂತ ರೋಮಾಂಚನದಿಂದಲೂ, ಸಾತ್ವಿಕ ಭಕ್ತಿಯಿಂದ ಕೂಡಿ, ಮೈಯುಬ್ಬಿ ಹಣೆಯಲ್ಲಿ ಜೋಡಿಸಿದ ಬೊಗಸೆಗೈಗಳಿಂದ ಹೊಗಳುವ ಪರಮ ತಪೋಧನರಿಂದಲೂ, ಗುಂಪುಗೂಡಿ ನುಗ್ಗಿ ಬರುತ್ತಿದ್ದ ದೇವತೆಗಳು, ಸಿದ್ಧರು, ಸಾಧ್ಯರು, ಗಂಧರ್ವಾದಿ ತಂಡಗಳ ಮಿತಿಮೀರಿದ ಗದ್ದಲವನ್ನು, ಬಂಗಾರದ ಬೆತ್ತವನ್ನು ಎತ್ತಿ 'ಹೋ ಹೋಗು, ಓರೆಯಾಗು' ಎಂದು ತಡೆದು, ಅವರನ್ನು ಉಚಿತವಾದ ಸ್ಥಳಗಳಲ್ಲಿ ಸರಿಯಾಗಿ ನಿಲ್ಲಿಸುತ್ತಿದ್ದ ಭೀಮ, ಕಂಕಾಲರೆಂಬ ಕೋಲಿನವ ರಿಂದಲೂ, ಸಮಯವನ್ನು ತಿಳಿದು, ಪಕ್ಕಕ್ಕೆ ಹೋಗಿ ಮೆಲ್ಲಗೆ ಕರ್ಣಾಭರಣಗಳನ್ನು ಸೋಕುವಂತೆ ಹೊಂದಿಕೊಂಡು ಯೋಗ್ಯಕೆಲಸವನ್ನು ಅರಿಕೆಮಾಡುವ ನಂದೀಶ್ವರ ನಿಂದಲೂ, ಸದ್ಧರ್ಮವೇ ಮೂರ್ತಿವೆತ್ತು ಸಮದೃಷ್ಟಿಯಲ್ಲಿ ನಿಂತಿದ್ದ ಬಸವರಾಜ ನಿಂದಲೂ, ಅನೇಕ ವಿಧವಾದ ಹಾಸ್ಯದ ವೇಷಗಳನ್ನು ಧರಿಸಿ ಅಣಕವಾಡುತ್ತಾ, ನಗಿಸುತ್ತಾ, ಸಂತೋಷದಿಂದ ಕುಣಿಯುತ್ತಲಿದ್ದ ಭೃಂಗೀಶ್ವರನಿಂದಲೂ, ಸಂಗೀತವನ್ನು ಹಾಡಿ ಪರವಶರನ್ನಾಗಿ ಮಾಡುತ್ತಲಿದ್ದ ಗರುಡರು, ಗಂಧರ್ವರು, ಚಾರಣರುಗಳಿಂದಲೂ ಕ್ರಮವಾಗಿ ಸಾಲುಸಾಲಾಗಿ ನಿಂತ ವೀರಮಾಹೇಶ್ವರರಿಂದಲೂ, ದಟ್ಟೈಸಿ, ಗುಂಪು

---

೧ ರಥಾಂತ (ಕ). ೨-೨ ಕಾಳರೆಂಬ (ಯ)

ಮನನೂನ ಸೌಭಾಗ್ಯಮನಮಂದಸೌಂದರ್ಯಮನಪೂರ್ವತರವಿಲಾಸಮನೊಳಕೊಂಡೆಣಕೆಗತರ್ಕ್ಯಮಾಗಿ ಪೆಂಪನಾಳ್ದ೧ ಪರ೨ಮನ ಸಭೆ೨ ಕಣ್ಗೊಳಿಸಿರ್ದುದಂತುಮಲ್ಲದೆಯುಂ

ಉತ್ಪಲ ಪಾಡುವ ಕಿನ್ನರರ್ ನಲಿದು ನರ್ತಿಸುವಚ್ಚರಿಯರ್ ಪೊದಟ್ಟು ಕೊಂ
ಡಾಡುವ ಚಂಡಕೀರ್ತಿಗಳುಘೇ ಜಯಯೆಂದಡಿಗೆಯ್ದೆ ಮೆಯ್ಯನೀ
ಡಾಡುವ ತಾಪಸರ್ ಮಣಿದನರ್ಘ್ಯಸುವಸ್ತುವನೊಲ್ದು ಕಾಣ್ಕೆಯುಂ
ನೀಡುವ ನಿರ್ಜರೇಂದ್ರರೆಸೆದೊಪ್ಪಿದರೋಲಗದೊಳ್ ತ್ರಿಶೂಲಿಯಾ ೮೦

ವಚನ ಮತ್ತಮಾ ಸಭೆ ಘನಾಗಮದಂತೆ ಮಂಜುಲಾಸ್ಯಚಂಚತ್ಕಲಾಪನೀಲಕಂಠ ಮಂಡಿತಮುಂ, ಸಮುದ್ಗತ ಸುಮನಃಕದಂಬಾ೩ಕಲಿತಮುಂ೩,ಛಂದಶ್ಶಾಸ್ತ್ರದಂತೆ ಸ್ವಾಗತಮತ್ತೇಭಶಾರ್ದೂಲಮುಖಬಹು ವಿಧ ಸುವೃತ್ತಗಣಬಂಧುರಮುಂ,ಸದಕ್ಷರ ನಿಯಮಯತಿ೪ವಿರಾಜಿತ೪ಮುಂ,ವ್ಯಾಕರಣದಂತೆ ವಿತತಾವ್ಯಯ

ಗುಂಪುಗಳಾಗಿ ಕುಳಿತಿದ್ದ ದೇವತಾಸಮೂಹಗಳಿಂದಲೂ, ಅತ್ಯಂತ ವಿಸ್ಮಯಕರವಾಗಿ, ಅಪರಿಮಿತವಾದ ಸೌಭಾಗ್ಯವನ್ನೂ, ಅತಿಶಯವಾದ ಸೌಂದರ್ಯವನ್ನೂ, ನವನವೀನ ವಾದ ಲಾವಣ್ಯವನ್ನೂ ಹೊಂದಿ, ಊಹಾತೀತವಾದ ವೈಭವದಿಂದ ಸರ್ವೋತ್ತಮನಾದ ಶಿವನ ಸಭೆಯು ಕಂಗೊಳಿಸುತ್ತಿದ್ದಿತು. ಅಷ್ಟುಮಾತ್ರವಲ್ಲದೆ, ಶಿವನ ಓಲಗದಲ್ಲಿ ಆನಂದದಿಂದ ನೆರೆದು, ೮೦. ಕಿನ್ನರರು ಹಾಡುತ್ತಿದ್ದರು; ಅಪ್ಸರಸ್ತ್ರೀಯರು ಆನಂದ ದಿಂದ ನರ್ತಿಸುತ್ತಿದ್ದರು ; ವೀರದಾಸರು ಪುಲಕಿತಶರೀರರಾಗಿ ಸ್ತುತಿಸುತ್ತಿದ್ದರು ; ತಪಸ್ವಿಗಳು "ಉಘೇ, ಜಯ ಜಯ"ವೆನ್ನುತ್ತಾ ಪಾದಗಳನ್ನು ಸಮೀಪಿಸಿ, ಮೈಯ ನ್ನೀಡಾಡುತ್ತಿದ್ದರು. ದೇವಶ್ರೇಷ್ಠರು ನಮಸ್ಕರಿಸಿ, ಭಕ್ತಿಯಿಂದ ಅನರ್ಘ್ಯವಸ್ತುಗಳನ್ನು ಸಮರ್ಪಿಸುತ್ತಿದ್ದರು. ವಚನ : ಮತ್ತು ಆ ಸಭೆಯು ವರ್ಷಾಕಾಲ ಪ್ರಾರಂಭವು ಹೇಗೆ (ಮಂಜು-ಲಾಸ್ಯ-ಚಂಚತ್-ಕಲಾಪ-ನೀಲಕಂಠ-ಮಂಡಿತಮುಂ) ಮನೋಹರವಾದ ನರ್ತನ ದಿಂದ ಶೋಭಿಸುವ ಗರಿಗಳುಳ್ಳ ನವಿಲುಗಳಿಂದ ಅಲಂಕೃತವಾಗಿರುವುದೋ, (ಶಿವನ) ಸಭೆಯು (ಮಂಜುಲ-ಆಸ್ಯ-ಚಂಚತ್-ಕಲಾಪ-ನೀಲಕಂಠ-ಮಂಡಿತಮುಂ) ಮನೋಹರ ವಾದ ಮುಖವುಳ್ಳ ಮತ್ತು ಶೋಭಿಸುವ ಚಂದ್ರನುಳ್ಳ ಶಿವನಿಂದ ಅಲಂಕೃತವಾಗಿದ್ದಿತು; ವರ್ಷಾಕಾಲವು (ಸಮುದ್ಗತ-ಸುಮನಃ-ಕದಂಬಾಕಲಿತಮುಂ) ಕಾಣಿಸಿಕೊಂಡ ಪುಷ್ಪ ಗಳುಳ್ಳ ಕದಂಬವೃಕ್ಷಗಳಿಂದ ಕೂಡಿರುವಂತೆ ಸಭೆಯು ಎದ್ದು ನಿಂತಿದ್ದ ದೇವತಾ ಸಮೂಹದಿಂದ ಕೂಡಿದ್ದಿತು. ಛಂದಶ್ಶಾಸ್ತ್ರವು ಯಾವ ರೀತಿಯಲ್ಲಿ ಸ್ವಾಗತ, ಮತ್ತೇಭ, ಶಾರ್ದೂಲವೇ ಮುಂತಾದ ಅನೇಕ ಉತ್ತಮ ವೃತ್ತಜಾತಿಗಳಿಂದಲೂ, ಗಣಗಳಿಂದಲೂ ಶೋಭಿಸುವುದೋ, ಅದೇ ರೀತಿಯಲ್ಲಿ ಸಭೆಯು ಸ್ವಾಗತಮುಖ, ಮತ್ತೇಭಮುಖ,

---

೧ ನಾಳ್ದ (ಚ) ೨-೨ ಮಸಭೆ (ರ, ಲ, ಯ ) ೩-೩ ಕಲಿತ ಪದಮುಂ (ಜ) ೪-೪ ರಾಜಿತ (ತ)

ಪ್ರತ್ಯಯಪ್ರಕೃತಿನಿಯುಕ್ತಮುಂ, ಸಮಸ್ತಕಾರಕಕ್ರಿಯಾಪದಸಮಾಶ್ರಿತಮುಂ, ನ್ಯಾಯದಂತೆ ಬಹುಗುಣ೧ ಕರ್ಮವಿಶೇಷಸಮವಾಯಸಮನ್ವಿತಮುಂ ಸಸಿದ್ಧಾಂತನಿರ್ಣಯಪ್ರಯೋಜನಜಾತಿರಂಜಿತಮುಂ, ವೇದಾಂತ ಸಂತಾನದಂತೆ ಕೈವಲ್ಯೋದಿತ ಶಿವಸಂಕಲ್ಪ ಶ್ವೇತಾಶ್ವತರಮೈತ್ರೇಯಪರಮಹಂಸವಿಭ್ರಾಜಿತಮುಂ, ಪ್ರಣವರುಚಿಸಮುದಿತ ಸಗುಣಬ್ರಹ್ಮರಮಣೀಯಮುಂ

ಶಾರ್ದೂಲಮುಖ ಮೊದಲಾದ ಅನೇಕಮುಖಗಳನ್ನು ಹೊಂದಿ ಉತ್ತಮ ಶೀಲಸಂಪನ್ನ ರಾದ ಪ್ರಥಮಗಣಗಳಿಂದ ಶೋಭಿಸುತ್ತಲಿದ್ದಿತು. ಒಳ್ಳೆಯ ಅಕಾರಾದಿವರ್ಣಗಳಿಂದಲೂ, ಗುರು, ಲಘು,ಪ್ರಾಸಾದಿ ನಿಯಮಗಳಿಂದಲೂ, ನಿಲುಗಡೆಯ ಸ್ಥಾನಗಳಾದ ಯತಿ ನಿಯಮ ಗಳಿಂದಲೂ ಪ್ರಕಾಶಿಸುವಂತೆ, ಸಭೆಯೂ ಸಹ ಪ್ರಣವಾಕ್ಷರದ ಜಪದಲ್ಲಿ ನಿಯಮವುಳ್ಳ ಯತಿಗಳಿಂದ ಶೋಭಿಸುತ್ತಿದ್ದಿತು. (1) ವ್ಯಾಕರಣವು ವಿಸ್ತಾರವಾದ ರೂಪವುಳ್ಳ ಅವ್ಯಯ ಪದಗಳಿಂದಲೂ, ಸುಬಾದಿ ಪ್ರತ್ಯಯಗಳಿಂದಲೂ, ಪ್ರಕೃತಿಗಳಿಂದಲೂ ಕೂಡಿರುವಂತೆ, (2) ಶಿವನ ಸಭೆಯು ವಿಸ್ತಾರವಾದ, ಅವಿನಾಶಿಯಾದ ನಂಬಿಕೆಯ ಸ್ವಭಾವವುಳ್ಳ ಪ್ರಧಾನರಿಂದ ಕೂಡಿದ್ದಿತು ; (1) ವ್ಯಾಕರಣವು ಸಮಸ್ತಗಳಾದ ಕಾರಕಗಳಿಂದಲೂ, ಕ್ರಿಯಾಪದಗಳಿಂದಲೂ ಸೇರಿಸಿದ್ದುದಾಗಿರುವಂತೆ (2) ಸಭೆಯು ಆಜ್ಞೆಯನ್ನೀಯುವವರ 'ಹೋಗು, ಮಾಡು' ಮುಂತಾದ ಕ್ರಿಯಾವಚನಗಳಿಂದ ತುಂಬಿದ್ದಿತು. (1) ನ್ಯಾಯ ಶಾಸ್ತ್ರದಂತೆ ಅನೇಕವಾದ ರೂಪಾದಿ ಗುಣಗಳಿಂದಲೂ, ಭ್ರಮಣಾದಿ ಕರ್ಮಗಳಿಂದಲೂ, ನಿತ್ಯದ್ರವ್ಯಗಳಲ್ಲಿರುವ ವ್ಯಾವರ್ತಕ ಧರ್ಮಗಳಿಂದಲೂ, ಜಾತಿ ವ್ಯಕ್ತಿಯೇ ಮೊದಲಾದ ವುಗಳ ನಿತ್ಯಸಂಬಂಧದಿಂದಲೂ ಕೂಡಿರುವಂತೆ ಮತ್ತು ಆಭಾದಿತಾರ್ಥದಿಂದ ಕೂಡಿದ ನಿಶ್ಚಯ, ಫಲ, ಜಾತಿ (ಪರಾಪರಾದಿ ಸಾಮಾನ್ಯ) ಪದಾರ್ಥಗಳಿಂದ ಬೆಳಗುವಂತೆ, (2) ಸಭೆಯು ಅನೇಕ ಸದ್ಗುಣಗಳ, ಸತ್ಕರ್ಮಗಳ ಪ್ರಭೇದಗಳ ಸಮೂಹಗಳಿಂದ ಕೂಡಿದ್ದಿತು. (1) ವೇದಾಂತಸಂತಾನದಂತೆ ಕೈವಲ್ಯೋಪನಿಷತ್‌ನಲ್ಲಿ ಹೇಳಿರುವಂತೆ ಶಿವಸಂಕಲ್ಪೋಧ್ಯಾಯದಿಂದಲೂ, ಶ್ವೇತಾಶ್ವತರ ಮೈತ್ರೇಯ ಪರಮಹಂಸಗಳೆಂಬ ಉಪನಿಷತ್ತುಗಳಿಂದ ಪ್ರಕಾಶಿಸುವಂತೆಯೂ, ಓಂಕಾರದಲ್ಲಿ ಉಂಟಾದ ಅನುರಾಗದಿಂದ ಅಭಿವ್ಯಕ್ತವಾದ ಸಾಕಾರತತ್ತ್ವಪ್ರತಿಪಾದಕವಾದ ಶ್ರುತಿವಾಕ್ಯಗಳಿಂದಲೂ ಮನೋಹರ ವಾಗಿರುವಂತೆಯೂ, (2) ಸಭೆಯು ಶಿವನಿರ್ವಾಣಮುಕ್ತಿಯಾಗಲೆಂಬ ಶುಭೇಚ್ಛೆಯುಳ್ಳ ಶ್ವೇತಾಶ್ವತರ, ಮೈತ್ರೇಯಮುನಿಗಳಿಂದಲೂ, ಪರಮಹಂಸರಾದ ಯತಿಗಳಿಂದಲೂ ಕಂಗೊಳಿಸುತ್ತಿದ್ದಿತು. ಮತ್ತು ಪ್ರಕೃಷ್ಟವೂ, ನವೀನವೂ ಆದ ಕಾಂತಿಯೊಡನೆ ಹುಟ್ಟಿದ ಸರ್ವಮಂಗಳಪ್ರದವೂ, ಮನೋಹಾರಿಯೂ ಆದ ಗುಣಗಳಿಗೆ ಗಣೆಯಾಗಿರುವ ಪರಮೇ

---

೧ ಬಹುಗಣ (ಚ)

*ಆದಿತ್ಯವಸುವಿಸರಾನ್ವಿತಮಾಗಿಯುಮಸಿತತಗಿತಮೋಮಿಳಿತಮುಂ, ಸ್ಫುರಿತಾಮಳ ಕೀಲಾಕ್ಷಾನ ಳಾಳಿಕ ದಾರುಕರೇಣುಕಾಂತಸ್ಥಿತಿಯಾಗಿಯುಂ ಸದಾಶ್ರಿತಾವನಸ್ವಭಾವಮುಂ, ಸುರಭಿಗಂಧವಾಹಬಂಧುರ ಮಾಗಿಯುಂ ಸದಾನಂದಿಭೃಂಗ್ಯಂಚಿತಮುಂ, ಭೀಮಧರ್ಮಪ್ರವೀರಪದಾಲಂಬಿತಮಾಗಿಯುಂ ಗುರು

ಶ್ವರನಿಂದ ಮನೋಹರವಾಗಿದ್ದಿತು. (1) (ಆದಿತ್ಯ-ವಸು-ವಿಸರ-ಅನ್ವಿತ್ವಮಾಗಿಯುಂ) ಸೂರ್ಯಕಿರಣಪ್ರಸರಣದಿಂದ ಕೂಡಿದ್ದರೂ, (ಅಸಿತ–ತಮೋ-ಮಿಳಿತಮುಂ) ಕಪ್ಪಾದ ಕತ್ತಲೆಯಿಂದ ಕೂಡಿರುವುದು ಎಂದರೆ ವಿರೋಧ. (2) ಅದಿತ್ಯದೇವತೆಗಳ, ವಸುದೇವತೆ ಗಳ ಸಮೂಹದಿಂದ ಕೂಡಿದ್ದು, (ಸಿಕತಮೋ-ಮಿಳಿತಂ-ನ) ತೀಕ್ಷ್ಣವಾದ ತಮೋಗುಣದಿಂದ ಕೂಡಿದುದು ಅಲ್ಲ ಎಂದರೆ ವಿರೋಧ ಪರಿಹಾರ.) ಸ್ಫುರಿತ-ಅಮಳ-ಕೀಲ-ಅಕ್ಷ-ಅನಲ-ಆಳಿಕ,-ದಾರು-ಕರೇಣು-ಕಾಂತ-ಸ್ಥಿತಿಯಾಗಿಯುಂ) (1) ಪ್ರಕಟವಾದ ನಿರ್ಮಲವಾದ ಜ್ವಾಲೆಗಳಿಂದ ಕೂಡಿದ ಮೈಯುಳ್ಳ ಅಗ್ನಿಯ ಸಾಲುಗಳುಳ್ಳ ಮರಗಳಿಂದಲೂ, ಹೆಣ್ಣಾನೆ ಗಳಿಂದಲೂ ಮನೋಹರವಾಗಿ, (ಸದಾ-ಆಶ್ರಿತ-ಅವನ-ಸ್ವಭಾವಮುಂ) ಯಾವಾಗಲೂ ವನವಲ್ಲದ ಸ್ವಭಾವದಿಂದಿದ್ದಿತು ಎಂದರೆ ವಿರೋಧ ಪ್ರಕಟವಾಯಿತು. (2) ಪ್ರಕಾಶ ಮಾನವಾದ, ನಿರ್ಮಲವಾದ ಮೈಯುಳ್ಳ, ಅಗ್ನಿಯೇ ಹಣೆಯಲ್ಲಿ ಉಳ್ಳವನು ಎಂದರೆ ಹೊಳೆಯುವ ಉರಿಗಣ್ಣನು ; ದಾರುಕ, ರೇಣುಕ ಮೊದಲಾದ ಪ್ರಮಥರ ಹೃದಯ ಗುಹೆಯಲ್ಲಿದ್ದು, ತನ್ನನ್ನು ಶರಣುಬಂದವರನ್ನು ರಕ್ಷಿಸುವ ಸ್ವಭಾವವುಳ್ಳವನು ಎಂದರೆ ವಿರೋಧ ಪರಿಹಾರ, (ಸುರಭಿ-ಗಂಧವಾಹ-ಬಂಧುರಮಾಗಿಯುಂ-ಸದಾ-ಆನಂದಿ-ಭೃಂಗಿ-ಅಂಚಿತಮುಂ) ಸಂಪಗೆಹೂಗಳ ಪರಿಮಳವನ್ನು ಹೊತ್ತು ಬೀಸುತ್ತಿರುವ ಗಾಳಿಯಿಂದ ಕೂಡಿದ್ದರೂ, ಆನಂದದಿಂದ ಹೆಣ್ಣುತುಂಬಿಗಳು ಹಾರಾಡುತ್ತಿದ್ದುವು ಎಂದರೆ ವಿರೋಧವು ವ್ಯಕ್ತವಾಯಿತು. (2) ಸುರಭಿ-ಗಂಧವಾಹ-ಬಂಧುರಮಾಗಿಯುಂ-ಸದಾ-ನಂದಿ-ಭೃಂಗಿ-ಅಂಚಿತಮುಂ) ಪರಿಮಳವುಳ್ಳ ಗಂಧವನ್ನು ಲೇಪಿಸಿಕೊಂಡು ಚೆಲುವಾಗಿರುವ ನಂದೀಶ್ವರ ಭೃಂಗೀಶ್ವರರು ಓಡಾಡುತ್ತಿದ್ದರು ಅಥವಾ ಪೂಜಿಸುತ್ತಿದ್ದರು ಎಂದರೆ ವಿರೋಧಪರಿಹಾರ. (ಭೀಮ-ಧರ್ಮ-ಪ್ರವೀರ_ ಪದ -ಅಲಂಬಿತಮಾಗಿಯುಂ-ಗುರು-ಗಾಂಗೇಯ-ಸು-ರವಿಭವ-ಅನ್ವಿತಮುಂ) (1) ಭೀಮಸೇನ, ಯುಧಿಷ್ಠಿರ, ಮಹಾಪ್ರತಾಪಿಗಳಾದ ಅರ್ಜುನಾದಿ ರಕ್ಷಿಸಲಟ್ಟ ಪ್ರದೇಶವಾದರೂ, ದ್ರೋಣ, ಭೀಷ್ಮ, ಸುಸ್ವಭಾವದ ಕರ್ಣ ಮುಂತಾದವರಿಂದ ಕೂಡಿದ್ದಿತು ಎಂದರೆ ವಿರೋಧ ತೋರುವುದು. (2) ಭೀಮಧರ್ಮ–ಶೈವಧರ್ಮ ವುಳ್ಳ ವೀರಮಾಹೇಶ್ವರರು ಶಿವನ ಪಾದಗಳನ್ನು ಆಶ್ರಯಿಸಿದ್ದರು ; ಗಂಗಾಸಂಬಂಧವುಳ್ಳ ಷಣ್ಮುಖ ಮತ್ತು ದೇವತೆಗಳು ನೆರೆದು ಶಿವಸಭೆಯು ವೈಭವಯುತವಾಗಿದ್ದಿತು ಎಂದರೆ

೧ ಮನ್ವಿತ (ಯ)

* ಕೆಲವು ಪ್ರತಿಗಳಲ್ಲಿ ಇಲ್ಲಿ ''ವಿರೋಧಾಭಾಸ'' ಎಂದು ಮುಂದಿನ ಗದ್ಯಭಾಗವನ್ನು ಕುರಿತು ಸೂಚನೆ ಕೊಟ್ಟಿದೆ.

ಗಾಂಗೇಯಸುರವಿಭವಾನ್ವಿತಮುಂ, ಸವಿಧಗತಾಪಸಾಟೋಪವಾಗಿಯುಂ ಸಮುಜ್ವಲಸೌಮ್ಯಾಂಗಾರಕ ವಿರಾಜಿತಮೆನಿಸಿರ್ದುದಂತುಮಲ್ಲದೆಯುಂ

ಚಂಪಕ ನಿಯುತವಿನಾಯಕಾನ್ವಿತಮಿದೆಂದೆನಿಸಿರ್ದುಮಹೀನಭೋಗಭಾ
ಗ್ಯಯುತಮುಪಾಸ್ತಭಾನುಕಿವೆನೆ ಸಂದುಮಧಃಕೃತಭಾನುಳಿಜಾತಮಾ
ರಯೆಳಿ ಘನಲಕ್ಷ್ಮಿಯಾಗಿಯುಮಚಂಚಲಮಚ್ಯುತಶೋಭೆ ತನ್ನೊಳೊ
ಪ್ಪಿಯುಮಜಡೋದಯಸ್ಥಿತಿಯುಮೆಂದೆನಿಸಿರ್ದುದು ತತ್ಸಭಾಗ್ಯಹಂ ೮೧

ವಚನ ಮತ್ತಮಲ್ಲಿ ಮನೋಜ್ಞತರಮೆನಿಸಿ ನಿರುಪಮಾನವಿಭವಂಬೆತ್ತು ಪುಟವಿಟ್ಟ ಕುಂದಣದಿಂ ಕೋಟಿಮಡಿಮಿಗಿಲೆನಿಪ ನಿಜಕ್ಕಲೇಖಿವರಚ್ಛವಿಕ್ ಪುದಿದೆತ್ತಂ ಪತ್ತುಗೆಗೊಂಡು ಪಸರಿಸೆ ಗಜಾಜಿನಂ

ವಿರೋಧ ಪರಿಹಾರವಾಯಿತು. (ಸವಿಧ-ಗತ–ತಾಪ–ಸಾಟೋಪವಾಗಿಯುಂ ಸಮುಜ್ವಲ–ಸಾಮ್ಯ-ಅಂಗಾರ-ಕವಿ-ರಾಜಿತಂ) ಸಮೀಪವನ್ನು ಹೊಂದಿ ಪ್ರಜ್ವಲಿಸುವ ಸೂರ್ಯನ ಪ್ರಕರತೆಯಿದ್ದರೂ, ಬುಧ, ಕುಜ, ಶುಕ್ರಗಳು ಬೆಳಗುತ್ತಿದ್ದುವು ಎಂದರೆ (ಸೂರ್ಯನ ಉಗ್ರತೇಜಸ್ಸಿರುವ ಸಮಯದಲ್ಲಿ ಇತರ ಗ್ರಹಗಳು ಬೆಳಗಲಾರವಾದ್ದರಿಂದ) ವಿರೋಧವು ತೋರುವುದು. (2)(ಸವಿಧ-ಗತ-ತಾಪಸಾಟೋಪ–ಸಮುಜ್ವಲ–ಸೌಮ್ಯ-ಅಂಗಾರ-ಕವಿ-ರಾಜಿತಂ) ಶಿವನನ್ನು ಸಮೀಪಿಸಿದ ಋಷಿಗಳ ಆಡಂಬರದಿಂದ ಕೂಡಿದ್ದಿತು. ಬುಧ, ಕುಜ, ಶುಕ್ರಗ್ರಹಗಳು ಬೆಳಗುತ್ತಿದ್ದುವು ಎಂದಲ್ಲಿ ವಿರೋಧವಿಲ್ಲ. ೮೧. ಸಭೆಯು (1) ನಿರ್ದಿಷ್ಟವಾಗಿ ವಿಘ್ನಕರ್ತರಿಂದ ಕೂಡಿದ್ದರೂ, ಹೀನವಲ್ಲದ ಅಂದರೆ ಉತ್ಕೃಷ್ಟವಾದ ಸುಖ ಸೌಭಾಗ್ಯಗಳಿಂದ ತುಂಬಿದ್ದಿತು ಎಂದರೆ ವಿರೋಧ ; ಕ್ಲುಪ್ತವಾದ ಗಣಪತಿಯೊಡನೆ ಕೂಡಿ ನಾಗರಾಜನಾದ ಶೇಷನಿಂದಲೂ, ನಿತ್ಯಸುಖಾನುಭವದಿಂದಲೂ, ಷಡ್ಗುಣೈಶ್ವರ್ಯ ದಿಂದಲೂ ಕೂಡಿದ್ದಿತು ಎಂದರೆ ವಿರೋಧ ಪರಿಹಾರ ; (1) ಅಸ್ತವಾಗುತ್ತಿರುವ ಕಿರಣಗಳಿದ್ದರೂ, ಸೂರ್ಯನ ಕಿರಣಗಳನ್ನು ತಿರಸ್ಕರಿಸುವಂತೆ ಇದ್ದಿತು ಎಂದರೆ ವಿರೋಧ, (2) ಸಭೆಯು ಪ್ರಕಾಶಮಾನವಾಗಿ ಸೂರ್ಯತೇಜಸ್ಸಿಗಿಂತಲೂ ಹೆಚ್ಚಾಗಿ ಬೆಳಗುತ್ತಿದ್ದಿತು ಎಂದರೆ ವಿರೋಧ ಪರಿಹಾರ. ವಿಚಾರಿಸಲು (1) ಘನಲಕ್ಷ್ಮೀದೇವಿಯಾಗಿಯೂ ಚಂಚಲವಿಲ್ಲವೆಂದರೆ ವಿರೋಧ ; (2) ಮಹಾಘನವಾದ ಲಕ್ಷ್ಮಿಯನ್ನುಳ್ಳ ಸಭೆಯು ಸ್ಥಿರವಾಗಿದ್ದಿತು ಎಂದರೆ ವಿರೋಧವಿಲ್ಲ. ವಿಷ್ಣುವಿನ ಕಾಂತಿಯು ಸಮುದ್ರಲ್ಲಿದ್ದರೂ ನೀರಿರಲಿಲ್ಲವೆಂದರೆ ವಿರೋಧ ; ಚ್ಯುತಿಯಿಲ್ಲದ ಕಾಂತಿಯಿಂದ ಸಭೆಯು ಒಪ್ಪಿದ್ದಿತು. ಅಜ್ಞಾನಿಗಳು ಅಲ್ಲಿ ಕಾಣಸುತ್ತಿರಲಿಲ್ಲವೆಂದರೆ ವಿರೋಧ ಪರಿಹಾರ. ಈ ರೀತಿಯಲ್ಲಿ ಶಿವನ ಸಭೆಯು ಕಂಗೊಳಿಸುತ್ತಿದ್ದಿತು, ವಚನ : ಪುನಃ ಅಲ್ಲಿ ಶಿವನು-ಅತ್ಯಂತ ರಮಣೀಯ ನಾಗಿಯೂ,ನಿರುಪಮಾನ ವೈಭವದಿಂದಲೂ, ತಪ್ತಕಾಂಚನಕಾಂತಿಗಿಂತಲೂ ಕೋಟಿಪಾಲು

---

೧ ಸವಿಗದತಾ (ಚ) ೨-೨ ರಾಜಿತಮುಮೆ (ಯ) ೩ ಸಾನು (ಚ) ೪-೪ ವಾಮುಹಾ। ಜಯ (ರ) ೫-೫ ಯಿಂದೆಂದೆನಿ (ಯ) ೬-೬ ವರದ ಛವಿ (ಕ, ಚ)

ತಳತಳಿಪ ಸುವರ್ಣಾಂಬರದಂತೆ ಶೋಭಿಸೆಯುಂ, ತೊಡೆದ ಭಸಿತಾಲೇಪಂ ಕಾಶ್ಮೀರಾಂಗರಾಗದಂತೆ ರಂಜಿಸೆಯುಂ, ಮಣಿಕಲಿತ[1]ಫಣಿಕುಂಡಲಂ[1] ಕನತ್ಕನಕಕರ್ಣಾಭರಣದಂತೆ ಕಮನೀಯಮಾಗಿಯುಂ, ತೊಟ್ಟ ಕಪಾಲಮಾಲಾಭರಣಂ ಮಿಸುಪ ಮಿಸುನಿಯಾಭರಣದಂತೆ ತೊಳತೊಳಗೆಯುಂ, ನಿಜತನು ಸಹಜಸುಗಂಧದಿಂ ತಳ್ತು ಕೊರಲ ಗರಲಂ ತಳೆದ ಮೃಗಮದರೇಖೆಯೆನಿಸಿ ಮೆರೆಯೆಯುಂ, ಶಾಂತರಸಂ ಸಂಗಳಿಸಿದಳಿಕವಿಳಸಿತಶಿಖಿನಯನಂ ಗೈರಿಕಲಲಾಮಮನನುಕರಿಸೆಯುಂ, ಕರಕೋಕ[2]ನದದರುಣರುಚಿ ಮುಸುಂಕಿದಜಕಪಾಲಂ ಮಣಿಮಯಪಾತ್ರೆಯೊಪ್ಪಮನಪ್ಪುಕೆಯ್ದು ವಿರಾಜಿಸೆಯುಂ, ಅನನ್ಯಸಾಮಾನ್ಯ ವಿಭ್ರಮಂ ತ್ರೈಲೋಕ್ಯ[3]ಮುಂ ಪಿಂಗದಾಳ್ವ ಪರಮಸೌಭಾಗ್ಯಯೋಗ್ಯಲಕ್ಷಣಂ ತನ್ನೊರ್ವನೊಳ್ ನೆಲಸಿ ನಿಂದುದೆಂಬ ಬಗೆಗಡರ್ಪಾಗಿ ಮಿಸುಪ ಖಂಡಪರಮೈಶ್ವರ್ಯವಿಭ್ರಾಜಿತಂ, ಸಕಲಕಲ್ಯಾಣ ಗುಣಮಣಿಗಣರತ್ನಾಕರಂ, ಜಗದಂಡಕರಂಡಪಂಡನಿರ್ಮಾಣ[4]ಪ್ರವೀಣನುಂ[4] ತ್ರೈಗುಣ್ಯವಾಸನಾತೀತಂ, ತ್ರಯೀಸೀಮಂತಿನೀಸೀಮಂತರತ್ನಾಭರಣಂ, ನಿ ರ ತಿ ಶ ಯ ಮಂಗಳಕಲಾಕೇಳೀ

ಅಧಿಕವಾಗಿದ್ದ ತನ್ನ ದೇಹಕಾಂತಿಯಿಂದ ಎಲ್ಲೆಡೆಗಳಲ್ಲೂ ಪ್ರಕಾಶಿಸುತ್ತಲೂ ಇದ್ದನು, ಧರಿಸಿದ್ದ ಗಜಚರ್ಮಾಂಬರವು ಸುವರ್ಣಾಂಬರದಂತೆ ಶೋಭಿಸುತ್ತಿದ್ದಿತು. ಬಳಿದು ಕೊಂಡಿದ್ದ ವಿಭೂತಿಯು ಕುಂಕುಮಕೇಸರಗಂಧದಂತೆ ರಂಜಿಸುತ್ತಿದ್ದಿತು. ರತ್ನಖಚಿತ ವಾದ ಸರ್ಪಾಕೃತಿಯ ಕಿವಿದೊಡವುಗಳು ಉಜ್ಜ್ವಲವಾದ ಕನಕಕರ್ಣಾಭರಣಗಳಂತೆ ಮನೋಹರವಾಗಿದ್ದುವು. ಧರಿಸಿದ್ದ ತಲೆಬುರುಡೆಗಳ ಕಂಠಹಾರವು ಬೆಳಗುತ್ತಿರುವ ಸ್ವರ್ಣಾಭರಣದಂತೆ ಪ್ರಕಾಶಿಸುತ್ತಿದ್ದಿತು, ಶರೀರವು ಸಹಜ ಪರಿಮಳದಿಂದ ಕೂಡಿದ್ದು, ಕಂಠದಲ್ಲಿನ ವಿಷವು ಕಸ್ತೂರಿಯ ಲೇಪನದಂತೆ ಸೊಗಸಾಗಿದ್ದಿತು. ಪರಮ ಶಾಂತನಾಗಿದ್ದು ದರಿಂದ ಹಣೆಯಲ್ಲಿ ಝಗಝಗಿಸುತ್ತಿದ್ದ ಉರಿಗಣ್ಣು ಕಾವಿಯ ಬಣ್ಣದ ಅಕ್ಷತೆಯನ್ನು ಹಣೆಯಲ್ಲಿ ಧರಿಸಿದ್ದಂತೆ ಕಾಣುತ್ತಿದ್ದಿತು. ಕನ್ನೈದಿಲೆಯಂತೆ ಕೋಮಲವಾದ ಕೈಯಲ್ಲಿ ಹಿಡಿದಿದ್ದ ಬ್ರಹ್ಮಕಪಾಲವು ಆರಕ್ತಕಾಂತಿಯಿಂದ ಕೂಡಿ ರತ್ನಮಯವಾದ ಪಾತ್ರೆಯಂತೆ ಬೆಳಗುತ್ತಿದ್ದಿತು. ಅನನ್ಯ ಸಾಧಾರಣವಾದ ವೈಭವವೂ, ಮೂರು ಲೋಕಗಳನ್ನೂ ಯಾವ ಕೊರತೆಯೂ ಇಲ್ಲದೆ ಪಾಲಿಸುವ ಪರಮ ಸೌಭಾಗ್ಯಕ್ಕೆ ಉಚಿತವೆನಿಸಿದ ಲಕ್ಷಣಗಳೂ ತನ್ನಲ್ಲಿ ಮಾತ್ರವೇ ನೆಲೆಗೊಂಡಿವೆಯೆಂಬುದನ್ನು ಸೂಚಿಸುತ್ತಿರುವ ದೇದೀಪ್ಯಮಾನವಾದ ಪರಮೈಶ್ವರ್ಯದಿಂದ ಶಿವನು ಬೆಳಗುತ್ತಿದ್ದನು. ಸಕಲ ಕಲ್ಯಾಣಗುಣಗಳೆಂಬ ರನ್ನ ರಾಶಿಗೆ ಸಮುದ್ರದಂತೆಯೂ, ಬ್ರಹ್ಮಾಂಡಗಳೆಂಬ ಬುರುಡೆಯ ಚಿಪ್ಪುಗಳನ್ನು ನಿರ್ಮಾಣ ಮಾಡುವುದರಲ್ಲಿ ಅತಿಕುಶಲಿಯೂ, ಸತ್ತ್ವ, ರಜಸ್, ತಮೋಗುಣಗಳಿಗೆ ಅತೀತನಾಗಿ, ಮೂರುವೇದಗಳೆಂಬ ರಮಣಿಯರ ಬೈತಲೆಯ ರತ್ನಾಭರಣನೆನಿಸಿ, ನಿರತಿಶಯವಾದ

---

೧-೧ ಫಣಿಪಕುಂಡಲ (ಗ. ತ) ೨ ಕನತ್ಕೋಕ (ಚ) ೩ ತ್ರೈಲೋಕ (ತ) ೪-೪ ಪ್ರವೀಣಂ (ಯ).

ನಿವಾಸಂ, ನಿಜಶಕ್ತಿಲತಾಕಂದಳಿತಪ್ರಪಂಚಪಲ್ಲವಂ, ಪ್ರ ಣ ವ ಪಂಕೇರುಹಪರಮಹಂಸಂ, ಜನ್ಮಜರಾರುಜಾಮರಣವಿವರ್ಜಿತವಿಮಳಕಳೇವರಂ, ಭಜಕಭವಾಮಯನಿವಾರಣಮಹಾಭಿಷಕ್ತನುಂ, ಭಕ್ತಜನಮನೋರಥಪಾರಿಜಾತನನಾದ್ಯಂತನವಿದ್ಯಾರಹಿತಂ, ಸರ್ವಜ್ಞಂ, ನಿತ್ಯತೃಪ್ತಮನಾದಿ೧ಪ್ರಬೋಧಂ, ಸ್ವತಂತ್ರ೧ನಲುಪ್ತಾನಂತಶಕ್ತಿಯುಕ್ತನದ್ವಿತೀಯವೈಭವಂ, ಭೋಗಮೋಕ್ಷಪ್ರದಾಯಕನ ಪರಿಚ್ಛಿನ್ನಸಚ್ಚಿದಾನಂದ೨ಮಯಂ೨, ಸಕಲಹೃದಯಗುಹಾನಿವಾಸನವಾಙ್ಮನಸ೩ಗೋಚರಂ೩ ವಿಶ್ವಾಧಿಕಂ ವಿಶ್ವಭೇದ್ಯ ೪ನುಮಾಸಹಿತಂ೪ ೫ಮುಕ್ತಿಯ ಮುಗುಳಂತೆ೫, ಚಿತ್ತಿನ ಬಿತ್ತಿನಂತೆ, ೬ಸತ್ಯದ ಸಾರ೬ದಂತೆ, ನಿತ್ಯತೆಯ ನಿಲುವಿನಂತೆ,೭ಆನಂದದಾಗರ೭ದಂತೆ, ಪರಿಪೂರ್ಣತೆಯ ಪರಮಸೀಮೆಯಂತೆ, ಕರುಣದ ಕಡಲಂತೆ, ಧರ್ಮದ ಪೆರ್ಮೆಯಂತೆ, ಸಿಂಗರದ ಸೀಮೆ೮ಯಂತೆ, ಮಂಗಳದ ಮೈಮೆಯಂತೆ, ಕಾಂತಿಯ ಕರುವಿನಂತೆ, ಶಾಂತಿಯ ಸರ್ವಸ್ವದಂತೆ, ಸರ್ವದೇವತಾಸಾರ್ವಭೌಮನನವಧಿವಿಭವನದ್ವಿತೀಯ ನೊಪ್ಪುತಿರ್ದನಂತುಮಲ್ಲದೆಯುಂ

ಮಂಗಳ ಕಳೆಗಳಿಗೆ ಕ್ರೀಡಾಗೃಹದಂತಿದ್ದನು. ಪ್ರಪಂಚಗಳು ಅವನ ಮಾಯಾಶಕ್ತಿಯೆಂಬ ಬಳ್ಳಿಯಲ್ಲಿ ಚಿಗುರಿದ ತಳಿರಿನಂತಿದ್ದುವು. ಓಂಕಾರವೆಂಬ ತಾವರೆಗೆ ಪರಮಹಂಸಸ್ವರೂಪನಾಗಿದ್ದನು. ಜನ್ಮ, ಜರಾ, ರೋಗ, ಮರಣಗಳಿಲ್ಲದ ನಿರ್ಮಲ ಶರೀರನೂ, ಭಕ್ತರ ಭವವೆಂಬ ರೋಗ ಪರಿಹರಿಸುವ ಉತ್ತಮ ವೈದ್ಯನೂ, ಭಕ್ತರ ಕೋರಿಕೆಗಳನ್ನು ಪೂರ್ಣಗೊಳಿಸುವಲ್ಲಿ ಕಲ್ಪವೃಕ್ಷಸ್ವರೂಪನೂ, ಆದ್ಯಂತಶೂನ್ಯನೂ, ಅವಿದ್ಯಾರಹಿತನೂ. ಸರ್ವಜ್ಞನೂ, ನಿತ್ಯತೃಪ್ತನೂ, ಅನಾದಿಕಾಲದಿಂದಲೂ ಜ್ಞಾನದಾತೃವೂ, ಸ್ವತಂತ್ರನೂ, ಅನೂನಾನಂತ ಶಕ್ತನೂ, ಅದ್ವಿತೀಯ ವೈಭವವುಳ್ಳವನೂ, ಸುಖರೂಪವಾದ ಭೋಗಗಳನ್ನೂ, ಅವಿದ್ಯಾ ದುಃಖನಿವೃತ್ತಿರೂಪವಾದ ಮೋಕ್ಷವನ್ನು ಅನುಗ್ರಹಿಸುವವನೂ ಆಗಿದ್ದನು. ದೇಶ, ಕಾಲ, ವಸ್ತುಗಳಿಂದ ಅಭಿನ್ನವಾದ ಸಚ್ಚಿದಾನಂದಸ್ವರೂಪನೂ, ಸಕಲರ ಹೃದಯಗುಹೆಗಳಲ್ಲಿ ಪ್ರತಿಷ್ಠಿತನೂ, ವಾಗ್ಮಿಗಳಿಗೆ ಅಗೋಚರನೂ, ವಿಶ್ವದಲ್ಲೆಲ್ಲಾ ಶ್ರೇಷ್ಠನೂ, ವಿಶ್ವವನ್ನು ಮೀರಿದವನೂ, ಉಮಾಸಹಿತನೂ ಆಗಿದ್ದನು. ಶಿವನು ಮುಕ್ತಿಯ ಪುಷ್ಪದಂತೆಯೂ, ಜ್ಞಾನದ ಬೀಜದಂತೆಯೂ, ಸತ್ಯದಸಾರದಂತೆಯೂ, ಶಾಶ್ವತಸ್ಥಿತಿಗೆ ದ್ವಾರದಂತೆಯೂ, ಆನಂದಕ್ಕೆ ನಿವಾಸಸ್ಥಾನದಂತೆಯೂ, ಪರಿಪೂರ್ಣತೆಯ ಅಂತಿಮ ನೆಲೆಯಂತೆಯೂ, ಕಾರುಣ್ಯದ ಶರಧಿಯಂತೆಯೂ ಧರ್ಮದ ಅಗ್ಗಳಿಕೆಯಂತೆಯೂ, ಶೃಂಗಾರದ ಪರಾಕಾಷ್ಠತೆಯಂತೆಯೂ, ಮಂಗಳದ ಮಹಿಮೆಯಂತೆಯೂ, ತೇಜಸ್ಸಿನ ಪಡಿಯಚ್ಚಿನಂತೆಯೂ, ಶಾಂತಿಯ ಸರ್ವಸ್ವದಂತೆಯೂ ಇದ್ದನು. ಈ ರೀತಿಯಾಗಿ ಸರ್ವದೇವತಾಸಾರ್ವಭೌಮನೂ, ನಿರವಧಿಕ ವೈಭವನೂ, ಅದ್ವಿತೀಯನೂ ಆದ

---

೧-೧ ಪ್ರಬೋಧಸ್ವತಂತ್ರ (ಯ, ತ) ೨-೨ ಮಯನುಂ (ಚ) ೩-೩ ಗೋಚರನುಂ (ಜ) ೪ ಸೇವ್ಯ ೫ ಸಹಿತನುಂ (ಜ) ೬-೬ ಸತ್ಯದ ಸಾಗರ (ಕ, ಪ) ೭-೭ ಆನಂದಸಾಗರ (ಯ, ರ, ಲ) ೮ ಮೇರೆ (ಯ)

ಚಂಪಕ ಕುವರನನೊರ್ಮೆ ಮುದ್ದಿಸುತಪರ್ಣೆಯ ವಕ್ತ್ರಮನೊರ್ಮೆ ನೇಹದು
ತ್ಸವದೊಳೆ ನೋಡುತುಂ ಪ್ರಮಥವರ್ಯರನಾದರಿಸುತ್ತುಮೊರ್ಮೆ ಪಾ
ಡುವ ಸುರಸುಂದರೀರವಮನಾಲಿಸುತೊರ್ಮೆ ಪೊದಟ್ಟು ರಂಭೆಯಾ
ಡುವ ನವಲಾಸ್ಯಕೊರ್ಮೆ ಮಿಗೆ ಮೆಚ್ಚುತೆ ೧ಭೋಗಿವಿಭೂಷ೧ನೊಪ್ಪಿದಂ ೮೨

ಮತ್ತೇಭ ಪೆಱಸಾರ್ ಕೋಣಪ ಸೂಕದಿರ್ ಪವನ ವಿತ್ತಾಧೀಶ ನೀ ಕಾಣ್ಕೆಯುಂ
ನೆಱೆನೀಡಂತಕ ಸಂತಮಿರ್ ಗಳಪದಿರ್ ಲೋಕೇಶ ಪಾಕಾರಿ ಬಂ
ದೆಱಗೈ ಮಾಧವ ಕುಳ್ಳಿರಿಲ್ಲಿ ರಜನೀಶಂಗಬ್ಜನೀಕಾಂತ ನೀಂ
ತೆಱಪಂ ಮಾಡೆನುತಲ್ಲಿ ಕೂಡೆ ಜಡಿದಂ ಮಾಕಾಲನಾ ಕಾಲದೊಳ್ ೮೩

ಮಹಾಸ್ರಗ್ಧರೆ ಪವನಂ ಸೌರಭ್ಯಮಂ ಪನ್ನಗಪತಿ ಮಣಿಸಂದೋಹಮಂ ಮಾಣದೊಲ್ದ
ರ್ಣವಮುದ್ಯನ್ಮೌಕ್ತಿಕಶ್ರೇಣಿಯನುರುಕನಕಾನೀಕಮಂ ಶ್ರೀದನಬ್ಜೋ
ದ್ಭವನೊಳ್ಪಿಂ ನವ್ಯವಸ್ತುವ್ರಜಮನಮಲಮಂದಾರಮಾಲಾಳಿಯಂ ನಾ
ಕಿವರಂ ಕೆಯ್ಗಾಣ್ಕೆಗೆಯ್ದಂಘ್ರಿಗೆ ಮಣಿದೊಲವಿಂ ಕೀರ್ತನಂಗೆಯ್ಯುತಿರ್ದರ್ ೮೪

ಶಿವನು ಪ್ರಕಾಶಿಸುತ್ತಿದ್ದನು, ಅದೂ ಅಲ್ಲದೆ ೮೨. ಒಂದು ಸಲ ಕುಮಾರಸ್ವಾಮಿಯನ್ನು ಮುದ್ದಿಸುತ್ತಿದ್ದನು. ಒಂದು ಸಲ ಪಾರ್ವತಿಯ ಮುಖವನ್ನು ಸ್ನೇಹಭಾವದಿಂದೀಕ್ಷಿಸುತ್ತಿದ್ದನು. ಒಂದು ಸಲ ಮಾಹೇಶ್ವರಶ್ರೇಷ್ಠರನ್ನು ಆದರಿಸುತ್ತಿದ್ದನು. ಹಾಡುತ್ತಲಿದ್ದ ದೇವತಾಸ್ತ್ರೀಯರ ಗಾನವನ್ನು ಆಲಿಸುತ್ತಿದ್ದನು. ಒಂದು ಸಲ ವಿಖ್ಯಾತ ರಂಭೆಯು ಅಭಿನಯಿಸುತ್ತಲಿದ್ದ ನರ್ತನವನ್ನು ವಿಶೇಷವಾಗಿ ಮೆಚ್ಚುತ್ತಾ ಶಿವನು ಕಂಗೊಳಿಸುತ್ತಿದ್ದನು. ೮೩. ಆ ಕಾಲದಲ್ಲಿ ಶಿವನ ಸಭೆಯಲ್ಲಿ ಕಂಕಾಲನೆಂಬುವನು, "ನಿಋುತಿಯೇ ಹಿಂದಕ್ಕೆ ಹೋಗು ; ವಾಯುವೇ ನುಗ್ಗಬೇಡ; ಕುಬೇರನೇ ನೀನು ಕಾಣಿಕೆಯನ್ನು ತಂದೊಪ್ಪಿಸು ; ಯಮನೇ ಸಮಾಧಾನ ; ಬ್ರಹ್ಮನೇ ಹರಟಬೇಡ ; ಇಂದ್ರನೇ ಬಂದು ನಮಸ್ಕರಿಸು ; ಮಾಧವನೇ ಇಲ್ಲಿ ಕುಳಿತಿರು ; ಸೂರ್ಯನೇ ನೀನು ಚಂದ್ರನಿಗೆ ಅವಕಾಶವನ್ನು ಮಾಡಿಕೊಡು" ಎಂದು ಗದ್ದರಿಸುತ್ತಿದ್ದನು. ೮೪. ವಾಯುವು ಸುಗಂಧವನ್ನೂ, ಆದಿಶೇಷನು ರತ್ನದ ರಾಶಿಗಳನ್ನೂ, ವರುಣನು ಉತ್ತಮವಾದ ಮುತ್ತುಗಳ ಮಾಲೆಗಳನ್ನೂ, ಕುಬೇರನು ವಿಪುಲವಾಗಿ ಕನಕರಾಶಿಗಳನ್ನೂ, ಬ್ರಹ್ಮನು ನೂತನ ವಸ್ತುಗಳ ರಾಶಿಗಳನ್ನೂ, ಇಂದ್ರನು ಉತ್ತಮವಾದ ಮಂದಾರಪುಷ್ಪಗಳ ಮಾಲೆಗಳನ್ನೂ ಸರದಿತಪ್ಪದೆ ಭಕ್ತಿಯಿಂದ ಅಂಜಲಿಗಳಲ್ಲಿ ಸಮರ್ಪಿಸಿ, ಪಾದಗಳಿಗೆ ನಮಿಸಿ

---

೧–೧ ಪನ್ನಗಭೂಪ (ಯ)

ಶಾರ್ದೂಲ ಶ್ರೀರಾಮಾರಮಣಾರವಿಂದಭವ ಜಂಭಾರಾತಿಮುಖ್ಯಾಮರ
ಸ್ಫಾರಾಂಚನ್ಮಕುಟಪ್ರಬದ್ಧ ಮಣಿರುಚಿ‌‌ರ್ನೀರಾಜಿತಾಂಘ್ರಿದ್ವಯಂ
ಕಾರುಣ್ಯಾಕರನಪ್ರಮೇಯಮಹಿಮಾಧಾರಂ ಪರಂಜ್ಯೋತಿರಾ
ಕಾರಂ ಕಣ್ಗೊಳಿಸಿರ್ದನೈಂದವಕಲಾಶ್ರೀಶೇಖರಂ ಶಂಕರಂ ೮೫

ಗದ್ಯ ಇದು ನಿಖಿಲಭುವನೈಕವಲ್ಲಭ ಸುರಾಸುರೇಂದ್ರವರದ ಕರುಣಾವರಣ ಪರಮಶಿವಲಿಂಗ ತರುಣಪತಂಗಸಂಗತ ಮಂಗಳಹೃದಯಾರವಿಂದಬಂಧುರ ಸರಸಸಜ್ಜನ[೧] ಮಾನಿತೋಭಯ ಕವಿತಾವಿಚಕ್ಷಣ ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳ ಪ್ರಬಂಧದೊಳ್ ಪ್ರಥಮಾಶ್ವಾಸಂ ಪರಿಸಮಾಪ್ತಂ

ಕೀರ್ತಿಸುತ್ತಿದ್ದರು. ೮೫. ಲಕ್ಷ್ಮೀರಮಣನಾದ ವಿಷ್ಣುವೂ, ಕಮಲಸಂಭವನಾದ ಬ್ರಹ್ಮನೂ, ಜಂಭಾರಿಯಾದ ಇಂದ್ರನೇ ಮೊದಲಾದ ದೇವತೆಗಳೂ ತಮ್ಮ ಕಿರೀಟಖಚಿತ ವಾದ ರತ್ನಗಳ ವಿಶೇಷಪ್ರಭೆಯಿಂದ ಶಿವನ ಚರಣಯುಗಳವನ್ನು ಬೆಳಗುತ್ತಿದ್ದರು. ಕಾರುಣ್ಯಾಕರನೂ, ತಿಳಿಯಲು ಶಕ್ಯವಿಲ್ಲದ ಮಹಿಮೆಗಳಿಗೆ ಆಧಾರನೂ, ಪರಂಜ್ಯೋತಿ ಸ್ವರೂಪನೂ, ಚಂದ್ರಕಳೆಯನ್ನು ಶ್ರೇಷ್ಠ ಕಿರೀಟದಂತೆ ಧರಿಸಿದ ಶಿವನು ಬೆಳಗುತ್ತಿದ್ದನು. ಗದ್ಯ: ಈ ಗದ್ಯಪದ್ಯಾತ್ಮಕವಾದ ಚಂಪೂಪ್ರಬಂಧವು ಸಮಸ್ತ ಲೋಕಗಳಿಗೂ ಏಕಮಾತ್ರ ಪ್ರಭುವೂ, ದೇವ ದಾನವೇಂದ್ರರ ಇಷ್ಟಾರ್ಥಗಳನ್ನು ಅನುಗ್ರಹಿಸುವವನೂ, ದಯಾ ಕವಚನೂ, ಶ್ರೇಷ್ಠನೂ, ಶುಭಚಿಹ್ನನೂ ಆದ ಮಹಾದೇವನೆಂಬ ತರುಣಭಾಸ್ಕರನೊಡ ಗೂಡಿದ ನಿರ್ಮಲಚಿತ್ತವೆಂಬ ತಾವರೆಯಿಂದ ಶೋಭಿತನೂ, ರಸಜ್ಞರಾದ ವಿದ್ವಾಂಸ ರಿಂದ ಪುರಸ್ಕೃತನೂ, ಕನ್ನಡ-ಸಂಸ್ಕೃತ ಭಾಷೆಗಳೆರಡರಲ್ಲೂ ಕವಿತಾಕೌಶಲ್ಯವುಳ್ಳವನೂ ಆದ ಶ್ರೀ ಷಡಕ್ಷರದೇವನೆಂಬ ಕವಿಯಿಂದ ವಿರಚಿತವಾದ ಕಿರಾತರುದ್ರಲೀಲಾ ಕಥನ ಮಹಾಕೃತಿಯಲ್ಲಿ ಮೊದಲನೆಯ ಆಶ್ವಾಸವು ಸಮಾಪ್ತವಾದುದು.

---

೧ ಸರಸಜನ (ಯ, ವ)

# ದ್ವಿತೀಯಾಶ್ವಾಸಂ

ಶ್ರೀಕರನಗತನಯಾಸ್ಯಸು
ಧಾಕರ ಲಸದಮೃತರುಚಿಚಕೋರಂ ಗುಣರ
ತ್ನಾಕರನವನತಿಜನರ
ಕ್ಷಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವಚನ ಮತ್ತಮಾಗಳ್

ಚಂಪಕ ಕೆದರ್ದ ಜಟಾಳಿ ಜಾಱಿದ ಮೃಗಾಜಿನಮುಣ್ಮಿದ ಘರ್ಮವಾರಿಯಿಂ
ಕದಡಿದ ಭೂತಿ ಕಂದಿದ ಮೊಗಂ ನಿಡುಸುಯ್ ಬಿಸುಪಿಂದಮಿರ್ಪುಗುಂ
ದಿದ ತುಟಿ ಕಂಪನಂಬಡೆದ ಕೆಯ್ಯ ಕಮಂಡಲು ವಕ್ಷದೊಳ್ ತೊಡಂ
ಕಿದ ಗಳದಕ್ಷಮಾಲೆ ಬಿಡದೊಂದಿರೆ ಬಂದುದು ತಾಪಸವ್ರಜಂ ೨

ವಚನ ಅಂತು ತವಕಂಬೆತ್ತು ತಳ್ಳಂಕದಿಂ ಮಲ್ಲಳಿಗೊಂಡು ಮನದೊಳುರ್ಬಿದುಬ್ಬಸದುಬ್ಬೆಗಂ ಪರ್ಬಿ ಪರಿಕಲಿಸೆ ತಮತಮಗೆ ತಾಳಲಸದಳಮಾದ ಪೊಸತವಸಿಯೊರ್ವಂ ನೆಗಟ್ದ ತಪದೆಸಕದ ಮಸಕ ಮನಸಮನಯಸಂಗೆ ಬಿನ್ನಪಂಗೆಯ್ವ ಬಗೆಯಿಂ ಬಗೆದಂದಿಂದ್ರಕೀಲನಗೇಂದ್ರತಪೋವನದ ತಪೋಧನರ್

೧. ಸಕಲಸಂಪತ್ಕರನೂ, ಪಾರ್ವತಿಯ ಮುಖಚಂದ್ರನ ಬೆಳಗುವ ಸುಧಾಸದೃಶ ವಾದ ಬೆಳದಿಂಗಳನ್ನು ಆಸ್ವಾದಿಸುವ ಚಕೋರಪಕ್ಷಿಯಂತಿರುವವನೂ, ಗುಣಸಾಗರನೂ, ಭಕ್ತಜನರನ್ನು ಸಂರಕ್ಷಿಸುವವನೂ ಆದ ಸಚ್ಚಿದಾನಂದಸ್ವರೂಪನಾದ ಪರಮೇಶ್ವರನು ನಮಗೆ ಸೌಖ್ಯವನ್ನು ಕರುಣಿಸಲಿ. ವಚನ : ಮತ್ತೆ ಆ ಸಮಯದಲ್ಲಿ, ೨. ತಪಸ್ವಿಗಳ ಸಮೂಹವು ಅಲ್ಲಿಗೆ ಬಂದಿತು. ಅವರ ಜಟೆಗಳು ಕೆದರಿದ್ದವು. ಧರಿಸಿದ್ದ ಮೃಗಾಜಿನವು ಜಾರುತ್ತಿದ್ದಿತು. ಬೆವರಿನಿಂದ ಬಳಿದಿದ್ದ ವಿಭೂತಿಯು ಕದಡಿಹೋಗಿದ್ದಿತು. ಮುಖಗಳು ಬಾಡಿದ್ದವು. ಏದುಸುರಿನ ಬಿಸಿಗೆ ಅವರ ತುಟಿಗಳು ಬಾಡಿ ಕಾಂತಿಹೀನವಾಗಿದ್ದುವು. ಕಮಂಡಲವನ್ನು ಹಿಡಿದ ಕೈಗಳು ನಡುಗುತ್ತಿದ್ದುವು. ಕಂಠದಲ್ಲಿ ಧರಿಸಿದ್ದ ರುದ್ರಾಕ್ಷಿ ಮಾಲೆಯು ಅವರ ಎದೆಗಳಲ್ಲಿ ಸಿಕ್ಕುಸಿಕ್ಕಾಗಿ ಹೋಗಿದ್ದಿತು. ವಚನ : ಹೊಸ ತಪಸ್ವಿ ಯೊಬ್ಬನು ಆಚರಿಸುತ್ತಿದ್ದ ಘೋರ ತಪಸ್ಸಿನ ಉಗ್ರತೆಯನ್ನು ತಾಳಲಾರದೆ, ಇಂದ್ರ ಕೀಲಪರ್ವತಪ್ರಾಂತದ ತಪೋವನದ ತಪೋಧನರೆಲ್ಲರೂ ಭೀತರಾಗಿ, ವ್ಯಾಕುಲಚಿತ್ತರಾಗಿ,

---

೧ ನನೀತ (ಗ, ತ)

ತಳ್ವದೆಬ್ಬಿಂದು ಕೈಲಾಸದ ಮಣಿವಾಗಿಲೊಳ್ ⁽¹⁾ಶೈಲಾದಿಯಂ⁽¹⁾ ಕಂಡು ದಂಡಪ್ರಣಾಮಂಗೆಯ್ದು ಕರಾರವಿಂದಂಗಳಂ ಮುಗಿದು ನಿಂದು

ಉತ್ಪಲ ಇಂದುಧರಸ್ವರೂಪ ಭುವನತ್ರಯದೀಪ ಜಿತೇಕ್ಷುಚಾಪ ಸಾ
ನಂದರಸಾಂತರಂಗ ಸದಯಾಂಚದಪಾಂಗ ಶುಭಾನುಷಂಗ ಸಂ
ಕ್ರಂದನಮುಖ್ಯಸೇವ್ಯ ಸಕಲಾಗಮಭಾವ್ಯ ಸಮಸ್ತಭವ್ಯಸ
ನ್ನಂದನಚೈತ್ರದೇವ ಜಯ ದಿವ್ಯಕಲೇವರ ನಂದಿಕೇಶ್ವರಾ ೩

ವಚನ ಎಂದು ಭಕ್ತಿವಿ⁽³⁾ಗೆ ಪೊಗಟ್ಟು ನಿಜಾಗಮನಕಾರ್ಯಮಂ ವಿಜ್ಞಾಪನಂಗೆಯ್ದು ಮುನಿವರರನುಚಿತೋಕ್ತಿಯಿಂ ಮನ್ನಿಸಿ ⁽²⁾ಶೈಲಾದಿ ಸಭೆ⁽²⁾ಯಂ ಪೊಕ್ಕು ಸರ್ವೇಶ್ವರಂಗಱಿಪಿ ತದನುಜ್ಞೆಯಿಂ ತಾಪಸೇಂದ್ರರನೊಳಗಣ್ಗೆ ಪುಗಿಸಲೊಡನಾ ಸಭಾಂತರಾಳರತ್ನಜ್ಯೋತಿಯೆನಿಸಿ ರಮಣೀಯಮಾಗಿ ಸಾಲಂಕಾರಸಾರತರ ದಿವ್ಯಸಿಂಹಾಸನಾಸೀನನಾಗಿರ್ದುಮಾರಮಣನಂ ಕಂಡು ಮೆಯ್ವೆರ್ಚಿದ ಪರಮ ಸಾತ್ವಿಕ ಭಕ್ತಿಯಿಂ ಪಾದಾಟಿಬ್ಬದೊಳ್ ಮೆಯ್ಯಿಕ್ಕಿ ಮಣದೆಟ್ಟು ನಿಟಿಲತಟಘಟಿತಕರಸಂಪುಟರಾಗಿ ಸಾಲ್ಗೊಂಡು ಸಮುಚಿತಸ್ಥಾನದೊಳ್ ಸಂಚಣಿಸಿ ನಿಂದು

-

ವಿಶೇಷವಾಗಿ ಉದ್ವಿಗ್ನರಾದರು. (ಈ ವಿಷಯವನ್ನು) ತ್ರಿಣೇತ್ರನಾದ ಶಿವನಿಗೆ ಬಿನ್ನವಿಸಿಕೊಳ್ಳಲು ಮನಸ್ಸಿನಲ್ಲಿ ನಿಶ್ಚಯಿಸಿ, ತ್ವರೆಯಿಂದ ಬಂದು ಕೈಲಾಸದ ರತ್ನದ್ವಾರದ ಸಮೀಪದಲ್ಲಿ ನಂದಿಯನ್ನು ಕಂಡು, ಅಡ್ಡಬಿದ್ದು ನಮಸ್ಕರಿಸಿ, ಕೈಜೋಡಿಸಿಕೊಂಡು ನಿಂತು, ೩, "ಚಂದ್ರಶೇಖರನ ಸಾರೂಪ್ಯವನ್ನು ಪಡೆದವನೆ, ತ್ರಿಜಗಜ್ಯೋತಿಸ್ವರೂಪನೆ, ಕಾಮಹರನೆ, ಆನಂದರಸದಿಂದ ತುಂಬಿರುವ ಅಂತರಂಗವುಳ್ಳವನೆ, ಕರುಣಾಪೂರ್ಣ ಕಟಾಕ್ಷವುಳ್ಳವನೆ, ಕಲ್ಯಾಣಕರನೆ, ಇಂದ್ರಾದಿಗಳಿಂದ ಸೇವ್ಯನಾದವನೆ, ಸಕಲ ಶಿವಾಗಮಗಳಿಂದ ಕೀರ್ತಿತನಾದವನೆ, ಸಕಲ ಕಲ್ಯಾಣಗಳೆಂಬ ನಂದನವನಕ್ಕೆ ಮಧುಮಾಸದಂತಿರುವವನೆ, ತೇಜೋಮೂರ್ತಿಯೆ, ಅಪ್ರಾಕೃತ ದಿವ್ಯವಿಗ್ರಹನೆ, ನಂದಿಕೇಶ್ವರನೆ (ನಿನಗೆ) ಜಯವಾಗಲಿ."
ವಚನ : ಎಂದು ಭಕ್ತಿಭರದಿಂದ ಸ್ತುತಿಸಿ, ತಾವು ಬಂದ ಕಾರ್ಯವನ್ನು ವಿಜ್ಞಾಪಿಸಿದರು. ಆ ಮುನಿಶ್ರೇಷ್ಠರನ್ನು ತಕ್ಕ ಮಾತುಗಳಿಂದ ಪುರಸ್ಕರಿಸಿ, ನಂದಿಯು ಶಿವಸಭೆಯನ್ನು ಪ್ರವೇಶಿಸಿ, ಪರಮೇಶ್ವರನಿಗೆ ತಿಳಿಸಿ, ಅವನಪ್ಪಣೆಯಾದಂತೆ ತಾಪಸೋತ್ತಮರನ್ನು ಒಳಗಡೆಗೆ ಹೋಗಲು ಅನುವುಮಾಡಿದನು. (ಪ್ರವೇಶಿಸಿದ ಕೂಡಲೆ ತಾಪಸರು) ಸಭೆಯ ನಡುವೆ ರತ್ನಜ್ಯೋತಿಯಂತೆ ರಮಣೀಯವಾಗಿ ಅಲಂಕೃತವಾಗಿದ್ದ ಭದ್ರಮಯವಾದ ದಿವ್ಯ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದ ಪಾರ್ವತೀಪತಿಯನ್ನು ಕಂಡು, ಉಕ್ಕೇರುತ್ತಿದ್ದ ಶುದ್ಧಸಾತ್ವಿಕ ಭಕ್ತಿಯಿಂದ ಪಾದಕಮಲಗಳಿಗೆ ದೀರ್ಘದಂಡ ಪ್ರಣಾಮಮಾಡಿ, ಎದ್ದು ನಿಂತು ಹಣೆಯ ಬಳಿ ಕೈಜೋಡಿಸಿಕೊಂಡು, ತಕ್ಕ ಸ್ಥಳದಲ್ಲಿ ಸಾಲಾಗಿ ಗುಂಪುಗೂಡಿ

---

೧-೧ ಶೈಲಾದಿಪತಿಯಂ (ಜ) ೨-೨ ಕೈಲಾಸಸಭೆ (ಜ) ೩ ಪದಾ (ಚ, ಯ)

ಚಂಪಕ ಜಯಜಯ ಜಾಹ್ನವೀಧರ ಜನಾರ್ದನಪೂಜ್ಯ ಕಪರ್ದಿ ಕರ್ಮಸಂ
ಚಯಜಲದಪ್ರಭಂಜನ ನಿರಂಜನ ನಿರ್ಮದ ಭಕ್ತಹೃತ್ಕುಶೇ
ಶಯತರುಣಾರ್ಕ ತಂತ್ರನಿಗಮಸ್ತುತ ನಿರ್ಜಿತಕಾಲ ಭೂಧರಾ
ಶ್ರಯ ಭುಜಗೇಂದ್ರಹಾರ ಭುವನೇಶ್ವರ ಬಾಲಶಶಾಂಕಶೇಖರಾ ೪

ಉತ್ಪಲ ಅಂಬರಕೇಶ ಶಂಬರವಿಪಕ್ಷಮದಾಂಬುಜಕುಂಭಿಜೃಂಭಿತಾ
ಶಾಂಬರ ಕಂಬುಶಂಬರುಚಿಡಂಬರವಿಗ್ರಹ ವೀತದಂಭ ಹೇ
ರಂಭಕಲಾಪಿವಾಹಪಿತ ತುಂಬುರಕಂಬಲಗಾನಲೋಲ ರೋ
ಲಂಬನಿಸಿತಾಂಬುದನಿಪ್ರಭ ಗರಾಂಕಿತಕಂಧರ ಶಾಂಭವೀಧವಾ ೫

ಚಂಪಕ *ಮನುಮುನಿವಂದ್ಯ ಮಾನ್ಯ ಮಿಹಿರಪ್ರಭ ಮೀನಪದಾಹಿರಿಮುಕ್ತಿಭಾ
ಮಿನಿಯ ಮನೋಜ್ಞಮೂರ್ತಿ ಮೃಡ ಮೇರುಮಹೀಧರವಾಸ ಮೈಮೆವೆ
ತ್ತನುಪಮ ಮೋಹಶೈಲಪವಿ ಮೌನಿಸಮರ್ಚಿತ ಮಂಗಳಾಂಗ ಮ
ಸ್ತನಿಹಿತಚಂದ್ರ ಸದ್ಗುಣತವೈಭವ ರಕ್ಷಿಪುದದ್ರಿಜಾಧವಾ ೬

ನಿಂತು ಹೀಗೆ ಸ್ತುತಿಸಿದರು. ೪. "ಗಂಗಾಧರನೆ, ವಿಷ್ಣುಪೂಜಿತನೆ, ಜಟಾಜೂಟನೆ, ಕರ್ಮರಾಶಿಯೆಂಬ ಮೇಘಮಾಲೆಗೆ ಬಿರುಗಾಳಿಯಂತಿರುವವನೆ, ನಿರ್ಲಿಪ್ತನೆ, ಮದರಹಿತನೆ, ಭಕ್ತರ ಹೃದಯಕಮಲಗಳಿಗೆ ಬಾಲಸೂರ್ಯನಂತಿರುವವನೆ, ನಿಗಮಾಗಮ ಸಂಸ್ತುತ್ಯನೆ, ಕಾಲಕಾಲನೆ, (ಲೋಕಗಳಿಗೆ ಆಧಾರವಾಗಿರುವ) ಮೇರುಪರ್ವತಕ್ಕೆ ಆಧಾರವಾಗಿರುವವನೆ, ಸರ್ಪಭೂಷಣನೆ, ಜಗದೀಶ್ವರನೆ, ಬಾಲಶಶಾಂಕಮೌಳಿಯೇ ಜಯಜಯ. ೫. ವ್ಯೋಮಕೇಶ, ಮನ್ಮಥನ ಗರ್ವವೆಂಬ ತಾವರೆಗೆ ಆನೆಯ ಉನ್ಮತ್ತತೆಯಂತಿರುವವನೆ,[1] ದಿಗ್ವಸನನೆ, ಶಂಖ, ವಜ್ರಗಳ ಕಾಂತಿಯಂತೆ ಬೆಳಗುತ್ತಿರುವ ಶರೀರವುಳ್ಳವನೆ, ನಿಗರ್ವಿಯೆ, ಗಣಪತಿ, ಷಣ್ಮುಖರ ತಂದೆಯೆ, ತುಂಬುರರು ಮತ್ತು ಕಂಬಲನೆಂಬ ನಾಗನ ಗಾನದಲ್ಲಿ ಆಸಕ್ತನಾಗಿರುವವನೆ, ಭ್ರಮರಗಳಂತೆಯೂ, ನೀಲಮೇಘಗಳಂತೆಯೂ ಕಾಂತಿಯುಳ್ಳವನೆ, ವಿಷದ ಗುರುತುಳ್ಳ ಕಂಠವುಳ್ಳವನೆ, ಪಾರ್ವತೀಪತಿಯೆ ಜಯಜಯ, ೬. ಮನುಗಳಿಂದಲೂ, ಮುನಿಗಳಿಂದಲೂ ವಂದಿತನಾದವನೆ, ಮಾನ್ಯನೆ, ಸೂರ್ಯಪ್ರಕಾಶನೆ, ಮೀನಕೇತನನಾದ ಮನ್ಮಥನ ಶತ್ರುವೆ, ಮುಕ್ತಿವನಿತೆಯ ಮನೋಹರನಾದ ಸುಂದರಾಕಾರನೇ, ಸುಖಸ್ವರೂಪನೆ, ಹೇಮಾದ್ರಿವಾಸನೆ, ಮಹಿಮಾನ್ವಿತನೆ, ಅನುಪಮನೆ, ಮಾಯಾಶಕ್ತಿಯೆಂಬ ಪರ್ವತಕ್ಕೆ ವಜ್ರಪ್ರಾಯನಾಗಿರುವವನೆ, ಮುನಿಜನರಿಂದ ಆರಾಧ್ಯನಾದ ಕಲ್ಯಾಣಸ್ವರೂಪನೆ, ಚಂದ್ರನನ್ನು ಮಸ್ತಕದಲ್ಲಿ ಧರಿಸಿರುವವನೆ, ಸದ್ಗುಣಸಮನ್ವಿತ

---

೧ ಶಂಭುಶಂಖ (ಯ) ೨-೨ ನಿಭಾಂಬರ (ಯ) ; ನಿಭಾಂಬುದ (ರ, ಸ) ೩ ರಥಾ (ರ)

1. ಶಂಬರವಿಪಕ್ಷ-ಶಂಬರಾಸುರನಿಗೆ ಶತ್ರು= ಮನ್ಮಥ, ಕಲಾಪಿವಾಹ-ನವಿಲನ್ನುವಾಹನವಾಗುಳ್ಳವನು-ಷಣ್ಮುಖ.

* ಕೆಲವು ಪ್ರತಿಗಳಲ್ಲಿ ಈ ಪದ್ಯದ ಆರಂಭಕ್ಕೆ "ಗುಣಿತಾಕ್ಷರ" ಎಂಬ ಸೂಚನೆ ಇದೆ.

ಮತ್ತೇಭ ಸನಕಾದ್ಯರ್ಕಳ ಮಾನಸಾಂಬುಜವರಾಳಂ ನೀನೆ ವೇದಾಂತನಂ
ದನಕೇಳೀರಸಲೋಲ ದಿವ್ಯಶುಕರಾಜಂ ನೀನೆ ನಾದಾಂತಕಾಂ
ಚನಹರ್ಮ್ಯಾಂತರಭಾಸಮಾನಮಣಿದೀಪಂ ನೀನೆ ಶೈವಾಗಮೌ
ಘ ನಭೋಮಧ್ಯಮನೋಜ್ಞಬಾಲಮಿಹಿರಂ ನೀನೆ ಭವಾನೀಧವಾ ೭

ಮಹಾಸ್ರಗ್ಧರೆ ಕುಡಿಮಿಂಚಂ ತಳ್ತು ನಿರ್ಘೋಷಣಮೆಸೆವ ಮಹಾಪುಷ್ಕಳಾವರ್ತಕಂ ನೋ
ಟ್ಪೊಡಿದೆಂಬಂತುಗ್ರದಂಷ್ಟ್ರಂ ಪೊಳೆಯೆ ಪಟುತರಧ್ವಾನದಿಂ ಗರ್ಜಿಸುತ್ತಾ
ರ್ಪಿಡಿದುದ್ಯತ್ಪಾಶದಿಂ ನೀಳ್ದಳಱೆ ಸೆಳೆದ ಭೀಮಾಂಗಭೃನ್ಮೃತ್ಯುವಂ ನಿ
ನ್ನಡಿಯಿಂದಾರ್ದಿಕ್ಕಿ ತತ್ಪ್ರಾಪಸಶಿಶುವನೊಱಲ್ದೊವಿದಯ್ ರಾಜಮೌಳೀ ೮

ಮಿಗೆ ಮೂಲೋಕಂಗಳಂ ಗೆಲ್ದಧಿಕಮದದೆ ಪಂಚಾಸ್ತ್ರಮಂ ತೊಟ್ಟು ಕಟ್ಟು
ಜ್ಜುಗದಿಂ ಕಂದರ್ಪನಾರ್ಪಿಂ ಕುಟಿಲಕುಸುಮಕೋದಂಡದೊಳ್ ಸಾರ್ಚಿಮಂದೈ
ಮೊಗ ನಿನ್ನಂ ಮಾಣದೆಚ್ಚಂದರೆದೆಱೆದುರಿಗಣ್ಣಿಂ ಕರಂ ಪೊಣ್ಮೆ ನೀಳ್ದಾ
ಶುಗಮಿತ್ರಂ ಚುರ್ಚಿದಯ್ ದಲ್ ನೆಱೆ ಕರಿಮುರಿವೋಪನ್ನಮದ್ರೀಂದ್ರಚಾಪಾ ೯

ವಾದ ವೈಭವವುಳ್ಳವನೆ, ಗಿರಿಜಾರಮಣನೆ ಕಾಪಾಡು. ೭. ಸನಕಾದಿ ಋಷಿಗಳ ಮನಸ್ಸೆಂಬ ಕಮಲವನದಲ್ಲಿ ವಿಹರಿಸುವ ಹಂಸವು ನೀನೆ, ಉಪನಿಷತ್ತುಗಳೆಂಬ ನಂದನವನ ದಲ್ಲಿ ವಿಹರಿಸುವುದರಲ್ಲಿ ಆಸಕ್ತವಾದ ದೇವಲೋಕದ ಅರಗಿಳಿಯು ನೀನೆ, ದಶವಿಧವಾದ ನಾದಗಳ ಲಯಸ್ಥಾನವೆಂಬ ಸುವರ್ಣದ ಉಪ್ಪರಿಗೆಯ ನಡುವೆ ಬೆಳಗುತ್ತಿರುವ ರತ್ನ ದೀಪವೂ ನೀನೆ, ಶಿವಾಗಮಗಳ ಸಮೂಹವೆಂಬ ಆಕಾಶದ ಮಧ್ಯದಲ್ಲಿ ಮನೋಹರವಾಗಿ ಪ್ರಕಾಶಿಸುವ ಸೂರ್ಯನೂ ಎಲೈ ಭವಾನೀಪತಿಯೆ ನೀನೆ ಆಗಿರುವೆ. ೮. ಎಲೈ ಚಂದ್ರ ಮೌಳಿಯೆ, ಸಣ್ಣ ಮಿಂಚುಗಳಿಂದ ತುಂಬಿ, ಗುಡುಗುತ್ತಿರುವ ಮಹಾಪುಷ್ಕಳ ಮತ್ತು ಆವ ರ್ತಕಗಳೆಂಬ ಪ್ರಳಯಮೇಘದಂತೆ ಕ್ರೂರವಾದ ಕೋರೆಹಲ್ಲುಗಳು ಹೊಳೆಯುತ್ತಿರಲು, ಪ್ರಚಂಡಧ್ವನಿಯಿಂದ ಗರ್ಜಿಸುತ್ತಾ, ನೀಳವಾದ ಮೃತ್ಯುಪಾಶವನ್ನು ಕೈಯಲ್ಲಿ ಹಿಡಿದು, ಭಯಂಕರಾಕಾರನಾದ ಯಮನು, ಮಾರ್ಕಂಡೇಯನು ರೋದಿಸುತ್ತಿರಲು, ಅವನ ಪ್ರಾಣ ಗಳನ್ನು ಸೆಳೆಯಲುದ್ಯುಕ್ತನಾದನು. ಆಗ ನೀನು ಯಮನನ್ನು ಕಾಲಿನಿಂದ ಒದೆದು, ಪರಾಭವಿಸಿ, ಆ ಮುನಿಕುಮಾರನಿಗೆ ಅಭಯವನ್ನಿತ್ತು ರಕ್ಷಿಸಿದೆ. ೯. ತ್ರಿಲೋಕವಿಜಯಿ ಯೆಂಬ ಉನ್ಮತ್ತತೆಯಿಂದ ಮನ್ಮಥನು ತನ್ನ ಬಾಗಿದ ಬಿಲ್ಲಿಗೆ ಐದೂ ಪುಷ್ಪಬಾಣಗಳನ್ನು ಹೂಡಿ, ಮಹಾದರ್ಪದಿಂದ ನಿನ್ನನ್ನು ಸಮೀಪಿಸಿ, ತನ್ನ ಶಕ್ತಿಯೆಲ್ಲವನ್ನೂ ಕೂಡಿ ಕೊಂಡು ಬಾಣಪ್ರಯೋಗ ಮಾಡಿದನು. ಮೇರುಪರ್ವತವನ್ನೇ ಧನುವಾಗುಳ್ಳ ನೀನು ನಿನ್ನ ಉರಿಗಣ್ಣನ್ನು ಅರ್ಧಮಾತ್ರ ತೆರೆಯುವಷ್ಟರಲ್ಲಿಯೇ ಸಿಡಿದ ದಳ್ಳುರಿಯ ಜ್ವಾಲೆಗೆ

೧ ವನ (ರ, ಸ) ೨ ಚ್ಚಿಗ (ರ, ಸ)

ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂ
ದೆ ರಮೇಶಂ ಕುರ್ಗೆ ಧಾತ್ರಂ ಪೆಳಱೆ ದಿನಕರಂ ಹಮ್ಮುದಂಬೋಗೆ ಸರ್ವಾ
ಮರರೆತ್ತಂ ಭೀತಿಯಿಂದಂ ಪಡಲಿಡೆ ಜಗಮಂ ನುಂಗಲೆಟ್ಟಿರ್ಪ ರೌದ್ರಾ
ಕರಕಾಲಕ್ಷ್ವೇಳಮಂ ನೀ ತಳೆದು ಸಲುಪಿದಯ್ ವಿಶ್ವಮಂ ವಿಶ್ವನಾಥಾ ೧೦

ಚರಣನ್ಯಾಸಕ್ಕೆ ಕೂರ್ಮಂ ಕುಸಿಯೆ ಫಣಿಫಣಾಮಂಡಲಂ ಬಳ್ಕೆ ಬಾಹಾ
ಪರಿಘೌಘಭ್ರಾಂತಿಯಿಂ ತಿರ್ರನೆ ತಿರುಗೆ ಮಹಾಪುಷ್ಕಲಾವರ್ತಕಂ ಭಾ
ಸ್ಕರಚಂದ್ರಾದಿಗ್ರಹವ್ರಾತಮುಮರುಣಜಟಾಘಾತದಿಂ ಸೂಸೆ ತಾರೋ
ತ್ಕರಮೆತ್ತಂ ಮೆಟ್ಟಿಯಂಧಾಸುರನನೆಸಗಿದಯ್ ನೃತ್ಯಮಂ ಮೃತ್ಯುವೈರೀ ೧೧

ರವಿಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳವಾತಶ್ವಮುರ್ವೀತಳಂ ಭೂ
ರಿವರೂಥಂ ಮೇರು ಚಾಪಂ ಪೆದೆ ಫಣಿಪತಿ ಬಾಣಂ ಮುಕುಂದಂ ಸಮಂತಾ
ಗೆ ವಿಶೇಷಾಟೋಪದಿಂ ಮುಪ್ಪೊಟಿಲನುರಿಪಿ ದೇವಾಂಗನಾಬಂಧನಂ ಪಿಂ
ಗುವಿನಂ ನೀ ರಕ್ಷಣಂಗೆಯ್ಯದೊಡುಱಿವರೆ ದೇವರ್ಕಳರ್ಧೇಂದುಚೂಡಾ ೧೨

ಆಹುತಿಯಾಗಿ ಕಾಮನು ಪೂರ್ಣವಾಗಿ ಸುಟ್ಟು ಕರಿಕರಿಯಾಗಿ ಹೋದನಲ್ಲವೇ ? ೧೦. ಜಗತ್ತನ್ನು ನುಂಗುವಂತೆ ಮಹಾಭಯಂಕರವಾಗಿ ವಿಷವುದಿಸಿ ಬರಲು, ಅದನ್ನು ಕಂಡು ಕುಬೇರನು ನಡುಗಿದನು ; ಇಂದ್ರನು ಹೆದರಿ ಹಿಂಜರಿದನು ; ಅಗ್ನಿಯು ಕಂದಿದನು ; ಯಮನು ಕುಂದಿದನು ; ವಿಷ್ಣುವು ಅಡಗಿದನು ; ಬ್ರಹ್ಮನು ಭಯದಿಂದ ಅರಚಿದನು ; ಸೂರ್ಯನು ಶಕ್ತಿಯುಡುಗಿ ನಿಸ್ತೇಜನಾದನು ; ಸಕಲ ದೇವತೆಗಳೂ ಹೆದರಿ ಓಡಿದರು. ಆದರೆ, ವಿಶ್ವನಾಥಾ, ನೀನು ಮಾತ್ರ ಆ ವಿಷವನ್ನು ಧರಿಸಿ ವಿಶ್ವವನ್ನು ರಕ್ಷಿಸಿದೆ. ೧೧. ಅಂಧಕಾಸುರನನ್ನು ಮೆಟ್ಟಿ, ಕೆಡವಿ, ಅವನೆದೆಯ ಮೇಲೆ ಕಾಲಕಾಲನಾದ ನೀನು ನೃತ್ಯ ಮಾಡಲುದ್ಯುಕ್ತನಾದೆ. ಆಗ ನಿನ್ನ ಪದಾಘಾತಕ್ಕೆ ಕೂರ್ಮನು ಕುಸಿದ ; ಆದಿಶೇಷನ ಹೆಡೆ ಗಳು ನಡುಗಿದುವು ; ಪರಿಘಾಯುಧದಂತೆ ಧೀರ್ಘವಾದ ಬಾಹುಗಳ ಭ್ರಮಣದಿಂದ ಮೇಘಮಂಡಲಗಳೂ, ಸೂರ್ಯಚಂದ್ರಾದಿ ಗ್ರಹಗಳ ಸಮೂಹವೂ ಗರಗರನೆ ತಿರುಗಿ ದುವು ; ನಿನ್ನ ಕೆಂಜಡೆಗಳು ಅಪ್ಪಳಿಸುವುದರಿಂದ ನಕ್ಷತ್ರರಾಶಿಗಳೆಲ್ಲವೂ ಎಲ್ಲೆಲ್ಲೂ ಉದುರಿ ಬೀಳುತ್ತಿದ್ದುವು. ೧೨. ತ್ರಿಪುರಾಸುರನನ್ನು ನೀನು ಸುಟ್ಟಾಗ, ಎಲೈ ಚಂದ್ರಶೇಖರನೇ, ಸೂರ್ಯ-ಚಂದ್ರರೇ ನಿನ್ನ ರಥಕ್ಕೆ ಚಕ್ರಗಳಾದರು : ಬ್ರಹ್ಮ ಸಾರಥಿಯಾದ ; ವೇದಗಳೇ ಅಶ್ವಗಳಾದುವು ; ಭೂಮಿಯೇ ದೊಡ್ಡ ರಥವಾಯಿತು ; ಮೇರುಪರ್ವತವು ಬಿಲ್ಲಾ ಯಿತು ; ವಾಸುಕಿಯೇ ಬಿಲ್ಲಿನ ಹೆದೆಯಾದ ; ನಾರಾಯಣನೇ ಬಾಣವಾದ ; ಆ ರೀತಿ ಯಲ್ಲಿ ನೀನು ದೇವಸ್ತ್ರೀಯರ ಬಂಧನವನ್ನು ಬಿಡಿಸಿ ನೀನು ಕಾಪಾಡದಿದ್ದರೆ, ದೇವತೆಗಳು

---

೧ ಪಡವಿಡೆ (ರ, ಸ)

ವಿಳಗಿಯಾಂಭೋರಾಶಿಯಂ ಧಿಕ್ಕರಿಸಿ ಘುಳುಘುಳುಧ್ವಾನದಿಂ ಪರ್ಬಿ ಧಾತ್ರೀ
ತಳಮೆತ್ತಾಕಾಶಮೆತ್ತೆಣ್ದೆಸೆಯು ಪಸರಮೆತ್ತೆಂಬವೊಲ್ ತುಂಗಭಂಗಾ ೨
ವಳಿಯಿಂ ಧೀಂಕಿಟ್ಟುಮೂಲೋಕಮನಳುರ್ವ ಮಹಾಗಂಗೆಯಂ ಮೂರ್ಧದೊಳ್ ಮಂ
ಜುಳಪುಷ್ಪಂದಾಳ್ದವೊಲ್ ತಾಳ್ದಿರದೆ ಪೊರೆದೆ ಸರ್ಪೋರ್ವಿಯಂ ಪಾರ್ವತೀಶಾ ೧೩

ಚಂಪಕ ದಿವಿಜರನೊಕ್ಕಲಿಕ್ಕಿ ಸುರಕಾಂತೆಯರಂ ಸೆಱೆಗೆಯ್ದು ಸೊರ್ಕಿ ಸಾ
ರ್ಕೆವರೆ ಜಲಂಧರಂ ಗೆಲಲೊಡರ್ಚೆ ಜವಂ ಮಿಗೆ ಚಕ್ರಮೊಂದನ
ರ್ಣವದೊಳೆ ಪಾದದಿಂ ನೆಗಟ್ದಿ ಮೇಣವಱಿಂ ಕೊಱೆದಾಂತೆ ತದ್ದನೂ
ದ್ಭವನ ಶಿರೋಬ್ಜಮಂ ಪೊಗೞೆ ಶೌರಿಮುಖಾಮರರಿಂದುಶೇಖರಾ ೧೪

ಮಹಾಸ್ರಗ್ಧರೆ ಬಳವದ್ದೋರ್ದಂಡದರ್ಪಂ ನಿಮಿರೆ ದಶಮುಖಂ ಮೌರ್ಖ್ಯದಿಂ ನೈಜಗೇಹಾ
ಚಳಮಂ ಪೊತ್ತೆತ್ತೆ ಕಾಣುತ್ತಲಸಚಲಪದಾಂಗುಷ್ಠದಿಂದೊತ್ತೆ ನೀಂ ಬಾ
ಯ್ಗಳೊಳೆತ್ತಂಷಿಸೂಸೆ ನೆತ್ತರ್ ತಿರುಗೆ ನಯನಮಾ ರಕ್ಕಸಂ ಕಕ್ಕಸಂಬೆ
ತ್ತೊಳಱುತ್ತುಂ ಬಿಟ್ದಿ ಪಾತಾಳದೊಳೆ ಮಿಡುಕನೇ ಪೇೞ್ ತ್ರಿಶೂಲಾಂಕಪಾಣೀ ೧೫

ಉಳಿಯುತ್ತಿದ್ದರೆ ? ೧೩. ಪ್ರಳಯಕಾಲದ ಸಾಗರವನ್ನೂ ತಿರಸ್ಕರಿಸುವಂತೆ ಆರ್ಭ ಟಿಸುತ್ತಾ, ಘುಳುಘುಳು ಶಬ್ದದಿಂದ ಆವರಿಸುತ್ತಾ, ಭೂಮಿಯೆಲ್ಲಿ ? ಆಕಾಶವೆಲ್ಲಿ ? ಎಂಟು ದಿಕ್ಕುಗಳೆಲ್ಲಿ ? ಎಂಬುವುದೇ ತಿಳಿಯದಂತೆ ಎತ್ತರವಾದ ಅಲೆಗಳಿಂದ ಕೂಡಿದ ಮೂರು ಲೋಕಗಳನ್ನೂ ನುಂಗುವಂತೆ ಗಂಗೆಯು ಧುಮ್ಮಿಕ್ಕಲು, ಅದನ್ನು ಪುಷ್ಪದಂತೆ ಜಟೆಯಲ್ಲಿ ಮುಡಿದು, ಪಾರ್ವತೀರಮಣನೇ, ನೀನು ಸಕಲ ಲೋಕಗಳನ್ನೂ ಸಂರಕ್ಷಿಸಿದೆ. ೧೪. ದೇವತೆಗಳನ್ನು ಸೋಲಿಸಿ, ದೇವಸ್ತ್ರೀಯರನ್ನು ಸೆರೆಹಿಡಿದು, ದರ್ಪದಿಂದ ಜಲಂ ಧರನು ಗೆಲ್ಲಬೇಕೆಂದು ನಿನ್ನನ್ನು ಸಮೀಪಸಲು ನೀನು ಶೀಘ್ರವಾಗಿ ಸಮುದ್ರವನ್ನು ಹೊಕ್ಕು, ಪಾದದಿಂದ ಚಕ್ರಾಸ್ತ್ರವನ್ನು ಬರೆದು, ಆ ಚಕ್ರದಿಂದ ಜಲಂಧರನನ್ನು ಸಂಹ ರಿಸಿದೆ. ವಿಷ್ಣು ಮುಖ್ಯರಾದ ದೇವತೆಗಳು ಸ್ತುತಿಸುತ್ತಿರಲು, ಆ ದಾನವನ ತಲೆಯೆಂಬ ಕಮಲವನ್ನು ಇಂದುಶೇಖರನಾದ ನೀನು ರುಂಡಮಾಲೆಯಲ್ಲಿ ಧರಿಸಿದೆ. ೧೫. ತನ್ನ ಬಾಹುಪರಾಕ್ರಮದಿಂದ ಗರ್ವಿಸಿ ರಾವಣನು ಅವಿವೇಕದಿಂದ ಕೈಲಾಸಪರ್ವತವನ್ನು ಹೊತ್ತು ಮೇಲೆತ್ತಲು, ಅದನ್ನು ಕಂಡು, ತ್ರಿಶೂಲಪಾಣಿಯಾದ ನೀನು ಪಾದಾಂಗುಷ್ಠ ವನ್ನು ಮೆಲ್ಲನೆ ಒತ್ತಿದೆ. ಅಷ್ಟು ಮಾತ್ರದಿಂದಲೆ ರಾವಣನ ಬಾಯ್ಗಳಿಂದ ರಕ್ತ ಕಾರಿತು. ಕಣ್ಣುಗಳು ತಿರುಗಿದುವು. ರಾಕ್ಷಸನಾದ ಅವನು ದುಸ್ಥಿತಿಗೆ ಸಿಕ್ಕಿ ಪಾತಾಳಕ್ಕಿಳಿದು

---

೧ ಪ್ರಳ (ಜ) ೨ ತಂ (ರ, ಸ) ೩ಳಿತ್ತಲ್ (ಚ)

ಹರಿಗಿತ್ತಯ್ ಚಕ್ರಮಂ ವಾಕ್ಪತಿಗೆ ನಿಗಮಸದ್ವಿದ್ಯೆಯಂ ದಿವ್ಯಭೋಗೋ
ತ್ಕರಮಂ ಗೋತ್ರಾಹಿತಂಗತ್ಯಧಿಕರುಚಿಯನರ್ಕಂಗೆ ಪೀಯೂಷಭಾಸ್ವತ್
ಕರಮಂ ಚಂದ್ರಂಗೆ ಚಂಚನ್ನಿಧಿಯನುರುಕುಬೇರಂಗೆ ಸಂಜೀವನಶ್ರೀ
ವರಮಂ ಕಾವ್ಯಂಗೆ ವಾಚಸ್ಪತಿಗೆ ಸುಮತಿಯಂ ಕೂರ್ಮೆಯಿಂ ನೀಲಕಂಠಾ ೧೬

ಜಗಮೆಲ್ಲಂ ನಿನ್ನ ಕಣ್ಸನ್ನೆಯೊಳೆ ಜನಿಯಿಕುಂ ಬಾಳ್ಗುಮಳ್ಕಾಡುಗುಂ ಸ
ಗ್ಗಿಗರೆಲ್ಲರ್ ನಿನ್ನ ಪಾದಾಂಬುಜದ ಭಜನದಿಂ ಸಂಪದಂದಾಳ್ವರರ್ಕೇಂ]
ದುಗಳೆಂದುಂ ನಿನ್ನ ತೇಜೋಬಲದೆ ಬೆಳಗುವರ್ ಲೋಕಮಂ ಮಾಯೆ ನಿನ್ನಾ
ಜ್ಞೆಗೆ ಸಂದೆಲ್ಲಾ[೧]ಗಳುಂ ವರ್ತಿಪಳೆನೆ ನಿನಗಾರ್ ಸಾಟಿ ಪೇಟ್ ಭಾಳ[೨]ನೇತ್ರಾ ೧೭

ಅನವದ್ಯಂ ನಿರ್ವಿಕಾರಂ ನಿರುಪಮಮಹಿಮಂ ನಿತ್ಯನಾದ್ಯಂತಶೂನ್ಯಂ
ಘನತೇಜೋರಾಶಿಪೂರ್ಣಂ ಪ್ರಣವಪರಿಗತಂ ಸಚ್ಚಿದಾನಂದರೂಪಂ
ವಿನುತಾಜಾಂಡಾದಿಬೀಜಂ ಶ್ರುತಿಚಯಚಕಿತಸ್ತುತ್ಯನೇಕಂ ಪರಂ ಪಾ
ವನಶೀಲಂ ನೀನೆ ದಲ್ ನಿನ್ನಿರವನಱಿವರಾರ್ ವಿಶ್ವದೊಳ್ ಭೋಗಿಭೂಷಾ ೧೮

ಒದ್ದಾಡುತ್ತಿರಲಿಲ್ಲವೇ ? ೧೬. ವಿಷ್ಣುವಿಗೆ ಚಕ್ರವನ್ನೂ, ಬ್ರಹ್ಮನಿಗೆ ವೇದಗಳನ್ನೂ, ದಿವ್ಯವಾದ ಸುಖ, ಸಂಪತ್ತುಗಳನ್ನು ಇಂದ್ರನಿಗೂ, ಮಹಾತೇಜಸ್ಸನ್ನು ಸೂರ್ಯನಿಗೂ, ಅಮೃತಮಯ ಕಿರಣಗಳನ್ನು ಚಂದ್ರನಿಗೂ, ಅಪಾರ ಧನರಾಶಿಯನ್ನು ಕುಬೇರನಿಗೂ, ಸಂಜೀವಿನೀವಿದ್ಯೆಯನ್ನು ಶುಕ್ರಾಚಾರ್ಯರಿಗೂ, ಉತ್ತಮಜ್ಞಾನವನ್ನು ಬೃಹಸ್ಪತಿಗೂ ಪ್ರೀತಿಯಿಂದ ಅನುಗ್ರಹಿಸಿದವನು ನೀಲಕಂಠನಾದ ನೀನೇ. ೧೭. ಜಗತ್ತೆಲ್ಲವೂ ನಿನ್ನ ಕಣ್ಸನ್ನೆಯಲ್ಲಿ ಹುಟ್ಟುವುವು, ಬಾಳುವುವು ಮತ್ತು ಲಯವಾಗುವುವು. ದೇವತೆಗಳೆಲ್ಲರೂ ನಿನ್ನ ಪಾದಕಮಲಗಳನ್ನು ಭಜಿಸಿ, ಸಂಪತ್ತನ್ನು ಪಡೆದರು. ಸೂರ್ಯ ಚಂದ್ರರು ಸದಾ ಕಾಲವೂ ನಿನ್ನ ತೇಜಸ್ಸಿನ ಬಲದಿಂದಲೇ ಲೋಕವನ್ನು ಬೆಳಗುವರು. ಫಾಲನಯನನೇ, ನಿನ್ನಾಜ್ಞಾನುವರ್ತಿಯಾಗಿ ಮಾಯೆಯು ಯಾವಾಗಲೂ ವರ್ತಿಸುವಳು ಎನ್ನುವಾಗ, ನಿನಗೆ ಸಮಾನರಾರಿರುವರು ? ೧೮. ಸರ್ಪಭೂಷಣನೇ, ನೀನು ದೋಷರಹಿತನು ; ನಿರ್ವಿಕಾರನು ; ಹೋಲಿಸಲಳವಲ್ಲದ ಮಾಹಾತ್ಮ್ಯವುಳ್ಳವನು ; ಶಾಶ್ವತನು ; ಆದ್ಯಂತ ರಹಿತನು; ಪ್ರಕಾಶಸ್ವರೂಪನು ; ಸಕಲವ್ಯಾಪಕನು ; ಓಂಕಾರದಿಂದ ನಿರ್ದಿಷ್ಟನಾದವನು ; ಸಚ್ಚಿದಾನಂದಸ್ವರೂಪನು ; ಸಮಸ್ತ ಬ್ರಹ್ಮಾಂಡಗಳಿಗೂ ಕಾರಣನು; ಸ್ತುತಿಸುವ ವೇದ ರಾಶಿಗಳಿಗೆ ವಿಸ್ಮಯಕರನು ; ಏಕಮಾತ್ರನು ; ಪರಮೋತ್ಕೃಷ್ಟನು; ಪಾವನಕರವಾದ ಸ್ವಭಾವವುಳ್ಳವನು ನೀನೇ ಅಲ್ಲವೆ? ನಿನ್ನ ಸಹಜಸ್ವರೂಪವನ್ನು ಯಾರು ತಾನೇ ಬಲ್ಲರು ?

---

೧ ದಾವಾ (ರ, ಸ) ೨ ಫಾಳ (ಜ)

ಜಗದಾತ್ಮರ್ ನಿನ್ನ ದೃಷ್ಟಿಪ್ರಭೆಯೊಳಖಿಳಮಂ ಕಾಣ್ಗುಮಂಭೋಜಗರ್ಭಾ
ದಿಗಳೆಲ್ಲರ್ ನಿನ್ನ ವಾಙ್ಮಾನದಿಗನಱಿಗುಮಶೇಷಾರ್ಥಮಂ ನಿನ್ನ ಸನ್ಮೂ
ರ್ತಿಗಳಿಂ ಬಾಳ್ದಪ್ಪುದೆಂದುಂ ಚರಮಚರಮುಗಣ್ಯಂ ಮುನೀಂದ್ರರ್ ಪೊಗಟ್ಟು
ಪ್ಪುಗದಿಂದಂ ನಿನ್ನ ನಾಮಾಮೃತದೆ ಪಡೆದಪರ್ ಮುಕ್ತಿಯಂ ವಾಮದೇವಾ ೧೯

ಪವಳಂ ಚಿದ್ಬಿಂಬಿದು ದಿವ್ಯಶಿನ್ಮಣಿಗಣಮಣಿಮಾದ್ಯಷ್ಟಕಂ ಭೂರಿಭೂಭೃ
ನ್ನಿಹವಂ ತತ್ತ್ವಾಳಿ ತಾನಾಗಿರೆ ಮಿಸುಪ ಭವಚ್ಛಕ್ತಿವಾರಾಶಿಯೊಳ್ ಪೊ
ಣ್ಮುವುದೇಳಗಳ್ ಪದ್ಮಜಾಂಡಪ್ರಕರಪರಿಲಸದ್ಬುದ್ಬುದಶ್ರೇಣಿ ಮಾಯಾ
ಪವನವ್ಯಾಪಾರದಿಂದಲ್ಲಿಯೆ ಮುಗುಳ್ಪಟಿಗುಂ ಸರ್ವಗೀರ್ವಾಣನಾಥಾ ೨೦

ಮಹಾಸ್ರಗ್ಧರೆ ಉರುಲಿಂಗಾಕಾರದಿಂ ನೀನಿರೆ ಹರಿ ವಿಧಿಗಳ್ ಪಾದಮಂ ಮೌಳಿಯುಂ ಕಂ
ಡರೆ ಬಹ್ವಾಯಾಸದಿಂದಾದೊಡಮಱಿಸಿಯುಮೆಲ್ಲಾಗಳುಂ ಸರ್ವಬೋಧಾ
ಕರಮಾವ್ನಾಯೌಘಮುಂ ಕೀರ್ತಿಸಿಯುಮಱಿದುದೇ ನಿನ್ನ ಮಾಹಾತ್ಮ್ಯಮಂ ಮಿ
ಕ್ಕರ ಮಾತೇಂ ದೇವ ನಿನ್ನುನ್ನತಿಯನಱಿವೊಡಾಕಾಶಗಂಗೋತ್ತಮಾಂಗಾ ೨೧

೧೯. ಎಲೈ ವಾಮದೇವನೆ, ಜಗತ್ತಿನ ಸಕಲಜೀವಿಗಳೂ ನಿನ್ನ ದೃಷ್ಟಿಯಾದ ಸೂರ್ಯ, ಚಂದ್ರಾಗ್ನಿಗಳ ಪ್ರಕಾಶದಲ್ಲಿ ದೃಶ್ಯರೂಪವಾದ ಪ್ರಪಂಚವೆಲ್ಲವನ್ನೂ ನೋಡುವರು. ಬ್ರಹ್ಮಾದಿ ಸಮಸ್ತರೂ ನಿನ್ನ ವಾಗ್ರೂಪವಾದ ವೇದಗಳ ಮೂಲಕ ಸಕಲಾರ್ಥಗಳನ್ನೂ ತಿಳಿಯುವರು. ನಿನ್ನ ಪಂಚಭೂತಾತ್ಮಕವೂ, ಸೂರ್ಯ ಚಂದ್ರಾತ್ಮಕವೂ ಆದ ಅಷ್ಟ ಮೂರ್ತಿಗಳಿಂದ ಲೆಕ್ಕವಿಲ್ಲದಷ್ಟು ಸಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಸದಾಕಾಲವೂ ಬಾಳುವುವು. ಮಹಾಮಹಾಮುನಿಗಳು ನಿನ್ನನ್ನು ಸ್ತುತಿಸುವುದರಿಂದ ನಿನ್ನ ನಾಮಾಮೃತ ಪ್ರಭಾವದಿಂದಲೇ ಮುಕ್ತಿಯನ್ನು ಪಡೆಯುವರು. ೨೦. ಸಕಲ ದೇವತಾಸಾರ್ವ ಭೌಮನೇ, ವಿಸ್ತಾರವಾದ ನಿನ್ನ ಶಕ್ತಿಯೆಂಬ ಸಾಗರದಲ್ಲಿ ಜ್ಞಾನಬಿಂದುವು ಹವಳವಿದ್ದಂತೆ, ಅಣಿಮಾದ್ಯಷ್ಟ ಸಿದ್ಧಿಗಳು ಬೆಳಗುತ್ತಿರುವ ರತ್ನರಾಶಿಯಂತೆ, ವ್ಯಕ್ತಾವ್ಯಕ್ತ ಮಹ ತತ್ತ್ವಾದಿಗಳು ದೊಡ್ಡ ಪರ್ವತಶ್ರೇಣಿಯಿದ್ದಂತೆ. ಬ್ರಹ್ಮಾಂಡಗಳೆಂಬ ಹೊಳೆಯುವ ನೀರ್ಗುಳ್ಳೆಗಳು ನಿನ್ನ ಮಾಯೆಯೆಂಬ ಗಾಳಿಯ ಹೊಡೆತಕ್ಕೆ ಸಿಕ್ಕಿ ಕಾಣಿಸುವುದು ಮತ್ತು ಅಲ್ಲಿಯೇ ಅಡಗುವುದು. ೨೧. ದೇವಗಂಗಾಧರನೆ, ಮಹಾಲಿಂಗಸ್ವರೂಪದಲ್ಲಿ ನೀನಿರಲು ಬ್ರಹ್ಮ, ವಿಷ್ಣುಗಳು ನಿನ್ನ ಶಿರಸ್ಸನ್ನೂ ಪಾದಗಳನ್ನೂ ಕಾಣಲು ಬಹಳ ಪ್ರಯಾಸ ಪಟ್ಟು ಹುಡುಕಿದರೂ ಅವರಿಗೆ ಅವನ್ನು ಕಾಣಲು ಸಾಧ್ಯವಾಗಲಿಲ್ಲ. ಸಕಲ ಜ್ಞಾನಗಳ ಆಕರಗಳಾದ ವೇದಗಳು ಕೀರ್ತಿಸಿದರೂ ನಿನ್ನ ಮಹಿಮೆಯನ್ನು ಅರಿಯಲು ಶಕ್ತವಾಗ

---

೧ ವಾಙ್ಮಾತ್ರದಿ (ರ) ೨ ಪೊದಳ್ದು (ಯ) ೩-೩ ದುವುದ್ಯ (ಜ) ೪ ದೀ (ತ, ಯ)

ಸಲೆ ಮೂವತ್ತಾಱು ತತ್ತ್ವಂಗಳ ತುದಿನೆಲೆಗನಿಂದಾತನೀನುಂ ನೀನೆ ನಿತ್ಯೋ
ಜ್ಜ್ವಲಪಂಚಬ್ರಹ್ಮಮೂರ್ತಿಪ್ರಕಟತವಿಭವಂ ನೀನೆ ಸರ್ವೇಶ ನಿರ್ವ್ಯಾ
ಕುಲಮಿರ್ಪತ್ತಯ್ದು ಸಲ್ಲೀಲೆಗಳನಸದಳಂ ತಾಳ್ದವಂ ನೀನೆ ಭಕ್ತಾ
ವಲಿಗೆಂದು ಭೋಗಮೋಕ್ಷಪ್ರದನೆನಿಸಿದನುಂ ನೀನೆ ಕಾರುಣ್ಯಸಿಂಧೂ ೨೨

*ಕರಿದೈತ್ಯಧ್ವಂಸಿ ಕಾಲಾಂತಕ ಕಿಟಿಹರ ಕೀಲೋಜ್ಜ್ವಲನ್ನೇತ್ರ ವಿಶ್ವಾಂ
ಕುರ ಕೂಟಸ್ಥೇಶ ಕೇಕಿಧ್ವಜಪಿತ ಭಜಕಾನೀಕಕೈವಲ್ಯ ಕೋಕಾ
ಸುರಹೃತ್ಸಂಸೇವ್ಯ ಕೌಟಿಲ್ಯರಹಿತ ಜಿತಕಂದರ್ಪ ಕಸ್ತೂರಿಕಾತ್ವಿಡ್
ಗರಭಾಸ್ವದ್ಗ್ರೀವ ಚಂದ್ರದ್ವಿಗುಣಿತರುಚಿ ನೀ ಪಾಲಿಸೆಮ್ಮಂ ಕಪರ್ದೀ ೨೩

ಲಿಲ್ಲ. ನಿನ್ನ ಮಹಿಮೆಯನ್ನರಿಯಲು ಇತರರಿಗೆ ಹೇಗೆ ತಾನೇ ಸಾಧ್ಯವಾದೀತು ? ೨೨. ಮೂವತ್ತಾರು ತತ್ತ್ವಗಳ[1] ತುದಿಯಲ್ಲಿ ಪ್ರಕಟವಾಗುವಾತನು ನೀನೆ, ಶಾಶ್ವತವಾಗಿ ಬೆಳಗುತ್ತಿರುವ ಪಂಚಬ್ರಹ್ಮ ಮೂರ್ತಿಗಳಲ್ಲಿ ವಿಖ್ಯಾತವಾದ ವೈಭವರೂಪನೂ ನೀನೆ, ಸರ್ವೇಶ್ವರನೆ, ಕಾರುಣ್ಯಸಾಗರನೆ, ನಿಶ್ಚಿಂತನಾಗಿ ಇಪ್ಪತ್ತೈದು ಲೀಲೆಗಳನ್ನು ಮೆರೆದವನೂ ನೀನೆ. ಭಕ್ತಾವಳಿಗೆ ಯಾವಾಗಲೂ ವಿಷಯಾನಂದವನ್ನೂ, ಸ್ವರೂಪಾ ನಂದವಾದ ಮೋಕ್ಷವನ್ನೂ ಅನುಗ್ರಹಿಸಿದವನೂ ನೀನೆ ಆಗಿರುವೆ. ೨೩. ಗಜಾಸುರ ಮಥನನೇ, ಮೃತ್ಯುಂಜಯನೇ, ವಿಷ್ಣುವಿನ ವರಾಹರೂಪವನ್ನು ಸಂಹರಿಸಿದವನೇ, ಜ್ವಾಲೆಗಳಿಂದ ಹೊಳೆವ ಕಣ್ಣುಳ್ಳವನೇ, (ವೃಕ್ಷಕ್ಕೆ) ಚಿಗುರುಗಳಂತೆ ವಿಶ್ವಗಳನ್ನು ಹೊಂದಿರುವವನೇ, ನಿರ್ವಿಕಾರನೂ, ಸ್ಥಿರನೂ ಆಗಿರುವವನೇ, ಪ್ರಭುವೆ, ಷಣ್ಮುಖ ಪಿತನೇ, ಭಕ್ತಕೋಟಿಗೆ ಕೈವಲ್ಯರೂಪನೇ, ಆರ್ತರಾದ ದೇವತೆಗಳು ತಮ್ಮ ಹೃದಯ ಗಳಲ್ಲಿ ನಿನ್ನನ್ನು ಭಾವಿಸುವರು. ಋಜುಸ್ವಭಾವದವನೇ, ಮದನಾರಿಯೇ, ಕಸ್ತೂರಿ ಯೋಪಾದಿಯಲ್ಲಿ ಕೊರಳಲ್ಲಿ ವಿಷವನ್ನು ಧರಿಸಿದವನೇ, ಚಂದ್ರನಿಗಿಂತ ಇಮ್ಮಡಿ ಯಾದ ಕಾಂತಿಯುಳ್ಳವನೇ, ಕಪರ್ದಿಯೇ ನಮ್ಮನ್ನು ರಕ್ಷಿಸು" ಎಂದು ಸ್ತುತಿಸಿದರು.

---

೧ ತುದಿಯೊಳೆ (ಯ) ೨ ನಿಂದಾಂತ (ಜ) ೩ ಕಿರಿ (ಗ, ತ)

* ಕೆಲವು ಪ್ರತಿಗಳಲ್ಲಿ ಈ ಪದ್ಯದ ಆರಂಭಕ್ಕೆ "ಗುಣಿತಾಕ್ಷರಿ" ಎಂದು ಸೂಚನೆ ಇದೆ.

[1] ಮೂವತ್ತಾರು ತತ್ತ್ವಗಳು: ಶಿವ, ಶಕ್ತಿ ಸದಾಶಿವ, ಈಶ್ವರ, ವಿದ್ಯೆ–ಈ ಐದು ಶುದ್ಧಾಧ್ವ ತತ್ತ್ವಗಳು. ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಪುರುಷ, ಪ್ರಕೃತಿ–ಈ ಏಳು ಮಿಶ್ರಾಧ್ವತತ್ತ್ವಗಳು, ಮನೋ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕು ಅಂತಃಕರಣಗಳು. ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣಗಳೆಂಬ ಐದು ಜ್ಞಾನೇಂದ್ರಿಯಗಳು, ವಾಕ್, ಪಾಣಿ . ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಐದು ತನ್ಮಾತ್ರೆಗಳು, ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳೆಂಬ ಐದು ಭೂತಗಳೂ ಸೇರಿ 24 ತತ್ತ್ವಗಳು-ಇವು ಅಶುದ್ಧಾಧ್ವ ತತ್ತ್ವಗಳು, ಹೀಗೆ ಒಟ್ಟು ಮೂವತ್ತಾರು ತತ್ತ್ವಗಳು. ಪಂಚಬ್ರಹ್ಮಮೂರ್ತಿ : ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಮತ್ತು ಸದಾಶಿವ.

ಕರೆಗಣ್ಮುವ ಸುಖಜಲಮು
ಬ್ಬರಿಸುವ ರೋಮಾಂಚವೆಸೆಯೆ ಗದ್ಗದಗಳಿತಾ
ಕ್ಷರವಂ ಸಂತವಿಡುತ್ತುಂ
ಗಿರಿಶನನೊಲವಿಂದೆ ಪೊಗಟ್ದರಾ ಮುನಿವರ್ಯರ್ ೨೪

ವಚನ ಇಂತೆಂದು ಪೊಗಟ್ದು ಮುಗುಟ್ದಿಂ ಮಣಿದ ಮುನಿವರರ ಸಂಸ್ತವಕ್ಕೆ ಸಂತಸಂಬಟ್ಟು, ಕಂತುಹರಂ ಕಾರುಣ್ಯರಸಂ ತೆರೆಮಸಗುವ ನಿಜಕಟಾಕ್ಷದಿಂ ನಿರೀಕ್ಷಿಸಿ

ಆವ ಗಿರಿಯಲ್ಲಿ ನಿಮ್ಮ ತ
ಪೋವನಮಾಯೆಡೆಯನುಟಿದಿದೇಂ ಕಾರಣಮೀ
ತಾವಿಂಗೆ ಬಂದಿರಾವುದು
ಬೇವಸಮದನೊರೆವುದೆಮ್ಮೊಳೆಂದನುಮೇಶಂ ೨೫

ವಚನ ಎಂದು ಸರ್ವಜ್ಞಂ ತಾನಱಿಯದನಂತೆ ಬೆಸಗೊಳ್ವಿನಮಾ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು

ಅವಧರಿಪುದಖಿಳನಿರ್ಜರ
ನಿವಹಕಿರೀಟಾಗ್ರಘಟಿತ ನಿಜಚರಣ ಕೃಪಾ
ರ್ಣವ ಭವಹರ ಹರ ಗಿರಿಜಾ
ಧವ ದೇವ ಮದೀಯಮಹಿತವಿಜ್ಞಾಪನಮಂ ೨೬

೨೪. ಆ ಮುನಿಶ್ರೇಷ್ಠರು ತಮ್ಮ ಕಣ್ಣಿನಲ್ಲಿ ಆನಂದಬಾಷ್ಪವು ಉಕ್ಕೇರುತ್ತಿರಲು ಪುಳಕಿತಗಾತ್ರರಾಗಿ, ತಡವರಿಸುತ್ತಿದ್ದ ಉಚ್ಚಾರಣೆಯನ್ನು ಸರಿಪಡಿಸಿಕೊಳ್ಳುತ್ತಾ ಭಕ್ತಿ ಭರರಾಗಿ ಶಿವನನ್ನು ಸ್ತುತಿಸಿದರು. ವಚನ : ಈ ರೀತಿಯಲ್ಲಿ ಸ್ತುತಿಸಿ, ಪುನಃ ನಮಸ್ಕರಿಸಿದ ಮುನಿವರರ ಸ್ತೋತ್ರಕ್ಕೆ ಮೆಚ್ಚಿ ಮನ್ಮಥಹರನು ಕರುಣರಸಕಲ್ಲೋಲವಾದ ತನ್ನ ಕಡೆಗಣ್ನೋಟದಿಂದ ನೋಡಿ, ೨೫. ನಿಮ್ಮ ತಪೋವನವು ಯಾವ ಗಿರಿಪ್ರದೇಶದಲ್ಲಿದೆ ? ಆ ಸ್ಥಳವನ್ನು ಬಿಟ್ಟು ಇಲ್ಲಿಗೆ ಬಂದುದೇಕೆ ? ನೀವು ತಲ್ಲಣಗೊಂಡಿರೇಕೆ ? ಎಂಬುದನ್ನು ನನಗೆ ತಿಳಿಸಿ" ಎಂದನು. ವಚನ : ಸರ್ವಜ್ಞನಾದ ಶಂಕರನು ಅರಿಯದವನಂತೆ ಈ ರೀತಿ ಕೇಳಲು, ತಪೋಧನರಲ್ಲಿ ಒಬ್ಬ ಚತುರನಾದ ಮುನಿಯು ಆಜ್ಞೆಯನ್ನು ತಲೆಯಲ್ಲಿ ಹೊತ್ತು, ಕೈಮುಗಿದು, ದೀನನಾಗಿ ನಿಂತು, ೨೬. "ಸಕಲ ಸುರಸಮೂಹದಿಂದ ನಮಸ್ಕೃತನಾದ ಚರಣವುಳ್ಳವನೇ, ಕೃಪಾಸಾಗರನೇ, ಸಂಸಾರದುಃಖಪರಿಹಾರಕನೇ,

ಮಹಾಸ್ರಗ್ಧರೆ ಮಣಿಕೂಟಂ ಮಂಜುಳಪ್ರಸ್ಫುಟಮಣಿಮಕುಟಂ ನಿರ್ಝರಂ ತಾರಹಾರಂ
ಕ್ಷಣರೋಚಿಃಸ್ವರ್ಣಯುಕ್ತಂ೧ ಸುರಪಮಣಿಮಹಾಕುಂಡಲಂ ಪಾರ್ಶ್ವಮೇಘಂ
ಪ್ರಣುತೋದ್ಯತ್ಕಾನನಂ ಪ್ರಸ್ಫುರಿತಹರಿತವಸ್ತ್ರಂ ಸಮಂತಾಗೆ ಭೂಭೃದ್
ಗುಣಿರುದ್ರಂ ಕಾಂತಿಸಾಂದ್ರಂ ಕರಮೆಸೆದುದು ತಳ್ತಿಂದ್ರಕೀಲಾಚಲೇಂದ್ರಂ ೨೭

ಚಂಪಕ ಮುನಿಗಳ ಬೀಡು ಮುಕ್ತಿಯ ತವರ್ಮನೆ ಪೆರ್ಮೆಯ ಗೊತ್ತು ಘೋರಕಾ
ನನದೆಡೆ ಸಿಂಹಮುಖ್ಯಮೃಗದಿಕ್ಕೆ ಮಣಿವ್ರಜದಾಗರಂ ಮಹಾ
ಘನ ಸುರಸಿದ್ಧಚಾರಣರ ಚಾವಡಿ ಸಯ್ಪಿನ ಸೀಮೆ ದಿವ್ಯಸಂ
ದಸದ ನಿವಾಸಮಾ ನಗಮದಂ ಮಿಗೆ ಬಣ್ಣಿಸಲಾರ್ಗೆ ಗೋಚರಂ ೨೮

ಸುರಮಣಿಯಿಂದೆ ತಳ್ತು ಘನಭೋಗಸಮಾಶ್ರಿತನಾಗಿ ವಂಶಭಾ
ಸುರತೆಯನಾಳ್ದು೩ ಚಂದನಲಸತ್ತಿಳಕಂದಳೆದಾತ್ತನಿರ್ಜರ

ಶಿವನೇ, ಗಿರಿಜಾರಮಣನೇ ನನ್ನ ಬಿನ್ನಪವನ್ನು ಲಾಲಿಸಬೇಕು." ೨೭. ಇಂದ್ರಕೀಲ ಪರ್ವತವು ರಾಜಲಕ್ಷಣಗಳಿಂದ ಒಪ್ಪುತ್ತಿದ್ದಿತು. ರತ್ನಶಿಖರವು ರತ್ನಖಚಿತವಾದ ಕಿರೀಟದಂತೆ ಪ್ರಕಾಶಿಸುತ್ತಿದ್ದಿತು. (ಪರ್ವತದ ಮೇಲಿನಿಂದ) ಧುಮ್ಮಿಕ್ಕುವ ಜಲಧಾರೆಗಳು ತೋರಮುತ್ತಿನ ಮಾಲೆಯಂತಿದ್ದಿತು. ಮಗ್ಗುಲಲ್ಲಿ ಹರಡಿದ್ದ ಮೇಘಮಾಲೆಗಳು ಮಿಂಚುಗಳಿಂದ ಕೂಡಿದ್ದು, ಸ್ವರ್ಣಖಚಿತವಾದ ಇಂದ್ರನೀಲಮಣಿಯ ಕಿವಿದೊಡವುಗಳಂತಿದ್ದುವು. ದಟ್ಟವಾಗಿ ಬೆಳೆದಿದ್ದ ಮಹಾರಣ್ಯವು ಉಟ್ಟ ಪೀತಾಂಬರದಂತೆ ರಂಜಿಸಲು ಇಂದ್ರಕೀಲವು ವಿರಾಜಿಸುತ್ತಿದ್ದಿತು. ೨೮. ದಿವ್ಯಸಂಪತ್ಸಮೃದ್ಧವಾದ ಆ ಪರ್ವತವನ್ನು ಬಣ್ಣಿಸಲು ಸಾಧ್ಯವೆ? ಅದು ಮುನಿಗಳ ನಿವಾಸಸ್ಥಾನ; ಮುಕ್ತಿಯ ತವರ್ಮನೆ ; ಉನ್ನತವಾದುದು ; ಘೋರಾರಣ್ಯಗಳಿರುವ ಜಾಗ ; ಸಿಂಹವೇ ಮೊದಲಾದ ಕ್ರೂರಮೃಗಗಳ ಬೀಡು ; ಅಲ್ಲಿ ರತ್ನರಾಶಿಗಳಿದ್ದುವು ; ಮಹೋನ್ನತರಾದ ದೇವತೆಗಳೂ, ಸಿದ್ಧರೂ ಚಾರಣರೂ ವಾಸಮಾಡುತ್ತಿದ್ದರು ; ಮತ್ತು ಅದು ಪುಣ್ಯಕ್ಷೇತ್ರ ; ದೇವತೆಗಳ ಕ್ರೀಡಾವನ. ೨೯. ಇಂದ್ರಕೀಲಪರ್ವತವು ರಾಜವೈಭವದಿಂದ ಮನೋಹರವಾಗಿದ್ದಿತು. (ಇಲ್ಲಿ ಪರ್ವತ ಮತ್ತು ರಾಜನ ಪರವಾಗಿ ಎರಡು ಅರ್ಥಗಳಿವೆ) (1) ಸುರಮಣಿಯಿಂದ ತಳ್ತು ದಿವ್ಯವಾದ ರತ್ನಗಳಿಂದ ಕೂಡಿದ್ದಿತು ; (2) ಸು-ರಮಣಿಯಿಂದ ತಳ್ತು-ಉತ್ತಮ ಸ್ತ್ರೀ ಸಹಿತನಾಗಿ, ಘನಭೋಗಸಮಾಶ್ರಿತನಾಗಿ (1) ಮೇಘಗಳಿಂದ ಕೂಡಿ ; (2) ನಿರಂತರ ಸುಖವನ್ನು ಹೊಂದಿ ; ವಂಶಭಾಸುರತೆಯನಾಳ್ದು–ಬಿದಿರುಮೆಳೆಗಳಿಂದ ಚೆಲ್ವಾಗಿ ; (2) ಸತ್ಕುಲಶೋಭಿತನಾಗಿ ಚಂದನ ಲಸತ್ತಿಲಕಂದಳೆದು-[1](1) ಶ್ರೀಗಂಧದ ಮತ್ತು

೧ ಮುಕ್ತಂ (ತ) ೨ ಗಣ (ಯ) ೩–೩ ಯ ತಾಳ್ದು (ರ, ಸ)

[1] ಸುರ-ಮಣಿ–ದಿವ್ಯರತ್ನ ; ಸು-ರಮಣಿ-ಉತ್ತಮ ಸ್ತ್ರೀ, ಭೋಗ–ವಿಸ್ತಾರ, ಸುಖ. ವಂಶ-ಬಿದಿರು, ಕುಲ. ನಿರ್ಜರ-ದೇವತೆ, ಮುಪ್ಪಡರದ ಯೌವನ. ಸ-ರಸ-ಭೂಮಿಯೊಡನೆ, ಅನುರಾಗದಿಂದ. ಅನಂತ–ಶೇಷ, ಆಕಾಶ, ಕೊನೆಯಿಲ್ಲದ. ಇಳಾಧರ-ಪರ್ವತ, ರಾಜ.

ತ್ವರುಚಿರನಾಗಿ ಸಾನುಗತಸತ್ತ್ವನುಪಾಶ್ರಿತದಿವ್ಯನಂದನಂ
ಸರಸನನಂತಭೂಷಿತನಿಳಾಧರರಾಜನವೋಲ್ ಮನೋಜ್ಞನೋ ೨೯

ಉದಯಿಸಿ ತೋರ್ಪ ಚಂದ್ರಮನುಮಸ್ತನಗಾಗ್ರದೊಳಿರ್ಪ ಭಾನುವುಂ
ಪಡೆದು ವಿಳಾಸದಿಂ ತಳೆದ ಶಂಖದ ಚಕ್ರದ ಮಾಟ್ಕೆಯುಂ ಮನ
ಕ್ಕೊದವಿಸೆ ಪೀತವಾಸದವೊಲೊಪ್ಪಿರೆ ಗೈರಿಕಧಾತು ಮೇಘವೊಂ
ದಿದ ಗಿರಿ ಕೃಷ್ಣಲೀಲೆವಡೆದೊಪ್ಪುಗುಮಂತದು ತಳ್ತ ಸಂಜೆಯೊಳ್ ೩೦

ಅರುಣೋದಯದರುಣದ್ಯುತಿ
ಗಿರಿಕಟಕದ ಪಳಿಕಿನಲ್ಲಿಗಿ ಬಿಂಬಿಸೆ ಕಾಣು
ತ್ವರುಣಜಲಂಗೆತ್ತಲ್ಲಿಯ
ಪರಿಣಾರಿಯ ಮಱಿಗಳೆಯ್ದೆ ನಕ್ಕುತ್ತಿರ್ಕುಂ ೩೧

ಪಳಕಿನ ಪಾಸಱೆಯ ವಿನಿ
ರ್ಮಳತೆಯಿನಾ ಗಿರಿಯ ಖಚರತತಿ ಕಾಣ್ಬುಗಿಮಿಳಾ

ತಿಲಕವೃಕ್ಷಗಳನ್ನು ಹೊಂದಿ; (2) ಸುವಾಸನೆಯುಳ್ಳ ತಿಲಕವನ್ನು ಹಣೆಯಲ್ಲಿಟ್ಟು; ಅತ್ತ ನಿರ್ಜರತ್ವ ರುಚಿರನಾಗಿ-(1) ದೇವತೆಗಳ ವಿಹಾರಭೂಮಿಯಾಗಿ ಮನೋಹರ ವಾಗಿ; (2) ಯೌವನದಿಂದ ಮೆರೆಯುತ್ತಾ; ಸಾನುಗತಸತ್ತ್ವನ್-(1) ತಪ್ಪಲುಗಳಲ್ಲಿ ಪ್ರಾಣಿಗಳು ಓಡಾಡುತ್ತಿದ್ದುವು; (2) ಪರಿವಾರವು ಹಿಂಬಾಲಿಸುತ್ತಿದ್ದಿತು; ಉಪಾಶ್ರಿತ ದಿವ್ಯನಂದನಂ-ದೇವವಿಹಾರೋಚಿತವಾದ ವನಗಳಿದ್ದುವು; (3) ಯೋಗ್ಯಪುತ್ರರಿಂದೊಡ ಗೂಡಿ; ಸರಸನನಂತಭೂಷಿತನ್-(1) ಭೂಮ್ಯಾಕಾಶಗಳನ್ನು ತನ್ನ ಔನ್ನತ್ಯದಿಂದ ಪ್ರಕಾಶಿಸುತ್ತಾ; (2) ರಾಜ್ಯದಿಂದಲೂ, ಆಭರಣಗಳಿಂದಲೂ ಭೂಷಿತನಾಗಿ; ಇಳಾಧರಂ-(1) ಪರ್ವತವು (2) ರಾಜನು ಪ್ರಕಾಶಿಸುತ್ತಿದ್ದಿತು (ದ್ದನು). ೩೦. ಸಂಜೆಯ ಸಮಯ ದಲ್ಲಿ ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುವ ಚಂದ್ರನೂ, ಪಶ್ಚಿಮದಲ್ಲಿ ಮುಳುಗು ತ್ತಿರುವ ಸೂರ್ಯನೂ, ವಿಷ್ಣುವು ಧರಿಸಿದ್ದ ಶಂಖ, ಚಕ್ರಗಳಂತಿದ್ದುವು. ಪರ್ವತದಲ್ಲಿ ವಿಕಸಿಸುತ್ತಲಿದ್ದ ಪುಷ್ಪಗಳೂ, ಬೆಳಗುತ್ತಲಿದ್ದ ಜ್ಯೋತಿರ್ಲತೆಗಳೂ ಧರಿಸಿದ್ದ ಪೀತಾಂಬರ ದಂತೆ ಹೊಳೆಯುತ್ತಿದ್ದಿತು. ಮೇಘಾಚ್ಛಾದಿತವಾದ ಗಿರಿಯು ನೀಲಮೇಘಶ್ಯಾಮನಾದ ವಿಷ್ಣುವಿನಂತೆ ಲೀಲಾಮನೋಹರವಾಗಿದ್ದಿತು. ೩೧. ಅರುಣೋದಯ ಕಾಲದಲ್ಲಿ ವ್ಯಾಪಿಸುತ್ತಿದ್ದ ಕೆಂಬಣ್ಣಕಾಂತಿಯು ಪರ್ವತತಪ್ಪಲುಗಳಲ್ಲಿದ್ದ ಸ್ಫಟಿಕಶಿಲೆಗಳಲ್ಲಿ ಪ್ರತಿ ಬಿಂಬಿಸಲು, ಅದನ್ನು ಕಂಡ ಹುಲಿಯಮರಿಗಳು ಆ ಕೆಂಬೆಳಗನ್ನು ರಕ್ತವೆಂದು ಭ್ರಮಿಸಿ ನೆಕ್ಕುತ್ತಿದ್ದವು. ೩೨. ಇಂದ್ರಕೀಲಪರ್ವತವು ಪಾತಾಳದಿಂದ ಅಂತರಿಕ್ಷದವರೆಗೆ ವ್ಯಾಪಿಸಿ ಉನ್ನತವಾಗಿರುವುದರಿಂದಲೂ, ನಿರ್ಮಳವಾದ ಸ್ಫಟಿಕಶಿಲೆಯಿಂದ ಬೆಳಗುತ್ತಿರು

---

೧ ಕದಲ್ಲಿ (ರ)

ತಳವುಂ ತಳೆದಹಿಪನ ಮಣಿ
ವಿಳಸಿತರುಚಿವಿಸ್ಫುರತ್ಫಣಾಮಂಡಳಮುಂ ೩೨

ಅಹಿಪತಿ ನಿಜಭಾರಮನೀ
ಮಹೀಧರಂ ಪೊತ್ತುದೆಂದು ಫಣಮಣಿಗಣಮಂ
ಮಹಿಲದಿನಿತ್ತನೊ ಪೇಟೆನೆ
ಬಹುರತ್ನಕದಂಬಮದಱ ತಪ್ಪಲೊಳೆಸೆಗುಂ ೩೩

ಮೊಗವಿಟ್ಟೊದಲ್ಕೆಳಸುಗು
ಮಗದಗ್ರದ ಕರಡಿಯುಮದುರ್ಗೆಯ್ಯನ ಪುತ್ತಂ
ಮಿಗಮೆನದಿಂ ಪುಲಿ ಪೊಯ್ಯಲ್
ಬಗೆವುದು ತಾನೆಂದೊಡದ್ರಿಯೇನುನ್ನತಮೋ ೩೪

ವಚನ ಮತ್ತಮಾ ನಗೇಂದ್ರಂ ನರೇಂದ್ರನಂತನೇಕಪವಿರಾಜಿತಮಣಿಕಟಕರುಜಿತಮುಂ, ಅಧಿಕಾ ನನಗಿಭ್ರಾಜಿತಮುಂ, ಮರುತ್ಪಥದಂತೆ ಬಹುಲತಾರಾರಾಜಿತಮುಂ, ಭಾಸ್ವದ್ವಿಧೂಪಲಸಿತರುಚಿ

ವುದರಿಂದಲೂ, ಭೂಮಿಯನ್ನು ಹೊತ್ತ ಆದಿಶೇಷನ ಫಣಾಮಣಿಗಳ ಕಾಂತಿಯು ಗಿರಿಯಲ್ಲಿ ಸಂಪೂರ್ಣವಾಗಿ ಪ್ರತಿಬಿಂಬಿಸುವುದನ್ನು ಗಗನಚರರಾದ ದೇವತೆಗಳು ಕಾಣುವರು. ೩೩. ಆದಿಶೇಷನು ಭೂಮಿಯನ್ನು ಹೊತ್ತಿರುವನು. ಈ ಪರ್ವತವು ಭೂಧರವೆನಿಸಿರುವುದರಿಂದ ತನ್ನ ಭಾರವನ್ನು ಹೊತ್ತ ಈ ಪರ್ವತಕ್ಕೆ ಪ್ರೀತಿಯಿಂದ ತನ್ನ ಹೆಡೆಯ ರತ್ನಗಳನ್ನು ಬಹುಮಾನವಾಗಿ ಕೊಟ್ಟಿರುವನೋ ಎನ್ನುವ ರೀತಿಯಲ್ಲಿ ಗಿರಿಯತಪ್ಪಲಲ್ಲಿ ರತ್ನರಾಶಿಗಳಿರುವುವು. ೩೪. ಪರ್ವತಾಗ್ರದಲ್ಲಿರುವ ಕರಡಿಗಳು, ಶಿಖರವನ್ನು ಸೋಕುವ ರೀತಿಯಲ್ಲಿ ಚಂದ್ರಬಿಂಬವು ಬರಲು, ಅದರಲ್ಲಿನ ಕಳಂಕವನ್ನು ಹುತ್ತ*ವೆಂದು ಭ್ರಮಿಸಿ, ಅದರಲ್ಲಿನ ಗೆದ್ದಲುಹುಳುಗಳನ್ನು ಹೀರುವುದಕ್ಕಾಗಿ ಊದಲು ಪ್ರಯತ್ನಿಸುವುದು. ಚಂದ್ರನಲ್ಲಿರುವ ಕಳಂಕವನ್ನು ಜಿಂಕೆಯೆಂದು ಭ್ರಮಿಸಿದ ಹುಲಿಯು ಅದನ್ನಾಕ್ರಮಿಸಲು ಪ್ರಯತ್ನಿಸುವುದು ಎನ್ನಲು ಪರ್ವತವು ಅಂತರಿಕ್ಷದವರೆಗೆ ಉನ್ನತವಾಗಿದ್ದಿತು ಎಂಬುದು ಗೊತ್ತಾಗುವುದು. ವಚನ : ಮತ್ತು ಆ ಪರ್ವತವು ಅನೇಕಪ ವಿರಾಜಿತ ಮಣಿಕಟಕ ರುಜಿತಮುಂ-ಅಧಿಕಾನನಭ್ರಾಜಿತಮುಂ-(1) ರಾಜನಂತೆ-ಆನೆಗಳಿಂದಲೂ, ಹೊಳೆಯುವ ರತ್ನಗಳಿಂದಲೂ, ಸೈನ್ಯಗಳಿಂದಲೂ ಶೋಭಿಸುವವನು ; ಪರ್ವತವು ಕಾಡಾನೆಗಳಿಂದಲೂ (ವಿ-ರಾಜಿತಂ) ಹಕ್ಕಿಗಳಿಂದಲೂ ಮನೋಹರ ರತ್ನಮಯವಾದ ತಪ್ಪಲು ಪ್ರದೇಶದಿಂದ ಮನೋಹರವಾಗಿದ್ದಿತು ; ಮತ್ತು (ಅಧಿ-ಕಾನನಂ) ಅರಣ್ಯಗಳಿಂದ ಶೋಭಿಸುತ್ತಿದ್ದಿತು. (1) ವಾಯುಮಾರ್ಗದಂತೆ (ಆಕಾಶದಂತೆ) ಅನೇಕ ನಕ್ಷತ್ರಗಳಿಂದ ಬೆಳಗಿ, ಸೂರ್ಯನಿಂದಲೂ, ಚಂದ್ರನಿಂದಲೂ ಪ್ರಕಾಶಿತವಾಗಿದ್ದಿತು ; (2) ಪರ್ವತವು

---

೧ ಕಾನನಾ (ಯ)

* ಪುತ್ತು=ಬಲ ಅರ್ಥಾತ್ ಚಂದ್ರನ ಕಳಂಕ

**ಮನೋಜ್ಞಮುಂ, ಮಧುಕರಾಳಿಯಂತೆ ಸಮದಪುಂಡರೀಕಗಂಡಕಮಂಡಿತಮುಂ, ಸುಗಂಧಸುಮನೋಗಣರಾಗಾನ್ವಿತಮುಂ, ದೈತ್ಯಸೈನ್ಯದಂತೆ ಹರಿನರಾಹವ೧ಸದ್ಬಲಖಡ್ಗಿ ಮಂಡಿತಮುಂ, ಮಿಳದ್ದಾನವಪುಷ್ಕಲಭರೋಚಿತಮುಂ, ೨ಯಜ್ಞದಾಗಾರ೨ದಂತೆ ಸದಧ್ವರಚಿತವಿಭ್ರಮಶಿಖಿದ್ವಿಜರಾಜಿತಮುಂ, ವಿತತಧೀವರಮುಖೋದ್ಗತಶ್ರುತಿವಿಶದಾರಾವವಿಜೃಂಭಿತಮುಂ**

ಅನೇಕ ಒಳ್ಳೆಗಳಿಂದ ಕೂಡಿ ಶೋಭಾಯಮಾನವಾಗಿದ್ದಿತು ಮತ್ತು ಹೊಳೆಯುತ್ತಿದ್ದ ಚಂದ್ರಕಾಂತಶಿಲೆಗಳ ಶುಭ್ರಕಾಂತಿಯಿಂದ ಪ್ರಕಾಶಿಸುತ್ತಿದ್ದಿತು. (1) ದುಂಬಿಗಳ ಸಮೂಹದಂತೆ ಕಮಲಗಳಲ್ಲಿಯೂ ಮತ್ತು ಮದೋದಕದಿಂದ ಕೂಡಿದ ಆನೆಗಳ ಕಪೋಲಗಳಲ್ಲಿಯೂ ಮೆರೆಯುತ್ತಿತ್ತು ; ಮತ್ತು ಸುಗಂಧಯುಕ್ತವಾದ ಪುಷ್ಪಸಮೂಹಗಳಿದ್ದುವು (2) ಪರ್ವತವು ದರ್ಪದಿಂದ ಕೂಡಿದ ಹುಲಿಗಳಿಂದಲೂ, ಖಡ್ಗಮೃಗಗಳಿಂದಲೂ ಕೂಡಿದ್ದಿತು ಮತ್ತು ಪರಿಮಳವಾಸನೆಯಿಂದಲೂ, ದೇವಸಮೂಹಗಳಿಂದಲೂ, ಗೈರಿಕಾದಿ ಧಾತುಗಳ ಕೆಂಬಣ್ಣದಿಂದಲೂ ಕೂಡಿದ್ದಿತು. ರಾಕ್ಷಸಸೈನ್ಯದಂತೆ, (2) ಇಂದ್ರನೇ ಮೊದಲಾದ ದೇವತೆಗಳು ಮತ್ತು ಮನುಷ್ಯರೊಡನೆ ಯುದ್ಧ ಮಾಡುವಾಗ ಪರಾಕ್ರಮಿಗಳಿಂದಲೂ, ಖಡ್ಗಧಾರಿಗಳಿಂದಲೂ ಕೂಡಿದ್ದಿತು ; ದಟ್ಟೈಸಿದ ರಾಕ್ಷಸರಿಂದ ಸಮೃದ್ಧವಾಗಿರುವುದು ; (2) ಪರ್ವತವು ಸಿಂಹದಿಂದಲೂ. (ನರಾಹವಸದ್ಬಲ-ಖಡ್ಗಿ) ಮನುಷ್ಯರನ್ನು ಘಾತಿಸುವ ಬಲವುಳ್ಳ ಖಡ್ಗಮೃಗಗಳಿಂದಲೂ ಕೂಡಿದ್ದಿತು ; ಆನೆಗಳ ಗಂಡಸ್ಥಳಗಳಲ್ಲಿ ಮದೋದಕವಿದ್ದಿತು. (1) ಯಾಗದಲ್ಲಿ ಆಗಮಶಾಸ್ತ್ರಕ್ಕನುಸಾರವಾಗಿ ರಚಿತವಾದ ಯಜ್ಞಕುಂಡದಲ್ಲಿ ಜ್ವಾಲಾಮಾಲೆಗಳಿಂದ ಕೂಡಿದ ಅಗ್ನಿಯು ಪ್ರಕಾಶಿಸುತ್ತಿತ್ತು ಮತ್ತು ವಿಶೇಷ ಪ್ರಾಜ್ಞರಾದ ಬ್ರಾಹ್ಮಣರು ವೇದಗಳನ್ನು ಸ್ಪಷ್ಟವಾಗಿಯೂ, ಗಟ್ಟಿಯಾಗಿಯೂ ಉಚ್ಚಾರಮಾಡುತ್ತಿದ್ದರು. (ii) ಪರ್ವತವು ನಕ್ಷತ್ರಮಾರ್ಗದಲ್ಲಿ ವಿಲಾಸದಿಂದ ನಲಿಯುತ್ತಿದ್ದ ನವಿಲುಗಳಿಂದಲೂ ಹಾರುತ್ತಿದ್ದ ಪಕ್ಷಿಗಳಿಂದಲೂ ಶೋಭಿಸುತ್ತಿದ್ದಿತು ; ಎಲ್ಲಾ ಕಡೆಗಳಿಂದಲೂ ಬೇಡರು ಗಟ್ಟಿಯಾಗಿ ಕಿವಿಗೆ ಸ್ಫುಟವಾಗಿ ಕೇಳುವಂತೆ ಕೂಗುತ್ತಿದ್ದರು ; (i) ಒಳ್ಳೆಯ ಕುಲದವನಾಗಿದ್ದೂ ಹೀನಜಾತಿಯವರೊಡನೆ ಸೇರಿದ್ದನೆಂದರೆ ವಿರೋಧ ; (ii) ಒಳ್ಳೆಯ ಬಿದಿರು ಮೆಳೆಗಳಿಂದಲೂ, ವೃಕ್ಷರಾಜಿಯಿಂದಲೂ ಕೂಡಿದ್ದಿತು ಎಂದಾಗ ವಿರೋಧ ಪರಿಹಾರ. (i) ಹಸುಗಳಿಗೆ ಉಪಯೋಗವಾದುದು, ಆದರೆ ತೋಳಗಳು ವಾಸವಾಗಿದ್ದವು ಎಂದರೆ ವಿರೋಧ ; (ii) ಆಕಳಿಗೆ (ಮೇಯಲು) ಉಪಯೋಗವಾಗುವಂತಿದ್ದರೂ, ವಿಗ್ರಹ ಎಂದರೆ ಜಗಳಕ್ಕೆ ಆಶ್ರಯವಲ್ಲದು ಎಂದರೆ ವಿರೋಧ ಪರಿಹಾರ ; (i) ಮನ್ಮಥನ ಆಗಮನಕ್ಕೆ ಅನುಕೂಲ ವಾತಾವರಣವಿದ್ದು, ಶಂಬರನ ವಿನೋದಕ್ಕೂ ನೆಲೆಯಾಗಿದ್ದಿತು

---

೧ ವರಾಹವ (ಯ, ಜ, ರ) ೨-೨ ಯಜ್ಞಾಗಾರ (ಕ, ಜ, ಯ)

*ಸುವಂಶಾನ್ವಿತವಾಗಿಯುಂ ಕುಜಾತಿಸಮೃದ್ಧಮುಂ, ಶಬಲೋ[೧]ಪಯುಕ್ತಮಾಗಿಯುಮವಿಗ್ರಹಾಶ್ರಯಮುಂ, [೨]ಮದನಾಗ[೨]ಮಹಿತಸ್ಥಿತಿಯಾಗಿಯುಂ ಶಂಬರವಿಲಾಸಾಸ್ಪದಮುಂ, ಘನತರಕ್ಷುಧಾವನಸರಕೃಷ್ಣಸಾರವ್ಯಾ[೩]ವೃತಿಯಾ[೩]ಗಿಯುಂ ಲುಬ್ಧಕಕುಲಕ್ಷಣವ್ಯಾಪಾರಸಂಗತಮುಂ, ವಿರಾಜಿತಾಮ್ರಶ್ರೀಯುಕ್ತಮಾಗಿಯುಂ ಕಪಿಶತಾಲಂಬಿತಮುಂ, ಸರ್ವದಾರೂಪಶೋಭಿತಮಾಗಿಯುಮತನುಶೋಭಾಸ್ಪದಮೆನಿಸಿರ್ದುದಂತುಮಲ್ಲದೆಯುಂ

ಚಂಪಕ ಹಿಮನಗದಂತೆ ಮೇಣದು ಸದಾ ಮಹಿಮಾನ್ವಿತಮಸ್ತಶೈಲದಂ
ತಮಳಿನವೃದ್ಧಹಂಸಯುತಮಿಂದ್ರಹರಿದ್ಗಿರಿಯಂತನಂತರ

ಎಂದರೆ ವಿರೋಧ (ಮನ್ಮಥನು ಶಂಬರಾಸುರವೈರಿಯಾದ್ದರಿಂದ) ; (ii) ಮದಿಸಿದ ಆನೆಗಳ ವಿಹಾರಸ್ಥಾನವೂ, ನೀರ್ವಕ್ಕಿಗಳು ಹಾರಾಟದಿಂದ ಕೂಡಿದ್ದಿತು ಎಂದರೆ ವಿರೋಧವಿಲ್ಲ ; (i) ಅಟ್ಟಿಸಿಕೊಂಡು ಬರುತ್ತಿದ್ದ ಹುಲಿಗಳೂ, ತಪ್ಪಿಸಿಕೊಂಡು ಓಡುತ್ತಿದ್ದ ಜಿಂಕೆಗಳೂ ಇಲ್ಲದಿದ್ದರೂ, ಬೇಡಜಾತಿಯವರಿಗೆ ವಿಹಿತವಾದ ಕೆಲಸವಿದ್ದಿತು ಎಂದರೆ ವಿರೋಧ (ಹುಲಿಗಳಾಗಲೀ, ಜಿಂಕೆಯೇ ಮೊದಲಾದ ಮೃಗಗಳಿರಲಿಲ್ಲ, ಬೇಡರಿಗೆ ಕೆಲಸವಿತ್ತು ಎನ್ನುವುದು ವಿರೊಧ) ; ವಿಪರೀತ ಹಸಿವಿನಿಂದ ಕಾಡಿನಲ್ಲಿ ಜಿಂಕೆಗಳೂ, ಹಕ್ಕಿಗಳೂ ಸುಳಿದಾಡುತ್ತಿದ್ದು, ಬೇಡರಿಗೆ[1] ವಿಹತವಾದ ಬೇಟೆಯ ಕ್ರಿಯೆಯಿತ್ತು ಎನ್ನುವಲ್ಲಿ ವಿರೋಧವಿಲ್ಲ. ತಾಮ್ರಧಾತುವಿನ ಹೊಳಪು ಪ್ರಕಾಶಿಸುತ್ತಿದ್ದರೂ ಕಪಿಲವರ್ಣದಿಂದ ಕೂಡಿದ್ದಿತು ಎಂದರೆ ವಿರೋಧ ; (ii) ಮಾವಿನ ಮರದ ಮೇಲೆ ಹಕ್ಕಿಗಳೂ ಇದ್ದುವು, ನೂರಾರು ಕೋತಿಗಳೂ ಇದ್ದುವು ಎಂದರೆ ವಿರೋಧವಿಲ್ಲ. (i) ಯಾವಾಗಲೂ ರೂಪದಿಂದ ಶೋಭಿತವಾಗಿದ್ದರೂ ದೇಹಕಾಂತಿಯಿರಲಿಲ್ಲವೆನ್ನುವುದು ವಿರೋಧ ; (ii) ಸಮಸ್ತ ಮರಗಳೂ ಸಮೀಪದಲ್ಲಿದ್ದುವು, ಮನ್ಮಥಭಾವಗಳನ್ನು ಉದ್ದೀಪಿಸುತ್ತಿದ್ದಿತು ಎಂದರೆ ವಿರೋಧವಿಲ್ಲ. ಅಷ್ಟುಮಾತ್ರವೇ ಅಲ್ಲದೆ ೩೫. ಇಂದ್ರಕೀಲಪರ್ವತವು ಹಿಮಪರ್ವತದಂತೆ (i) ಒಳ್ಳೆಯ (ಅಮ-ಅಪಕ್ವವಾದ ಅಥವಾ ಕರಗದೇ ಇರುವ) ಮಂಜುಗಡ್ಡೆಗಳಿಂದ ಕೂಡಿದ್ದಿತು ; (ii) ಯಾವಾಗಲೂ ಮಾಹಾತ್ಮ್ಯದಿಂದ ಕೂಡಿದ್ದಿತು. ಅಸ್ತಗಿರಿಯಂತೆ (i) ಮಸಕಾದ ಮುಳುಗುತ್ತಿರುವ ಸೂರ್ಯನಿಂದ ಕೂಡಿದ್ದಿತು ; (ii) ಪವಿತ್ರ ವೃದ್ಧರಾದ ಯತಿಗಳಿಂದ ಕೂಡಿದ್ದಿತು. (i) ಉದಯಾಚಲದಂತೆ ಸೂರ್ಯನಿಂದ ಕೂಡಿದ್ದಿತು ; (ii) ಅಸಂಖ್ಯಾತವಾದ ಮಣಿಗಳ ಕಾಂತಿಯಿಂದ ಪೂಜ್ಯವಾಗಿದ್ದಿತು.

---

೧ ಶಬರೋ (ಕ) ೨-೨ ಮದನರಾಗ (ಠ) ೩-೩ ವೃತ್ರಿಯಾ (ಗ); ಪ್ಲುತಿಯಾ (ಚ); ಪೃತಿಯಾ (ವ) * ಕೆಲವು ಪ್ರತಿಗಳಲ್ಲಿ ಇಲ್ಲಿ "ವಿರೋಧಾಭಾಸ" ಎಂದು ಮುಂದಿನ ಗದ್ಯವನ್ನು ಕುರಿತು ಸೂಚನೆ ಕೊಟ್ಟಿದೆ.

1 ಶಬರ-ಬೇಡರು, ಶಬಲ-ಆಕಳು. ಅವಿಗ್ರಹ-ಕುರಿಗಳನ್ನು ಹಿಡಿಯುವ ತೋಳ. ಕಪಿಶತಾ-ಕಪಿಲವರ್ಣ ; ನೂರಾರು ಕೋತಿಗಳು. ಶಂಬರ-ನೀರು ; ಶಂಬರಾಸುರ.

ತ್ನವಹಿತಮಾದಿತೇಯನುಗದಂತೆ ಸುರಾಗಗಣಾವೃತಂಗಿ ಮನೋ
ಜ್ಞಮಲಯಭೂಧ್ರದಂತೆ ಮೃದುಯಾನ ಮರುದ್ರುಚಿರಂ ಮಹೀಧರಂ ೩೫

ಕರಮೆಸೆದತ್ತು ದೇವನಗದಿಂ ಬನದಿಂ ಬಿನದಂಬಡುತ್ತೆ ಸಂ
ಚರಿಪ ನಭಶ್ಚರಪ್ರಕರದಿಂ ಝರದಿಂ ನೆರೆದಿಂಬುವೆತ್ತ ಕಿ
ನ್ನರಕುಲದಿಂದೆ ರನ್ನಗವಿಯಿಂ ಪವಿಯಿಂ ಸವಿಯಿಂ ಪೊದಟ್ದ ಕಿಂ
ಪುರುಷರ ಗಾನದಿಂದೆ ಖಗದಿಂ ಮೃಗದಿಂ ನಗದಿಂದೆ ಕಂದರಂ ೩೬

ನಿಡುಜಡೆ ಬೆನ್ನೊಳಾಡೆ ಕಳಕಾಂಚಿಝಣತ್ಕೃತಿ ಪೊಣ್ಮೆ ತಳ್ತ ಪೊಂ
ಗೊಡವೊಲೆಗಳ್ ಕದಕ್ಕದಿಸೆ ಪೀವರವೃತ್ತನಿತಂಬಮುಂಡಲಂ
ಪೊಡರೆ ಮುಖಾಂಶುನೇತ್ರರುಚಿ ಪರ್ಬಿ ಪಳಂಚೆ ನಗಾಗ್ರದಿಂದೆ ದಿಂ
ಕಿಡುತೆ ನಭೋಂತದೊಳ್ ವಿಹರಿಪರ್ ಖಚರಾಂಗನೆಯರ್ ವಿಲಾಸದಿಂ ೩೭

ದೇವಗಿರಿಯೆನಿಸಿದ ಮೇರುಪರ್ವತದಂತೆ (i) ದೇವತೆಗಳಿಂದಲೂ ಪರ್ವತರಾಜಿಗಳಿಂದಲೂ ಸುತ್ತುವರಿದಿದ್ದಿತು ; (ii) (ಸುರ+ಅಗ ; ಅಥವಾ ಸು-ರಾಗ) ಕಲ್ಪವೃಕ್ಷಗಳಿಂದಲೂ, ವಿಶೇಷ ಅನುರಕ್ತರಾದಂತಹವರ ಸಮೂಹದಿಂದ ಕೂಡಿದ್ದಿತು. ಮನೋಹರವಾದ ಮಲಯಪರ್ವತದಂತೆ (i) ಮಂದಮಾರುತದಿಂದ ಕೂಡಿದ್ದಿತು ; (ii) ನಿಧಾನವಾಗಿ ಓಡಾಡುತ್ತಲಿದ್ದ ದೇವತೆಗಳಿಂದ ಕೂಡಿದ್ದಿತು. ಟಿಪ್ಪಣಿ :-ಅನಂತರತ್ನ=ಅನಂತ= ಆಕಾಶದ ರತ್ನ, ಸೂರ್ಯ. ೩೬. ತಪ್ಪಲುಪ್ರದೇಶವು ಕಲ್ಪವೃಕ್ಷಗಳಿಂದಲೂ, ಉದ್ಯಾನ ವನಗಳಿಂದಲೂ, ವಿನೋದದಿಂದ ವಿಹರಿಸುತ್ತಿದ್ದ ಗಗನಚರರ ಗಡಣದಿಂದಲೂ, ನಿರ್ಝರ ಗಳಿಂದಲೂ ರಮಿಸಿ, ಆನಂದದಿಂದ ಕೂಡಿದ ಕಿಂಪುರುಷರಿಂದಲೂ, ರತ್ನದ ಗವಿ ಗಳಿಂದಲೂ, ಸಿಡಿಲಿನಿಂದಲೂ, ಪರಸ್ಪರಾನುರಕ್ತರಾದ ಕಿಂಪುರುಷರ ಗಾನದಿಂದಲೂ, ಹಕ್ಕಿಗಳಿಂದಲೂ, ಗಿಡಮರಗಳಿಂದಲೂ ಶೋಭಿಸುತ್ತಿದ್ದಿತು. ೩೭. ಖಚರಾಂಗನೆಯರು ಬೆಟ್ಟದ ತುದಿಯಿಂದ ನೆಗೆದು ಆಕಾಶ ಮಧ್ಯದಲ್ಲಿ ವಿಳಾಸದಿಂದ ವಿಹರಿಸುತ್ತಿದ್ದರು. ಆಗ ಅವರ ನೀಳವಾದ ಜಡೆಗಳು ಹಿಂಭಾಗದಲ್ಲಿ ಜೋಲುತ್ತಿದ್ದುವು. ಡಾಬಿನ ಕಿರುಗೆಜ್ಜೆಗಳು ಮಧುರವಾಗಿ ನಿನದಿಸುತ್ತಿದ್ದುವು. ಉಬ್ಬಿದ ಕಲಶೋಪಮಾನವಾದ ಮೊಲೆಗಳು ಒಂದನ್ನೊಂದು ಒತ್ತುತಿದ್ದುವು. ಕೊಬ್ಬಿ ದುಂಡಗಿದ್ದ ನಿತಂಬಗಳು ಅಲುಗುತ್ತಿದ್ದುವು. ಮುಖದ ಕಾಂತಿಯೂ, ಕಣ್ಣುಗಳ ಹೊಳಪೂ ಎತ್ತಲೂ ಹರಡುತ್ತಾ ಕೋರೈಸು

---

೧ ಣಾನ್ವಿತಂ (ಯ) ೨ ದೇವವನ (ರ)

ಸುರಧನು ರನ್ನವಲ್ಲಣದ ಮಾಟ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿ
ಸ್ಫುರಿತಖಲೀನದಂತಿರೆ ಘನಧ್ವನಿ ಹೇಷಿತವಾಗೆ ತುಂಗವಾ
ರ್ಧರಮದು ತೋಱೆ ನೀಲತುರಗಂಬೊಲದಂ ಪದೆದೇಱಿ ಮೀಱಿ ನಿ
ರ್ಭರದ ಗತಿಪ್ರಪಂಚಮನೊಡರ್ಚುವರಚ್ಚರಿಯರ್ ಸುರಾಧ್ವದೊಳ್ ೩೮

ಶಾರ್ದೂಲ ಮಿಂದಂತಾಗಿರೆ ಮೆಯ್ ಮರಂದರಸದಿಂ ಪೂಗೊಂಚಲೊಳ್ ಪೊಕ್ಕು [1]ನ
ಣ್ಪಿಂದಂ[1] ಕಂಪಿಡಿದೊಳ್ಳರ[2]ಲ್ದಿಱಿಪು ಮಂದಾರಾದಿ ಭೂಜಂಗಳೊಳ್
ತಂದೊಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾವಿಳಾ
ಸಂದೋಱುತ್ತಿನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ ೩೯

ಉತ್ಪಲ ಕಿಂನರಿಯಿಂಚರಂಬಿಡಿದು ನುಣ್ಚರದಿಂ ಸವಿ ಸೂಸೆ ಪಾಡುವಾ
ಕಿಂಸರಿಯಂಕದೊಳ್ ನಸುಮುಗುಳ್ಚಿದ ಕಣ್ ಕಡೆವಾಯ ದೂರ್ವೆ ಚೆ
ಲ್ವಿಂ ನಿಮಿರ್ದಂಗಮೆತ್ತಿದ ಕೊಡಂಕೆ ಜವಂಗೆಡದೇಟ್ಟಿ ರೋಮಹ
ರ್ಷಂ ನೆಱೆಯೊಹಿಪ್ಪೆ ನಲ್ಗೊಣಸು ಪಟ್ಟೆಸೆದಿರ್ದುದದೊಂದು ತಾಣದೊಳ್ ೪೦

ಚೆಂದಳಿರ್ದೋಂಗಲಿಂ ಮಿಸುಪಶೋಕೆ ಫಲಾವಳಿ ತೀವಿ ತೋರ್ಪ ಮಾ
ಕಂದಮರಲ್ಗಳಿಂ ಪುದಿದ ಚಂಪಕಮುದ್ಗಮಮಂಜರೀವಿಳಾ

ವಂತಿದ್ದುವು. ೩೮. ಅಪ್ಸರಸ್ತ್ರೀಯರು ಅಂತರಿಕ್ಷಮಾರ್ಗದಲ್ಲಿ ಎತ್ತರವಾಗಿದ್ದ ಮೋಡಗಳನ್ನು, ಕಪ್ಪುಕುದುರೆಯನ್ನೇರುವಂತೆ ಉತ್ಸಾಹದಿಂದ ಹತ್ತಿಕೊಂಡು, ಕಷ್ಟತರವಾದ ರೀತಿಯಲ್ಲಿ, ಶೀಘ್ರಗತಿಯಿಂದ ಓಡಿಸುತ್ತಿರುವಂತೆ ಕಾಣಿಸುತ್ತಿತ್ತು. ಬೆಳಗುತ್ತಿದ್ದ ಕಾಮನಬಿಲ್ಲು ಕುದುರೆಗೆ ಹೊದಿಸಿದ್ದ ಮೇಲುಹೊದಿಕೆಯಂತೆ, ಬಳ್ಳಿಮಿಂಚುಗಳು ಕಡಿವಾಣದಂತೆ, ಗುಡುಗು ಕುದುರೆಯ ಕೆನೆತದಂತಿದ್ದುವು. ೩೯. ದೇವತಾಸ್ತ್ರೀಸಮೂಹವು ಕಲ್ಪವೃಕ್ಷಗಳ ಮಕರಂದಸಿಕ್ತವಾದ ಹೂಗೊಂಚಲುಗಳನ್ನು ಸಮೀಪಿಸಿ, ಸಂತೋಷದಿಂದ ಒಳ್ಳೊಳ್ಳೆಯ ಹೂಗಳನ್ನು ಬಿಡಿಸಿ ತಂದು, ಅವುಗಳಿಂದ ಸೊಗಸಾದ ಪುಷ್ಪಾಭರಣಗಳನ್ನು ರಚಿಸಿ, ತಮ್ಮ ಅಂಗಗಳಲ್ಲಿ ಅಚ್ಚುಕಟ್ಟಾಗಿ ಧರಿಸಿಕೊಂಡು, ಸದಾ ಪ್ರಿಯಜನರೆದುರಿನಲ್ಲಿ ಒಯ್ಯಾರದಿಂದ ಮೆರೆಯುವರು. ೪೦. ಕಿನ್ನರಿಯೊಬ್ಬಳು ಕಿನ್ನರಿ ವಾದ್ಯವನ್ನು ಶ್ರುತಿಮಾಡಿ, ಇಂಪಾದಧ್ವನಿಯಿಂದ, ಸುಖವಾಗಿ ಹಾಡುತ್ತಿದ್ದಳು. ಅವಳ ತೊಡೆಯಲ್ಲಿ ಜಿಂಕೆಯಮರಿಯು ಕಣ್ಣುಗಳನ್ನು ಅರೆಮುಚ್ಚಿ, ಬಾಯಿಯ ಅಂಚಿನಲ್ಲಿ ಎಳೆಯ ಹುಲ್ಲಿರಲು, ನೀಳವಾಗಿ ಮೈಯನ್ನು ಚಾಚಿ, ಕಿವಿಗಳನ್ನು ನಿಮಿರಿ, ಮೈಯಲ್ಲಿ ಪುಳಕಂಗಳೇಳುತ್ತಿರಲು, ಆ ಗಾನದ ಸವಿಯನ್ನು ಕೇಳಿ ಆನಂದಿಸುತ್ತಿತ್ತು. ೪೧. ವನಗಳಲ್ಲಿ ಕೆಂಪು ಚಿಗುರಿನಿಂದ ಕಂಗೊಳಿಸುತ್ತಲಿದ್ದ ಅಶೋಕವೃಕ್ಷಗಳೂ, ಫಲಭರಿತವಾದ ಮಾವಿನ

---

೧-೧ ನ । ಲ್ಪಿಂದಂ (ರ, ಲ) ೨ ದುಳ್ಳರ (ಯ) ೩ ನೆರೆದೊ (ಯ, ರ, ಲ)

ಸುದಳೆದಿರ್ಪ ಮಾಧವಿ ಮುಗುಳ್ತೊಱಗಿರ್ಪ ಮನೋಜ್ಞಮಲ್ಲಿಕಾ
ಬೃಂದಮನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ ೪೧

ಚಂಪಕ ಘನವಿಕಚಪ್ರಸೂನಹಸನಂ ಮಿಗೆ ಬಾನ್ಗೊಗೆದೆಟ್ಟು ನೀಟ್ದಿ ಕೊಂ
ಬೆನಿಪ ಭುಜಾಗ್ರಮಂ ನೆಗಪಿ ಚಂಚಲಪಲ್ಲವಪಾಣಿಯಿಂ ಪಿಕ
ಸ್ವನಮುಮದೊಪ್ಪೆ ಕೂಗಿ ಪೊಣರಲ್ ಕರೆವಂತೆಸೆಗುಂ ಸುರೇಂದ್ರನಂ
ದನರಮೆಯಂ ತದದ್ರಿತಟನಂದನಲಕ್ಷ್ಮಿ ವಿಲಾಸದೇಟ್ಗೆಯಿಂ ೪೨

ವಚನ ಮತ್ತಮಲ್ಲಿ ಸಾಂದ್ರಮರಂದರಸಭರಭರಿತ ಸುರಭಿಯುತ೧ ವಿಕಚಕುಸುಮ ಮಂಜುಮಂಜರೀ ಪುಂಜ೨ದೊಳಿರದೆಱಗಿ೨ ಪೊಱಮಡದೆ ನಿಲುಂಬಿ ನಿಂದು, ನಿಬಿಡಮೆನೆ ಮುಸುಂಕಿದ ಮಧುಮುದಿತ ಮಧುಕರ೩ಪ್ರತಾನದಿಂ ಶ್ಯಾಮಳತೆವೆತ್ತು ನಿಜಮೂಲದೊಳ್ ಬಳಸಿ ತಳಿರ್ತ ಚೆಂದಳಿರ್ಗಳುಟ್ಟ ಪೀತಾಂಬರದಂತಿರೆ, ಕಳಕಂಠಕಳರವಂ ಪಂಚಮದ ೪ಬಿಂಚರಳ೪ದಿಂಚರವೆನಿಸೆ, ಸರಭಸಂ ಪರಿತಂದು

ಮರಗಳೂ, ಪುಷ್ಪಗಳಿಂದ ತುಂಬಿದ್ದ ಸಂಪಗೆಗಿಡಗಳೂ, ಮೊಗ್ಗುಗಳೊಡೆದು ಕಂಗೊಳಿಸುವ ಗುಲಗಂಜಿ ಬಳ್ಳಿಗಳೂ ಮೊಗ್ಗುಗಳಿಂದ ನಿಬಿಡವಾಗಿದ್ದು, ಗಿಡಕ್ಕೆ ಹಬ್ಬಿಕೊಂಡಿದ್ದ ಮಲ್ಲಿಗೆಬಳ್ಳಿಗಳೂ, ಎಲ್ಲಾ ಬಗೆಯ ಪುಷ್ಪಗಳೂ ಬೇಕಾದಷ್ಟು ಇದ್ದುವು. ೪೨. ಇಂದ್ರಕೀಲಪರ್ವತದ ತಪ್ಪಲುಗಳ ಉದ್ಯಾನವನಲಕ್ಷ್ಮಿಯು ಸುರೇಂದ್ರನ ನಂದನ ವನಲಕ್ಷ್ಮಿಯನ್ನು ತನ್ನ ಅತಿಶಯವಾದ ಬೆಡಗುಗಳಿಂದ ಮೀರಿಸಿತ್ತು. ಒತ್ತೊತ್ತಾಗಿ ಅರಳಿ ನಳನಳಿಸುತ್ತಿದ್ದ ಹೂಗಳು ನಗೆಯಂತೆ, ಅಂತರಿಕ್ಷಕ್ಕೆ ಚಾಚಿದ್ದ ಮರಗಳ ಕೊಂಬೆಗಳು ಮೇಲೆತ್ತಿದ ತೋಳ್ಗಳಂತೆ, ತರಳವಾದ ಚಿಗುರುಗಳು ಹಸ್ತದಂತೆ, ಕೋಗಿಲೆಗಳ ಕೂಜನವೇ ಮಂಜುಳಧ್ವನಿಯಂತಿದ್ದು ತನ್ನ ಸೌಂದರ್ಯ, ಲಾವಣ್ಯಗಳೇ ಅಧಿಕತರವೆಂದು ಇಂದ್ರನಂದನವನದೊಡನೆ ಕಾದಾಟಕ್ಕೆ ಕರೆಯುವಂತಿದ್ದಿತು. ವಚನ : ಮತ್ತೆ ಆ ವನಗಳಲ್ಲಿ ಮಕರಂದರಸಭರಿತವಾದ, ಪರಿಮಳಯುಕ್ತವಾದ ಅರಳಿದ ಹೂಗೊಂಚಲುಗಳು ತುಂಬಿ ಮನೋಹರವಾಗಿದ್ದುವು. ಅವುಗಳಲ್ಲಿ ಜೇನಿಗಾಗಿ ಎರಗಿದ ದುಂಬಿಗಳು ಹೊರಬರಲಾರದೆ ನಿಶ್ಚೇಷ್ಟಿತವಾಗಿದ್ದುವು. ಜೇನು ಕುಡಿದು ಮದಿಸಿದ್ದ ತುಂಬಿಗಳು ದಟ್ಟೈಸಿ ಮುಸುಕಿದ್ದುದರಿಂದ ಪುಷ್ಪಗಳು ಕಪ್ಪಗಿದ್ದಂತಿದ್ದಿತು. ಬೆಟ್ಟದ ಬುಡದಲ್ಲಿ ಚಿಗುರಿ ಕೆಂಬಣ್ಣದಿಂದ ಕಂಗೊಳಿಸುತ್ತಿದ್ದ ಮರಗಳು ಪರ್ವತವು ಪೀತಾಂಬರವನ್ನುಟ್ಟಂತೆ ಕಾಣಿಸುತ್ತಿತ್ತು. ಪಂಚಮಸ್ವರದಿಂದ ಕೂಜನ ಮಾಡುತ್ತಿದ್ದ ಕೋಗಿಲೆಗಳ ಧ್ವನಿಯು ವಾದ್ಯ ನುಡಿಸಿದಂತೆ ಮಧುರನಾದದಿಂದ ಕೂಡಿದ್ದಿತು. ರಭಸದಿಂದ ಬೀಸಿದ ಗಾಳಿಯು

---

೧ ಯುಕ್ತ (ರ) ೨-೨ ದೊಳೆರಗಿ (ಯ) ೩ ಪ್ರಕರ (ಚ, ವ) ಪ್ರತಾಪ (ರ) ೪-೪ ಪಿಂಛ (ಯ)

ಚಕ್ರಾನಿಲವಲೆದೊಲೆದೆತ್ತಿದರಲ ಪರಾಗಪಟಲಂ ಮೇಲೆ ಪರಿಕಲಿಸಿ ಪರ್ಬಿ, ಬಿತ್ತರವಾಗಿ ಪತ್ತುಗೆಗೊಂಡೆತ್ತಿದ ಗೋವರ್ಧನಗಿರಿಯ ಪಿರಿಯ ಸಿರಿಯನೊಳಗುಗೊಳಿಸೆ, ಸಾಕ್ಷಾತ್ ಕೃಷ್ಣನಂತೆ ಕಣ್ಗೆವಂದ ರಸಾಲರಸಾಲುಪಮುಂ; ಪಚ್ಚೆವರಲಂತೆಸೆವ ಪಸಿರ್ಮಿಡಿಗಳಿಂ, ಕೆಂಬರಲೆಂಬಂತೆ ಸಾರತರವಾದ ದೋರೆವಣ್ಗಳಿಂದಿಂದ್ರನೀಲದಂದಂಬಡೆದು ವಿಲಸಿತವಾದ ಕಳಿತವಣ್ಗಳಿಂ ಮಣಿಗಣಮನೆ ಕಾಯ್ತೊಳಗುವ ಕಲ್ಪಕುಜದಂತೆ ರಾಜಿಸಿತವಾದ ರಾಜಜಂಬೂಕುಜಮುಂ; ಧರಾವಧು ಮುಳಿಗಚಿದು ಮುನ್ನಂ ತನ್ನ ನೋವಿದ ಲೇಸನೋಸರಿಸದೆ ನೆನೆನೆನೆದು ಜೀಮೂತವಾಹಂಗೆ ನಿಜಸುಧಾರಸಮಂ ಮರಕತಕಳಶದೊಳ್ ತೀವಿ ನಿಡುದೋಳಂ ನೆಗಪಿ ಮೇಗಣ್ಗೆ ನೀಡುಂ ನೀಡಿದಪಳೆಂಬಂತೆ ರಂಜಿಪ ನಾರಿಕೇಳಮುಂ; ರತ್ನಗರ್ಭೆ ತನ್ನ ಸಿರಿಯಂ ಖಚರರ್ಗಱಿಪಲೆಳಸಿ ಮರಕತಮಣಿಯ ಚಲಳಿಗುಚ್ಛಂಗಳಿಂ ತೋರಣಂಗಟ್ಟಿದಂತೆ ಪಸಿರ್ಗಾಯ್ಗೊಂಚಲ್ಗಳಿಂ ಕಣ್ಗೊಳಿಪ ಕೌಂಗುಮರಂಗಳುಂ; ವಿಜಯಯಾತ್ರೆಗೆ ತಳರಲುಜ್ಜುಗಿಪ ಮಕರಧ್ವಜಮಹಾರಾಜಂಗೆ ಶುಭಮುಹೂರ್ತದೊಳ್ ಮಧುಸಚಿವನಿಂಬಱಿದು ಪೊಯ್ದಿಂದ್ರಗೋಪದ ಗೂಡಾರದಂತೆ ಕಾಂತವಾದ ಕೆಂದಳಿರ್ ತೀವಿದ ಕಂಕೇಲ್ಲಿಯುಂ; ಒಬನಂಬೊಕ್ಕು ಬಾಯ್ದಿಡುವ

ಹೂಗೊಂಚಲುಗಳನ್ನು ಅಲುಗಾಡಿಸಿ, ಅವುಗಳ ಪರಾಗವು ಮೇಲೇಳುವಂತೆ ಮಾಡಲು ದಟ್ಟವಾಗಿ ಮೇಲೆ ಹರಡಿದ ಪುಷ್ಪಪರಾಗವು, ಮೇಲಕ್ಕೆ ಎತ್ತಿಹಿಡಿದ ಗೋವರ್ಧನ ಗಿರಿಯಂತೆ ಶೋಭಿಸಲಾಗಿ ಅಲ್ಲಿದ್ದ ಮಾವಿನಮರವು ಶ್ರೀಕೃಷ್ಣನಂತೆ ಕಂಗೊಳಿಸಿತು. ಪಚ್ಚೆಯ ಹರಳುಗಳಂತೆ ಹಸಿರುಕಾಯಿಗಳು, ಕೆಂಪಿನ ಹರಳುಗಳಂತೆ ರಸಭರಿತವಾದ ದೋರೆಹಣ್ಣುಗಳು, ಇಂದ್ರನೀಲಮಣಿಗಳಂತೆ ಕಂಗೊಳಿಸುವ ಮಾಗಿದ ಹಣ್ಣುಗಳೂ ಇದ್ದುದರಿಂದ ರತ್ನಗಳನ್ನೇ ಹೊತ್ತು ಬಾಗಿದ್ದ ಕಲ್ಪವೃಕ್ಷದಂತೆ ಅರನೇರಿಳೆ ಹಣ್ಣಿನ ಮರವು ಮೆರೆಯುತ್ತಿದ್ದಿತು. ಭೂರಮಣಿಯು ಹಿಂದೆ ತನ್ನನ್ನು ಮಳೆಗರೆದು ಪೋಷಿಸಿದ ಇಂದ್ರನಿಗೆ ಪ್ರತ್ಯುಪಕಾರ ಮಾಡಲಿಚ್ಛಿಸಿ ಅಮೃತಸದೃಶವಾದ ಎಳನೀರನ್ನು ಪಚ್ಚೆಯ ಕಳಸಗಳಲ್ಲಿ ತುಂಬಿ, ಉದ್ದವಾಗಿರುವ ತನ್ನ ತೋಳನ್ನೆತ್ತಿಹಿಡಿದು ಧಾರಾಳವಾಗಿ ಕೊಡುತ್ತಿರುವಳೆಂಬಂತೆ ತೆಂಗಿನಮರಗಳು ಕಂಗೊಳಿಸುತ್ತಿದ್ದುವು. ರತ್ನಗರ್ಭೆಯೆನಿಸಿದ ಭೂಮಿಯು ತನ್ನ ಐಶ್ವರ್ಯವನ್ನು ಖೇಚರರಿಂದ ದೇವತೆಗಳಿಗೆ ತಿಳುಹುವ ಇಚ್ಛೆಯಿಂದ ಪಚ್ಚೆಮಣಿಗಳ ಗೊಂಚಲುಗಳನ್ನು ತೋರಣವಾಗಿ ಕಟ್ಟಿರುವ ಹಾಗೆ ಹಸಿರುಕಾಯಿಗಳ ಗೊಂಚಲುಗಳನ್ನು ಬಿಟ್ಟಿದ್ದ ಅಡಿಕೆಮರಗಳು ಶೋಭಿಸುತ್ತಿದ್ದುವು. ವಿಜಯಯಾತ್ರೆಗೆ ಹೊರಡಲುದ್ಯುಕ್ತನಾದ ಮನ್ಮಥಮಹಾರಾಜನಿಗೆ, ಶುಭಮುಹೂರ್ತದಲ್ಲಿ ಕಾಣಿಸಿಕೊಂಡ ವಸಂತನೆಂಬ ಅಮಾತ್ಯನು, ಅನುಕೂಲವಾಗಲೆಂದು ಎತ್ತಿಸಿದ ಇಂದ್ರಗೋಪ ಹುಳುಗಳಂತೆ ತಳತಳಿಸುತ್ತಿದ್ದ ಪಟಗೃಹದಂತೆ ಅಶೋಕವೃಕ್ಷವು ಕಂಗೊಳಿಸುತ್ತಿದ್ದ ವಿರಹಿಗಳ ಬಿಸಿಯುಸುರು ತಗಲಿ, ಮನ್ಮಥನ ರತ್ನಗಳ ಡಬ್ಬಿಯು ಬಿರಿದು, ತನ್ನಲ್ಲಿದ್ದ

---

೧-೧ ನಿಲನಲೆ (ಯ, ಲ) ; ನಿಲನಿಂ (ಜ) ೨ ಕಳಿತ (ಜ, ಕ) ೩ ವಿರಾಜಿ (ಜ) ೪ ಚೆಲ್ವ (ಚ) ೫ ಗುಚ್ಛಂಗಳಿಂ (ಯ) ೬-೬ ಒನವಂ ಪೊಕ್ಕು (ಚ)

ಬಿರಯಿಂಗಳ ಬಿಸುಸುಯ್ ಸುಡೆ ಬಿಕ್ಕನೆ ಬಿರಿದ ರತಿಪತಿಯ ಮಣಿಕರಂಡಕದ ಚೆಲ್ವಂ ತಳೆದು ಬೀಡೆ ವರಿದು ಬಿಟ್ಟ[1] ಸೂಸುವ ಪಣ್ಗಳಿಂ ಸಂಗಳಿಸಿದ ದಾಡಿಮಂಗಳುಂ; ಪೂವಲಿಯಿಂ ಕೆದರ್ದು ಲತಾನರ್ತಕಿಯರಾಡೆ, ಮಧುಕರಂಗಳ್ ಪಾಡೆ, ಕಳಕಂಠಿ[2]ಕಾಹಳಿಕಾ[2]ರವಂ ವಿಜೃಂಭಿಸೆ, ಶುಕವಂದಿವೃಂದಂ ಪೊಗೞೆ, ಗಂಧವಾಹಂ[3] ಸುಗಂಧಸಾರಮನುಪಾಯನಂಗೆಯ್ಯೆ, ಮಧುಸಚಿವಂ ಮೆಯ್ವೆರ್ಚಿ ಬೆಸನಂ ಸಾರ್ದು ಸಂಮುಖದೊಳ್ ಸಂಭ್ರಮಿಸಿ ನಿಲೆ, ಮಾಕಂದಾದಿ ಸುಭಟರ್ ನಿಜಾಸ್ತ್ರಂಗಳಂ ಪಿಡಿದು ಬೞಿಸಂದು ಬಳಸಿ ನಿಂದೋಲಗಿಸಿರೆ, ಸುರಯಿಯರಲ ಪರಾಗಪುಂಜದ ಪೊಂಜಗಲಿಯೊಳ್ ಪಸರಿಸಿದ ಕುಸುಮವಿಸರದೆಸಳ ಪೊಸಪಸೆಯೊಳೊಸಗೆ ಮಿಗೆ ರತಿಯುವತಿವೆರಸು ಗಾಡಿಯಿಂ ಕುಳ್ಳಿರ್ದ ಮದನ ಮಹೀರಮಣನ ನಯನೋತ್ಸವಕ್ಕೆ ಕಟ್ಟಿದಿರೊಳ್ ಸರಿಯೂಡಿನ ಬಿಜಿ[3]ಸುಗಟ್ಟಿ ರಚಿಸಿದ ಕುರುಜೊಂಬಂತಿ ರಲಲರ್ವುಡಿಯಂ ಸೂಸುವ ಕನಕರುಚಿನಿಚಿತ ಸುಮನೋಗಣದಿನಲಂಕೃತಿವೆತ್ತು ಸೊಂಪುಗಜಿ[3]ವ ಚಂಪಕಪ್ರತಾನಮುಂ; ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಜಿ[3]ಸಿ ಪೊರೆದ ಮಣಿಗರ್ಭೆ ಗಣೆಯರಂ ಬಾಗಿ ಬಳ್ಕಿ ಮಣಿವ ಮಾೞ್ಕೆಯಿಂ ಪಣ್ತು ಬಿಣ್ಗೊನೆಯಿಂದೆಱಗಿ ನಿಂದ ರಾಜಕದಳಿಗಳುಂ;

ರತ್ನಗಳನ್ನು ಹೊರಗೆ ಚೆಲ್ಲುತ್ತಿದೆಯೋ ಎಂಬಂತೆ ಮನೋಹರವಾದ ಹಣ್ಣುಗಳಿಂದ ತುಂಬಿದ ದಾಳಿಂಬೆಯ ಗಿಡಗಳಿದ್ದುವು; (ದಾಳಿಂಬೆ ಹಣ್ಣು ಬಿರಿದು ಬೀಜಗಳು ಕಾಣಿಸುತ್ತಿದ್ದುವು.) ಹೂಗಳನ್ನು ಚೆಲ್ಲಿ ನರ್ತಕಿಯರಂತೆ ಲತೆಗಳು ಅಲುಗುತ್ತಿದ್ದುವು. ದುಂಬಿಗಳು ಹಾಡುತ್ತಿದ್ದುವು. ಕೋಗಿಲೆಗಳ ಧ್ವನಿಯು ಕಹಳೆಯಂತೆ ಮೊಳಗುತ್ತಿದ್ದಿತು. ಗಿಳಿಗಳೆಂಬ ವಂದಿಗಳು ಹೊಗಳುತ್ತಿದ್ದರು. ಗಾಳಿಯು ಪರಿಮಳಸಾರವನ್ನು ಕಾಣಿಕೆಯಾಗಿ ಒಪ್ಪಿಸುತ್ತಿದ್ದನು. ವಸಂತನೆಂಬ ಮಂತ್ರಿಯು ಆಜ್ಞೆಯನ್ನು ನಿರೀಕ್ಷಿಸುತ್ತಾ, ಉತ್ಸಾಹದಿಂದ ಸಮೀಪಿಸಿ ಠೀವಿಯಿಂದ ನಿಂತಿದ್ದನು. ಮಾವು ಮೊದಲಾದ ಸುಭಟರು ತಂತಮ್ಮ ಆಯುಧಗಳನ್ನು ಹಿಡಿದು, ಸಮೀಪದಲ್ಲಿ ಬಳಸಿನಿಂತು ಓಲಗಿಸುತ್ತಿದ್ದರು, ಸುರಗಿಪುಷ್ಪದ ಪರಾಗವು ರಾಶಿಯಾಗಿ ಬಿದ್ದು, ಅದು ಚಿನ್ನದ ಜಗುಲಿಯಂತೆಯೂ, ಅದರ ಮೇಲೆ ಉದುರಿದ್ದ ಹೂಗಳ ರೇಕುಗಳು ಹಾಸಿದ ಹೊಸ ಹಾಸಿಗೆಯಂತೆಯೂ ಇರಲು, ಅಲ್ಲಿ ರತಿರಮಣಿಯೊಡನೆ ಕಾಮದೇವನು ಸಂತೋಷದಿಂದ ಮಂಡಿಸಿದ್ದನು. ಅವನ ಕಣ್ಗಳಿಗೆ ಹಬ್ಬವನ್ನುಂಟು ಮಾಡಲು ಎದುರಿಗೆ ಬಾಣಬಿರುಸುಗಳನ್ನು ಕಟ್ಟಿ ರಚಿಸಿದ ಸಣ್ಣ ತೇರಿನಂತೆ ಸಂಪಗೆಯ ಮರಗಳು ಸುವರ್ಣಕಾಂತಿಯುಳ್ಳ ಹೂಗೊಂಚಲುಗಳಿಂದ ಪರಾಗವನ್ನು ಚೆಲ್ಲುತ್ತಾ ಹರ್ಷವನ್ನುಂಟುಮಾಡುತ್ತಿದ್ದುವು. ಹಿಂದೆ ತನ್ನನ್ನು ಮೆಚ್ಚಿ, ಹೊತ್ತು ಬೆಳಸಿ, ಕಾಪಾಡಿದ ಭೂದೇವಿಗೆ ಬಹಳ ನಮ್ರತೆಯಿಂದ ಬಾಗಿ, ಭೀತಿಯಿಂದ ನಡುಗಿ, ನಮಸ್ಕರಿಸುವಂತೆ ಹಣ್ಣುಗಳಿಂದ ತುಂಬಿದ್ದ ಗೊನೆಯ ಭಾರದಿಂದ ಬಗ್ಗಿನಿಂತ ರಾಜಬಾಳೆಯ ಗಿಡಗಳಿದ್ದುವು. ಒಂದು ಹಣ್ಣಿನಿಂದಲೇ ಅನೇಕರನ್ನು ತೃಪ್ತಿಪಡಿಸಬಲ್ಲ

---

೧ ಬೀಜಂ (ಗ, ತ, ವ) ೨-೨ ಕಹಳೀಕಳ (ಯ) ೩ ವಹಂ (ಕ, ಚ, ತ)

ನಿಜೈಕಫಲದಿಂ ಪಲಂಬರುಂ ತಣಿಪಲ್ ಸಮರ್ಥಮಾಗಿ ಬಹುಫಲಂಗಳಿನೊರ್ವನುಂ ತಣಿಪುಗಿವನ್ಯ ವನ್ಯ೧ ತರುಗಳುಂ; ನಿಜಸುರಭಿಗೆಱಗುವ ಪೞಮೆವಱಿದುಱುಗಲವಱ ರವವ್ಯಾಜದಿಂ ನಕ್ಕಪ್ಪುದೆನಿಸಿ, ಸುಜನನಂತೆ ಬಹುಕಂಟಕಂಬಡೆ೨ದಿರ್ದುಮನ್ಯರ್ಗೆ೨ ಹಿತಮಂ ಸಾರ್ಚಲೆಳಸುವ ಫಲಂಗಳಿಂ ತಳ್ತ ಬಕ್ಕಿವಲಸುಗಳುಂ; ನಂದನದೊಳಂದಂಬಡೆದು ನಲಿದಾಡುವ ಕಲಾಪಿಗಳ ಕೆಳೆತನಕ್ಕೆಟ್ಟಂದು ನಿಂದ ಕಾರ್ಮುಗಿಲಂತೆ ಪೆರ್ಮೆವಡೆದ ತರುಣತಮಾಲತರುಗಳುಂ; ವನವನಧಿಯ ಬಡಬಶಿಖಾವಹನನೆನೆ ಮನೋಜ್ಞಮಾಗಿ ಪೂತೊಱಗುವ ಕಿಂಶುಕಸಮುದಯಮುಂ; ತಂ೩ಬೆಲರೆಂಬ ಪೊಂಬರದನಲರ್ಪೊನ್ನಂ ಪರ್ಣಕಪೋಱಪಲ ದೊಳೊರೆಯೆ ಸುರಿದು ಪರಿದ ಪೊಂಬುಡಿಯೆಂಬಾತಿಂಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರಯಿಯುಂ; ಪೊಂದಳಿಗೆದೋರಣಮನೋರಣದಿಂ ಕಟ್ಟಿದಂತಲರ್ದ ಕುಸುಮಂಗಳಿಂ ಕಣ್ಗೊಳಿಪ ಕರ್ಣಿಕಾರಂಗಳುಂ ; ಕುಮುದಾಮೋದದೊಳ್ ಪೊರೆದಳಿ ಹಿಮಕರಸುಧಾಕಿರಣದ ತಿರುಳಂತೆ ರಮಣೀಯಮಾದ ಪರಿಮಳದ ಪಗಿಸಮಂ ಕಂದರ್ಪ೫ಸಹಚರಂ ಪರಿಸುವ೫ ಕರ್ಪೂರಕದಳಿಗಳುಂ ; ಗಿಳಿ ಕರ್ದುಂಕೆ ಸುರಿವ ಪರಿಪಕ್ವಫಲರಸದಿಂ ನೆಲನೆಲ್ಲಮಂ ಪರ್ಬಿ ಪಸರಿಸಿ ಪದಂಗೊಳಿಪ ಸರಸತರ

ಗಿಡಗಳೂ, ಅನೇಕ ಫಲಗಳಿಂದ ಒಬ್ಬನನ್ನು ತೃಪ್ತಿಪಡಿಸಬಲ್ಲ ಇತರ ಮರಗಳೂ ಆ ಕಾಡಿನಲ್ಲಿದ್ದುವು. ಹಲಸಿನಹಣ್ಣುಗಳ ಸುವಾಸನೆಗೆ ಮರಿದುಂಬಿಗಳ ಗುಂಪು ಎರಗುತ್ತಿದ್ದಿತು; ಅದನ್ನು ಕಂಡು ದುಂಬಿಗಳ ಝೇಂಕಾರಶಬ್ದದಿಂದ ಹಲಸು ನಗುವಂತಿದ್ದಿತು. ತನಗೇ ತೊಂದರೆ (ಕಂಟಕಂಬಡೆದು)ಗಳಿದ್ದರೂ ಇತರರಿಗೆ ಸಹಾಯವನ್ನು ಮಾಡಲಪೇಕ್ಷಿಸುವ ಸಜ್ಜನರಂತೆ, (ಕಂಟಕಬಡೆದು) ಮುಳ್ಳುಗಳಿಂದ ಕೂಡಿದ್ದರೂ ರುಚಿಯಾದ ಹಣ್ಣುಗಳಿಂದ ನಿಬಿಡವಾಗಿದ್ದ ಹಲಸಿನ ಮರಗಳಿದ್ದುವು. ವನಗಳಲ್ಲಿ ಆನಂದದಿಂದ ನರ್ತನ ಮಾಡುತ್ತಲಿದ್ದ ನವಿಲುಗಳ ಸ್ನೇಹವನ್ನಪೇಕ್ಷಿಸಿ ಬಂದು ನಿಂತ ಕಪ್ಪುಮೋಡಗಳಂತೆ ಎಳೆಯ ಹೊಂಗೆಮರಗಳು ಕಾಣಿಸುತ್ತಿದ್ದುವು. ವನವೆಂಬ ಸಮುದ್ರದಲ್ಲಿ ಹುಟ್ಟಿದ ಬಡಬಾಗ್ನಿಯಂತೆ ಹೂಗಳಿಂದ ತುಂಬಿ ಬಾಗುತ್ತಿದ್ದ ಮುತ್ತುಗದ ಮರಗಳು ಕಂಗೊಳಿಸುತ್ತಿದ್ದುವು. ಚಿನ್ನದ ವ್ಯಾಪಾರಿಯು ಬಂಗಾರವನ್ನು ಒರೆಗೆಹಚ್ಚಿ ಉಜ್ಜಲು ಉದುರಿದ ಪರಾಗವು ಅರಿಸಿನಪುಡಿಯಂತೆ ಹಳದಿಯ ಕಾಂತಿಯನ್ನು ಬೀರುತ್ತಿದ್ದಿತು. ಬಂಗಾರದ ಬಟ್ಟಲುಗಳಿಂದ ಒಪ್ಪವಾಗಿ ತೋರಣವನ್ನು ಕಟ್ಟಿರುವರೋ ಎನ್ನುವಂತೆ ಬೆಟ್ಟದ ತಾವರೆಯ ಗಿಡಗಳು ಕಂಗೊಳಿಸುತ್ತಿದ್ದುವು. ಬಿಳಿಯ ಪರಿಮಳದಲ್ಲಿ ಬೆರೆತ ಚಂದ್ರನ ಅಮೃತಕಿರಣಗಳ ಸಾರದಂತೆ ಸೊಗಸಾದ ಪರಿಮಳದ ಮುದ್ದೆಗಳನ್ನು ಮನ್ಮಥನ ಸಂಗಡಿಗನು ಜೋಡಿಸಿರುವನೋ ಎಂಬಂತೆ ಕರ್ಪೂರಬಾಳೆಗಳು ಮನೋಹರವಾಗಿದ್ದುವು. ದ್ರಾಕ್ಷಿಯ ಬಳ್ಳಿಗಳಲ್ಲಿದ್ದ ಮಾಗಿದಹಣ್ಣುಗಳನ್ನು ಗಿಳಿಯು ಕುಟುಕಲು, ಅವುಗಳಿಂದ ಸುರಿದ ಹಣ್ಣಿನ ರಸವು ನೆಲದಮೇಲೆ ಬಿದ್ದು, ಹರಡಿ ಅಂದವಾಗಿದ್ದುವು. ಅರಳುತ್ತಲಿದ್ದ

---

೧-೧ ವನ್ಯ (ಯ, ರ) ೨-೨ ದಿರ್ದ ಮನುಜರ್ಗೆ (ಕ) ೩ ತಂ (ಯ) ೪ ಬೆರೆದ (ಕ)
೫-೫ ಸಹಚರಂಗೆ ಪರಪುವ (ಯ)

ದ್ರಾಕ್ಷಾಲತೆಗಳುಂ : ಭ್ರಮರನಿವಹದ ಪುರಾಕೃತಪುಣ್ಯದುರುಳಿಗಳಂತೆಸೆವ ಬಿರಿಮುಗುಳ್ಗಳಿಂ ಸಲ್ಲಲಿತ ಮಾದ ಮಲ್ಲಿಗೆಗಳುಂ ಮಧುರಸಾಸಕ್ತಮಧುಕರವ್ರಜ ಮಧುರರವವ್ಯಾಜದಿಂ ಮಧುವಂ ಕರೆದು ಬನಸಿರಿ ಯೊಳ್ ನೆರಪಿ ಮಧುದೂತಿನಾಮಮಂ ಸಾರ್ಥಕಂ ಮಾಳ್ಪ ಮಾಧವಿಯುಂ ; ಬನಗತ್ತಲೆಯ ಬಂದಿ ಗೊಳಗಾದ ಕಮಲಾಕರಹಿಮಕರನನಾರಯ್ಯಲಿಳಿತಂದ ತಾರೆಗಳಂ ಪೋಲ್ವ ಪೂಗಳಿಂ ತಳ್ತ ಯೂಥಿಕೆ ಗಳಂ ; ಬಿರಹಿಗಳುರಮಂ ನಟ್ಟುರ್ಚಿ ರುಧಿರಂಬೊರೆದ ಮದನಶರವಿಸರದಂತೆಸೆವ ನವಕುಸುಮ ಸಂದೋಹದಿಂ ಬಂಧುರವಾದ ಬಂದುಗೆಯುಂ ; ಭೃಂಗಭುಜಂಗನಪ್ಪಿ ಚುಂಬಿಸೆ ತೊಟ್ಟನೆ ತೊರೆದ ಬಾಯ್ದೆರೆಯಂತೆ ಬಗೆಗೊಳ್ವ ಮಧುರಮರಂದಮಂ ತುಳ್ಕುವಲರ್ಗಳಿಂ ಲಲಿತವಾದ ಮಾಲತಿಯುಂ ; ಹರವಿರೋಧಿಯೆಂದೆನ್ನಂ ಬನಸಿರಿ ಬಹಿಷ್ಕರಿಸಿ ಮಗುಳ್ದಿನ್ನನ್ನನಪ್ಪ ಕಂತುವನೆಂತೊಳಕೊಂಡಳೆಂದು ಕನಲ್ದು ಪಲ್ಮೊರೆವಂತೆ ನಿಜಸುಮನಃಪರಿಮಳಮಿಳದ್ಭ್ರಮರಕುಳಕಳಕಳದಿಂ ಕಲಿತವಾದ ಕೇತಕಿಯುಂ; ಪಿಂಗದೆ ಕಣ್ಗೊಳಿಸಿ ಪೆಂಪನಾಳ್ದ ತಣ್ಪಿನ ತವರ್ಮನೆಯುಂ, ಕಂಪಿನ ಕಾರಾಗಾರಮುಂ, ಭ್ರಮರಗಣ ಪ್ರಪಾಮಂಟಪಮುಂ, ಮದನನ ಜೀವಣಶಾಲೆಯುಂ, ಮದಕಳಾಪಿಗಳ ಲಾಸ್ಯರಂಗಸ್ಥಳಮುಂ, ಕೆಂಗಣ್ಬಕ್ಕಿಗಳ ಸಂಗೀತಸದನಮುಂ, ಮಲಯಾನಿಲನ ವಿಹಾರವೀಥಿಯುಂ, ಶುಕದ್ವಿಜಂಗಳಧ್ಯಯನ

ಹೂಗಳಿಂದ ಝುಗರುಗಿಸುತ್ತಿದ್ದ ಮಲ್ಲಿಗೆಬಳ್ಳಿಗಳು, ದುಂಬಿಗಳು ಜನ್ಮಾಂತರದಲ್ಲಿ ಮಾಡಿದ್ದ ಪುಣ್ಯದ ಫಲಗಳೆಂಬಂತಿದ್ದುವು. ಮಧುಪಾನಾಸಕ್ತವಾಗಿ, ಮಧುರವಾಗಿ ಝೇಂಕರಿಸುತ್ತಲಿದ್ದ ದುಂಬಿಗಳ ಧ್ವನಿಯಿಂದ ವಸಂತನನ್ನು ಕರೆದುತಂದು ವನಲಕ್ಷ್ಮಿ ಯೊಡನೆ ಕೂಡಿಸುವಂತೆ ಇದ್ದ ಗುಲಗಂಜಿಯ ಬಳ್ಳಿಗಳು ಮಧುದೂತಿಯೆಂಬ ತನ್ನ ಹೆಸರನ್ನು ಅರ್ಥಪೂರ್ಣವಾಗಿ ಮಾಡುವಂತಿದ್ದಿತು. ಕಾಡಿನಲ್ಲಿ ದಟ್ಟವಾಗಿ ಹರಡಿದ್ದ ಅಂಧಕಾರದಲ್ಲಿ ಸೆರೆಸಿಕ್ಕಿದ ಚಂದ್ರನಂತೆ ತಾವರೆಯ ಕೊಳವಿದ್ದಿತು; ಅದನ್ನು ಸಂತೈಸಲು ಇಳಿದುಬಂದ ನಕ್ಷತ್ರಗಳೆಂಬಂತೆ ಕಾಡುಮಲ್ಲಿಗೆ ಗಿಡದಲ್ಲಿ ಹೂಗಳು ಕಾಣಿಸಿಕೊಂಡಿದ್ದುವು. ಬೆಂಬೊನ್ನೆ ಗಿಡಗಳಲ್ಲಿ ತುಂಬಿದ್ದ ಕೆಂಪುಹೂಗಳು ವಿರಹಿಗಳ ಎದೆಗೆ ನಾಟಿ, ಕಿತ್ತುದರಿಂದ ರಕ್ತಸಿಕ್ತವಾಗಿರುವ ಮನ್ಮಥನ ಬಾಣಗಳಂತೆ ಕಂಗೊಳಿಸುತ್ತಿದ್ದಿತು. ದುಂಬಿಗಳೆಂಬ ವಿಟನು ಆಲಿಂಗಿಸಿ ಚುಂಬಿಸಲು, ಸೋರುವ ಅಧರಾಮೃತದಂತೆ, ಮಧುವನ್ನು ಸುರಿಸುತ್ತಿದ್ದ ಕೋಮಲ ಮಾಲತಿಪುಷ್ಪಗಳಿದ್ದುವು. ಶಿವನಿಗೆ ಶತ್ರುವೆಂದು ತನ್ನನ್ನು ಹೊರಗಿಕ್ಕಿ, ಹರವೈರಿಯೇ ಆದ ಮನ್ಮಥನನ್ನು ಮಾತ್ರ ವನಲಕ್ಷ್ಮಿಯು ಹೇಗೆ ಸೇರಿಸಿಕೊಂಡಳು ಎಂದು ಕೋಪದಿಂದ ಹಲ್ಲನ್ನು ಕಡಿಯುವಂತೆ, ಹೂವಿನ ಪರಿಮಳಕ್ಕಾಗಿ ಬಂದೆರಗಿದ್ದ ತುಂಬಿಗಳ ಝೇಂಕಾರದಿಂದ ಕೂಡಿದ್ದ ಕೇದಗೆಗಳಿದ್ದುವು. ವಿಶೇಷವಾಗಿ ಅಗ್ಗಳಿಕೆವೆತ್ತು, ಶೋಭಿಸುತ್ತಾ, ತಂಪಿನ ತವರುಮನೆಯಂತೆ, ಪರಿಮಳದ ಸೆರೆಮನೆಯಂತೆ, ದುಂಬಿಗಳ ಅರವಟ್ಟಿಗೆಯ ಮಂಟಪದಂತೆ, ಮದನನನ ಶಸ್ತ್ರಾಗಾರದಂತೆ, ನವಿಲುಗಳು ನರ್ತಿಸುವ ರಂಗಮಂಟಪದಂತೆ, ಕೋಗಿಲೆಗಳ ಗಾನಮಂದಿರದಂತೆ, ಮಲಯಮಾರುತನ ಆಡುಂಬೊಲ ದಂತೆ, ಗಿಳಿಹಕ್ಕಿಗಳಿಗೆ (ಶುಕರೇ ಮೊದಲಾದ ಬ್ರಾಹ್ಮಣರಿಗೆ) ಪಾಠಶಾಲೆಯಂತೆ, ವಸಂತ

ಸದ್ಮಮುಂ, ಚೈತ್ರರಾಜನ ರಾಜಧಾನಿಯುಂ, ಮದನಮಹೀಪತಿಯ ಮಹಾಶಿಬಿರಮುಂ, ವನಲಕ್ಷ್ಮಿಯ ವಿನೋದಮಂದಿರಮುಮೆನಿಸಿ, ಸುಮನೋಜನಮನೋಜ್ಞತರಮೆನಿಸಿ ಗಿರಿಕಟಕನುಂವನಂ ಮುದುಂಬೆತ್ತು ಕಣ್ಗೊಳಿಸಿರ್ದುದಂತುಮಲ್ಲದೆಯುಂ

ಚಂಪಕ ಅಳಿಕುಲಮಿಂದ್ರನೀಲಮಣಿ ಪಚ್ಚೆ ಪಸಿರ್ಮಿಡಿ ತಳ್ತ ಮಲ್ಲಿಕಾ
ಸುಳಲಿತಕುಟ್ಮಳಾಳಿ ಪೊಸಮುತ್ತು ಕೊನರ್ ಪವಳು ಪೆಂದಟ್ಟು ಸಂ
ಗಳಿಸಿರೆ ತನ್ನೊಳೊಪ್ಪಿದುದು ಮಾಮರಮಲ್ಲಿ ಮನೋಜ್ಞ ರತ್ನಸಂ
ಕುಳಮನೆ ಕಾತಿ ಕಲ್ಪಕುಜದಂತೆ ಮರುದ್ಗತನಂದನಸ್ಥಿತಂ ೪೩

ವಚನ ಮತ್ತಂ

ಚಂಪಕ ತಳಿರೆಳಮಾದಳಂ ಪುದಿದ ಪೂಗುಡಿ ಜಲ್ಲಿ ಮಡಲ್ತ ಮಲ್ಲಿಯು
ಜ್ವಳಮುಕುಳಾಳಿ ಮುತ್ತು ಪವಳಂ ಕೊನರಾಗೆ ವನಾಬ್ಧಿಯಲ್ಲಿ ಕ
ಣ್ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಟ್ಟಗೊಂಬಿನೊಳ್
ತಳೆದುದು ಕೂವಕಂಬದುದಿವತ್ತಿದ ನಾವಿಕನೊಂದು ಲೀಲೆಯಂ ೪೪

ಕಳಕಂಠಂಗಳ ಬಗ್ಗಣೆ
ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ

ರಾಜನ ರಾಜಧಾನಿಯಂತೆ, ಮನ್ಮಥಭೂಪಾಲನ ದೊಡ್ಡಬಿಡಾರದಂತೆ, ವನಲಕ್ಷ್ಮಿಯ ವಿನೋದಮಂದಿರದಂತೆ, ಸತ್ಪುರುಷರಿಗೆ ಮನೋಹರವಾಗಿ, ಬೆಟ್ಟದ ಬುಡದಲ್ಲಿದ್ದ ವನವು ಉಲ್ಲಾಸದಿಂದ ಕಂಗೊಳಿಸುತ್ತಿದ್ದಿತು. ಅಷ್ಟುಮಾತ್ರವೇ ಅಲ್ಲದೆ, ೪೩. ದೇವತೆಗಳ ಓಡಾಟದಿಂದ ಕೂಡಿದ ನಂದನವನದಲ್ಲಿರುವ ಕಲ್ಪವೃಕ್ಷವು ಇಂದ್ರನೀಲಮಣಿ, ಪಚ್ಚೆ, ಮುತ್ತು, ಹವಳಗಳು ವಿಶೇಷವಾಗಿದ್ದು ಕಂಗೊಳಿಸುವಂತೆ, ಇಂದ್ರಕೀಲಪರ್ವತದ ತಪ್ಪಲುಗಳಲ್ಲಿನ ಮಾವಿನಮರಗಳು ಇಂದ್ರನೀಲಾದಿಗಳನ್ನು ಕ್ರಮವಾಗಿ ಹೋಲುವ ದುಂಬಿಗಳಿಂದಲೂ, ಕಸುಗಾಯಿಗಳಿಂದಲೂ, ಹಬ್ಬಿದ್ದ ಮಲ್ಲಿಗೆಬಳ್ಳಿಯಲ್ಲಿನ ಹೂಗಳಿಂದಲೂ, ಚಿಗುರಿನಿಂದಲೂ ಸಮೃದ್ಧವಾಗಿ ಮನೋಹರವಾಗಿದ್ದಿತು. ೪೪. ಮಾವಿನ ಮರವು ವನವೆಂಬ ಸಮುದ್ರದಲ್ಲಿರುವ ಹಡಗಿನಂತೆ ಕಂಗೊಳಿಸುತ್ತಿದ್ದಿತು. ಚಿಗುರಿದ ಎಳೆಯ ಮಾವಿನ ಎಲೆಗಳೂ ಹೂವಿನ ಕುಡಿಗಳೂ ಸೇರಿಕೊಂಡು ದೊಡ್ಡ ಬುಟ್ಟಿಯಂತಿದ್ದುವು. ಸಮೃದ್ಧವಾಗಿ ಬೆಳೆದಿದ್ದ ಮಲ್ಲಿಗೆಯ ಮೊಗ್ಗುಗಳು ಮುತ್ತಿನಂತೆಯೂ, ಚಿಗುರೆಲೆಗಳೇ ಹವಳದಂತೆಯೂ ಇದ್ದುವು. ಮಧ್ಯದ ಎತ್ತರವಾದ ಕೊಂಬೆಯು ಹಡಗಿನ ಕಂಬದಂತಿದ್ದಿತು. ಅದರ ಮೇಲೇರಿದ್ದ ಕೋಗಿಲೆಯು ನಾವಿಕನ ರೀತಿಯಲ್ಲಿ ಕಂಗೊಳಿಸುತ್ತಿದ್ದಿತು. ೪೫. ಚಿಗುರುಗಳಿಂದಲೂ ಪಕ್ವಫಲಗಳಿಂದಲೂ ಮತ್ತು ಹೂಗಳಿಂದಲೂ ನಿಬಿಡವಾಗಿದ್ದ ಮಾವಿನಮರದ ಕೊಂಬೆಗಳಲ್ಲಿ ಕೋಗಿಲೆಗಳು ಚಿಗುರನ್ನು

---

೧ ಗೊಳಿ (ಜ, ಶ) ೨ ಕಾತು (ಚ)

ತಳಿರ್ಗಳ್ ತನಿವಣ್ಗಳ್ ಸುಮ
ಕುಳಂಗಳಿಡುಕಿಱಿದ ಚೂತಶಾಖಾಂತರದೊಳ್ ೪೫

ಉತ್ಪಲ ಕಾಮನ ಸಾಮಜಂ ಮಧುಮಹೀಶನ ಕೋಶಗೃಹಂ ಮಧುವ್ರತ
ಸ್ತೋಮದ ಪಾನಭೂಮಿ ಮಲಯಾನಿಲನಾಡುವ ಮಾಡುವೆಟ್ಟು ಮ
ಲ್ಲೀಮೃದುಲಾಸ್ಯಶಾಲೆ ಶುಕವೃಂದದ ಜೇವಣದಾಗರಂ ಬೞಿ
ಕ್ಕೀ ಮರಮಲ್ತೆ ಮಾಮರಮೆನುತ್ತಜನಿಟ್ಟನೊಱಲ್ದು ನಾಮಮಂ ೪೬

ಚಂಪಕ ಗಿಳಿಗಳ ಸಾಲ್ ಸುರೇಂದ್ರಧನು ಚಿಂದಳಿರೊಂದಿದ ಮಿಂಚು ಕೋಕಿಲಾ
ವಳಿಯ ರವಂ ಘನಧ್ವನಿಗಳುನ್ಮ[1]ಕರಂದಮೆ ವೃಷ್ಟಿಯಂತೆ ಕಣ್
ಗೊಳಿಸೆ ನಿಲುಂಬಿ ತುಂಬಿ ಕವಿವಾಮ್ರಮನಭ್ರಮೆಗೆತ್ತು ಕೇಕಿವಂ
ಡಳಿ ಬೞಿಸಾರ್ದು ನರ್ತಿಸುಗುಮೀಕ್ಷಿಸಿ ಮರ್ಚುವಿನಂ ಮನೋಭವಂ ೪೭

ತಳಿರ್ಗಳೆ ದುಳ್ಳುರಿ[2]ಯಲರಿಂ
ಬೆಳೆ[2]ದಲರ್ವ್ರಾಡಿ ದೂವ[3] ಮಂತ್ರಘೋಷಂ ಪಿಕಸಂ
ಕುಳರವಮೆನೆ ಚೂತಂ ಕಣ್
ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ ೪೮

ಮೆಲ್ಲುವ ಧ್ವನಿಯೂ, ಗಿಳಿಗಳು ಹಣ್ಣಿನ ರಸವನ್ನು ಹೀರುವ ಶಬ್ದವೂ ಮತ್ತು ದುಂಬಿಗಳ ಝೇಂಕಾರವೂ ಕೇಳಿಸುತ್ತಿದ್ದಿತು. ೪೬. ಮಾವಿನಮರವು (ಮಾಮರಂ) ಮಹಾವೃಕ್ಷವಾದುದರಿಂದಲೇ ಬ್ರಹ್ಮನು ಇದಕ್ಕೆ ಮಾಮರವೆಂಬ ಹೆಸರನ್ನು ಘೋಷಿಸಿದನು. ಇದು ಮನ್ಮಥನ ಪಟ್ಟದಾನೆ ; ಚೈತ್ರರಾಜನ ಭಂಡಾರ ; ದುಂಬಿಗಳ ಪಾನಶಾಲೆ ; ಮಲಯಮಾರುತನು ವಿಹರಿಸುವ ಕೃತಕಶೈಲ ; ಮಲ್ಲಿಕಾಲತೆಗಳ ಲಲಿತ ನರ್ತನಮಂದಿರ ; ಗಿಳಿಗಳಿಗೆ ಫಲಾಹಾರ ಮಂದಿರ. ಆದುದರಿಂದಲೇ ಇದು ಮಾಮರ ; ಮಹಾವೃಕ್ಷ. ೪೭. ಸೊಂಪಾಗಿ ಬೆಳೆದು ಹರಡಿದ್ದ ಮಾವಿನಮರವನ್ನು ಕಂಡು ನವಿಲುಗಳು ಇದು ಮೇಘವೆಂದು ಭ್ರಮಿಸಿ ಕೊಂಕಿ ಕುಣಿಯುತ್ತಿದ್ದುವು. ಅದನ್ನು ಕಂಡು ಮನಥ್ಮನು ಸಂತೋಷಪಟ್ಟನು. ಮಾವಿನಮರದ ಮೇಲಿದ್ದ ಗಿಳಿಗಳ ಪಂಕ್ತಿಯು ಇಂದ್ರಧನುಸ್ಸಿನಂತೆ ಮನೋಹರವಾಗಿದ್ದಿತು. ಚಿಗುರುಗಳು ಮಿಂಚುತ್ತಿದ್ದುವು. ಕೋಗಿಲೆಗಳ ಕೂಗು ಗುಡುಗಿನಂತಿದ್ದಿತು. ಪುಷ್ಪಗಳಿಂದ ಸ್ರವಿಸುತ್ತಿದ್ದ ಮಕರಂದವು ಮಳೆಯಂತಿದ್ದಿತು. ೪೮ ಮಾವಿನ ಮರವು ಕಾಮಿಗಳು ಯಜ್ಞದೀಕ್ಷಿತರಾಗಿ ಯಾಗಮಾಡಲು ಎದ್ದ ಹೋಮಾಗ್ನಿಯಂತೆ ಕಾಣುತ್ತಿದ್ದಿತು. ಚಿಗುರುಗಳೇ ಮಹಾಜ್ವಾಲೆಗಳು, ಹೂಗಳಿಂದ ಉದುರುತ್ತಿದ್ದ ಪರಾಗವೇ ಹೊಗೆ, ಕೋಗಿಲೆಗಳ ಧ್ವನಿಯೇ ಮಂತ್ರಘೋಷವೆನ್ನುವಂತಿದ್ದುವು.

---

೧ ಳುಮ್ಮ (ರ) ೨-೨ ಯಲರಿಂ । ಕಳಿ (ಯ) ೩ ದೂಣೆ (ಕ, ಜ, ತ); ಧೂಮ (ರ)

ಮತ್ತೇಭ ತನಿವಣ್ಣಿಂ ಮನವಾರೆ ನೋಡಿ ಬೞಿವಂದೊಲ್ದಪ್ಪಿ ಪಕ್ಕಂಗಳಿಂ
ದನಿದೋಱುತ್ತೊಲವೆತ್ತು ಚಂಚುಪುಟದಿಂದಂ ಮೆಲ್ಪಿನಿಂ ಸೀಳ್ದು ಸೀ
ಯೆನೆ ಸೋರ್ವ[1] ರಸಧಾರೆಯಂ ಸವಿದು ಚೀತ್ಕಾರಸ್ವರಂ ಪ್ರೊಣ್ಮೆ ತ
ನ್ನನಿಯಳ್ಗಂ ಕರೆದಿತ್ತದಂ ತಣಿಪುಗುಂ ಕೀರಾಳಿ ಮಾಕಂದದೊಳ್ ೪೯

ಚಂಪಕ ಸುೞಿದುದು ಬಾೞೆ ನುಣ್ದೊಡೆಯನಪ್ಪುತೆ ಕಂಪನಮಂ ನಿಮಿರ್ಚಿ ಸಾ
[2]ರ್ದೆಳವಿ ಸುೞಿಗುಚ್ಛಮೆಂಬ ಮೊಲೆಯಂ ಮಧುಘರ್ಮಕಣಾಳಿಯಂ ಪದಂ
ಗೊಳಿಸಿ ಲತಾಂಗಮಂ ಪದೆದು ಸೋಂಕಿ ನವಾಂಕುರರೋಮಹರ್ಷಮಂ
ಬಳೆಯಿಸಿ ತದ್ವನಸ್ಥಳಿಗೆ ಕಾಮುಕನಂತಿರೆ ಮಂದಮಾರುತಂ ೫೦

ನೆಗೆದೊಗೆದೇೞ್ವ ಬಾಳೆ ಸೆಳೆಮಿಂಚು ಸರೋಜರಜಃಪಿಶಂಗಮು
ದ್ಘಗತತರಂಗಮಬ್ಜದಳಸಂಗತಮಿಂದ್ರಶರಾಸನಂ ಪಯಃ
ಖಗರುತಿಘೋಷಮಾಗೆ ಗಿರಿಶೃಂಗತಟಾಹತಮಲ್ಲಿ ಬಿೞ್ದುದೋ
ಮುಗಿಲೆನೆ ದಂತಿದಾನರಸಮೇಚಕಿತಾಂಬುಸರಂ[3] ವಿರಾಜಿಕುಂ ೫೧

೪೯. ಮಾವಿನಮರಗಳಲ್ಲಿ ಗಿಳಿಗಳು ಮಾಗಿದ ಹಣ್ಣನ್ನು ಆಸೆಯಿಂದ ನೋಡಿ, ಹತ್ತಿರ ಬಂದು, ತಮ್ಮ ರೆಕ್ಕೆಗಳಿಂದ ಅದನ್ನು ತಬ್ಬಿಕೊಂಡು, ಉತ್ಸಾಹದಿಂದ ದನಿಮಾಡುತ್ತಾ, ಪ್ರೀತಿಯಿಂದ ಕೊಕ್ಕಿನಿಂದ ಅದನ್ನು ಸೀಳಿ, ಹೊರಹೊಮ್ಮುತ್ತಲಿದ್ದ ರುಚಿಕರವಾದ ರಸವನ್ನು ಸಶಬ್ದವಾಗಿ ಹೀರಿ, ಸವಿದು, ತನ್ನ ಪ್ರಿಯೆಯನ್ನೂ ಕರೆದು ಹಣ್ಣಿನರಸವನ್ನಿತ್ತು ತೃಪ್ತಿಪಡಿಸುತ್ತಿದ್ದುವು. ೫೦. ಮಂದಮಾರುತವು ಕಾಮಿಯಂತೆ ವನರಮಣಿಗೆ ಕಾಮೋಪಚಾರವನ್ನು ಮಾಡುತ್ತಲಿರುವ ರೀತಿಯಲ್ಲಿ ಮೆಲ್ಲಗೆ ಬೀಸುತ್ತಿದ್ದಿತು. ಬಾಳೆಗಳೆಂಬ ತೊಡೆಗಳನ್ನು ಆಲಿಂಗಿಸುತ್ತಲೂ, ಅಲ್ಲಾಡಿಸುತ್ತಲೂ ಸಮೀಪಿಸಿ, ಹೂಗೊಂಚಲುಗಳೆಂಬ ಮೊಲೆಗಳನ್ನು ಮರ್ದಿಸುತ್ತಲೂ, ಮಕರಂದವೆಂಬ ಬೆವರಹನಿಗಳು ಕಾಣಿಸುವಂತೆ ಮಾಡಿ, ಬಳ್ಳಿಗಳೆಂಬ ಶರೀರವನ್ನು ಪ್ರೀತಿಯಿಂದ ಸ್ಪರ್ಶಿಸುತ್ತ, ಪುಲಕಾಂಕುರಗಳೇಳುವಂತೆ ಮಾಡುತ್ತಿದ್ದಿತು. ೫೧. ಅಲ್ಲಿದ್ದ ಸರೋವರವು ಆನೆಗಳ ದಾನೋದಕದಿಂದ ಕೂಡಿ, ಕಪ್ಪಾಗಿ, ಬೆಟ್ಟಗಳ ಕೋಡುಗಳಿಂದ ತಾಡಿತವಾಗಿ ಉರುಳಿಬಿದ್ದ ಮೇಘದಂತೆ ಕಾಣುತ್ತಿದ್ದಿತು. ಸರೋವರದಲ್ಲಿ ಸುಳಿದಾಡುತ್ತಿದ್ದ ಬಾಳೆಮೀನುಗಳೇ ಮಿಂಚು, ಕಮಲಗಳ ಪರಾಗದಿಂದಲೂ, ರೇಕುಗಳಿಂದಲೂ ಕೂಡಿ ಏಳುತ್ತಲಿದ್ದ ತೆರೆಗಳೇ ಇಂದ್ರಧನುಸ್ಸು,

---

೧ ಸಾರ್ವ (ಚ) ೨–೨ ರ್ದೆಳವಿಸಿ (ಯ, ರ) ೩ ರಸಂ (ಯ, ರ)

ಸ್ಫುರಿತ ಶಿಲೀಮುಖಮುತ್ಪಳ
ಸರಕ್ತ ಕಂಜಾತಯುತಮುಪಾತ್ತಕಬಂಧಂ
ಶರಭಂಗಾನ್ವಿತಮಿರದನು
ಕರಿಸಿದುದಾ ಬನದ ತಿಳಿಗೊಳಂ ಕೊಳುಗುಳಮಂ ೫೨

ಚಂಪಕ
ಮಿಸುನಿಯ ಕಾಸೆವೊಲ್ ಮಿಸುಗೆ ಕಂಜರಜಂ ಪೊಳೆದೊಪ್ಪೆ ಬಾಳೆಗಣ್
ಬಿಸಜಮುಖಂ ಮರುಚ್ಚಲಿತವೊಂದೆ ತರಂಗಭುಜಾಬ್ಜಪಾಣಿ ರಂ
ಜಿಸೆ ಚಲಮ೧ಬ್ಜಕೋಶಕುಚಮಲ್ಲಿ ಕದಕ್ಕದಿಸುತ್ತೆ ತೋಱೆ ಕ
ಣ್ಗೆ ಸರಸಿ ನರ್ತಿಪಂತೆಸೆದುದುದ್ಭ್ರಮರಧ್ವನಿಕಿಂಕಿಣೀರುತಂ ೫೩

ಸ್ಮರಶಸ್ತ್ರಸದನಮಿಂದಿರೆ
ಯರಮನೆಯಳಿಗಣದ ಶಾಶ್ವತಪ್ರಪೆ ಕೋಕೋ
ತ್ಕರದ ಸುರತಾಲಯಂ ಭಾ
ಸುರಮಂದಾನಿಲನ ಕೋಶಮಾ ಕಾಸಾರಂ ೫೪

ನೀರ್ವಕ್ಕಿಗಳ ಧ್ವನಿಯೇ ಗುಡುಗಿನಂತೆ ಮೊಳಗುತ್ತಲಿದ್ದಿತು. ೫೨. ಆ ವನದಲ್ಲಿದ್ದ ತಿಳಿಗೊಳವು ಯುದ್ಧಭೂಮಿಯನ್ನು ಹೋಲುತ್ತಿದ್ದಿತು. ಕೊಳದ ಪರವಾಗಿ (i) ಹೊಳೆಯುವ ತುಂಬಿಗಳಿಂದ ಕೂಡಿದ್ದಿತು ; ಯುದ್ಧರಂಗದಂತೆ (ii) ಹೊಳೆಯುತ್ತಿದ್ದ ಬಾಣಗಳಿಂದ ಕೂಡಿದ್ದಿತು ; (i) ನೈದಿಲೆಯಿಂದಲೂ, ಕೆಂದಾವರೆಯಿಂದಲೂ ಕೂಡಿದ್ದಿತು ; (ii) ವಿಪರೀತವಾಗಿ ಮಾಂಸದಿಂದಲೂ, ರಕ್ತಸಿಕ್ತವಾಗಿದ್ದ ತಲೆಗಳ ಕೂದಲಿಂದಲೂ ಕೂಡಿದ್ದಿತು. (i) ನೀರಿದ್ದಿತು ; (ii) ಶಿರಸ್ಸಿಲ್ಲದ ದೇಹಗಳಿದ್ದವು. (i) ಜೊಂಡಿನಿಂದಲೂ, ತೆರೆಗಳಿಂದಲೂ ಕೂಡಿದ್ದಿತು ; (ii) ಬಾಣಗಳ ಆಘಾತವಿದ್ದಿತು.[1] ೫೩. ಸರೋವರವು ನರ್ತಕಿಯು ನರ್ತನ ಮಾಡುವಂತೆ ಕಾಣುತ್ತಿದ್ದಿತು. ಪದ್ಮಪರಾಗವು ಉಟ್ಟ ಬಂಗಾರದ ಕಾಚದಂತೆಯೂ, ಚಲಿಸುತ್ತಲಿದ್ದ ಮೀನುಗಳು ಹೊಳೆವ ಕಣ್ಣುಗಳಂತೆಯೂ, ಕಮಲಗಳೇ ಮುಖದಂತೆಯೂ, ಗಾಳಿಬೀಸಲು ಮೇಲೆದ್ದ ತೆರೆಗಳು ಭುಜಗಳಂತೆಯೂ, ತಾವರೆಯ ಹೂಗಳು ಕೈಗಳಂತೆಯೂ, ಕದಲುತ್ತ ಮನೋಹರವಾಗಿದ್ದ ತಾವರೆಯ ಮೊಗ್ಗುಗಳು ಮೊಲೆಗಳಂತೆ ಒಂದನ್ನೊಂದು ಒತ್ತುತ್ತಾ ಕಂಗೊಳಿಸಿರಲು, ದುಂಬಿಗಳ ಝೇಂಕಾರವು ಕಟ್ಟಿದ ಕಿರುಗೆಜ್ಜೆಗಳ ಧ್ವನಿಯಂತೆ ಮನೋಹರವಾಗಿದ್ದಿತು. ೫೪. ಆ ಕೊಳವು ಮನ್ಮಥನ ಶಸ್ತ್ರಾಗಾರ, ಲಕ್ಷ್ಮೀದೇವಿಯ ಅರಮನೆ, ದುಂಬಿಗಳ ನಿತ್ಯದ ಪಾನಶಾಲೆ, ಚಕ್ರವಾಕಪಕ್ಷಿಗಳ ಭೋಗಭೂಮಿ, ಮಂದಮಾರುತನ ಪರಿಮಳದ ಭಂಡಾರ.

---

೧ ಚಲದ (ಯ, ರ)

[1] ಶಿಲೀಮುಖ–ದುಂಬಿ ; ಬಾಣ. ಉತ್ಪಲ–ನೈದಿಲೆಹೂ ; ಉತ್ + ಪಲ–ವಿಶೇಷವಾದ ಮಾಂಸ. ಕಂಜಾತ–ತಾವರೆ ; ಶಿರಸ್ಸಿನಲ್ಲಿ ಹುಟ್ಟಿದ ಕೇಶ. ಕಬಂಧ–ನೀರು ; ಶಿರಸ್ಸಿಲ್ಲದ ದೇಹ. ಶರ–ಜೊಂಡು ; ಬಾಣ, ಭಂಗ–ಆಘಾತ ; ಅಲೆಗಳು.

ಮತ್ತೇಭ ನಳಿನಂ ಶುಕ್ತಿಕೆ ತಳ್ತ ನೀರ್ವನಿಗಳೇ ನುಣ್ಮುತ್ತು ನೀರುಣ್ಬ ನಿ
ಶ್ಚಳಮಾತಂಗಮೆ ತೀರನೀರದಮಹೀಂದ್ರಂ ನೀಳ್ದ ಫೇನಾಳಿ ಮಾ
ರ್ಪೊಳೆವರ್ಕಂ ಬಡಬಾಗ್ನಿ ಪೊಕ್ಕ ಕುಧರಂ ತದ್ಭೂಧರಚ್ಛಾಯೆ ಕ
ಣ್ಗೊಳಿಪನ್ನಂ ಕಮಳಾಕರಂ ತಳೆದುದಾ ರತ್ನಾಕರಾಕಾರಮಂ ೫೫

ಸರ[1]ದೊಳ್ ಮುಳುಂಗಿ ನೆಗೆಪಿದ
ಕರಿಕುಭಂ ಫೇನಪಿಹಿತಮಿಂಬಾದುದು ತೆ
ಳ್ದಿರೆವೋಲುದಜಿಂ ಪೊಣ್ಮಿದ
ಸರಸಿಯ ಮಲಯಜವಿಲಿಪ್ತಕುಚಕುಂಭದವೋಲ್ ೫೬

ಆಮರ್ದ[2] ನೆಲೆವೊಲೆಗಳೆಂ[3]ಬಿಸವೊ
ಲಮ[3]ಳ್ವಕ್ಕಿಗಳಿರೆ ತದಗ್ರಕಲ್ಲೋಲಸಮಾ
ಕ್ರಮಿತಾಬ್ಜಪತ್ರಮಾಳ್ಪುದು
ಕಮಳಿನಿ ತೊಟ್ಟಿರ್ದ ಹರಿತಕಂಚುಕದಿರವಂ ೫೭

ಚಂಪಕ ಸರದೊಳೆ ಮಿಂದು ನೀರಜರಜಂಗಳನಂಗದೊಳೊಟ್ಟಿಕೊಂಡು ಗಾ
ವರಿಪ ಮದಾಳಿಗಾಯಕರ ಗಾನಮನಾಲಿಸಿ ದಾನಮಿತ್ತು ಕಂ

೫೫. ಅಲ್ಲಿನ ಕಮಲಾಕರವು ಸಮುದ್ರವೆನ್ನುವಂತೆಯೇ ಇದ್ದಿತು. ಕಮಲಗಳೇ ಮುತ್ತಿನ ಚಿಪ್ಪುಗಳು ; ಅದರಲ್ಲಿ ಬಿದ್ದ ನೀರಹನಿಗಳೇ ನುಣುಪಾದ ಮುತ್ತುಗಳು ; ನೀರು ಕುಡಿಯುತ್ತಾ, ಕದಲದೆ ದಡದಲ್ಲಿದ್ದ ಆನೆಗಳೇ ಮೇಘಮಾಲೆಗಳು ; ವಿಸ್ತಾರವಾಗಿ ಹರಡಿದ್ದ ನೊರೆಗಳ ರಾಶಿಯೇ ಆದಿಶೇಷ ; ಪ್ರತಿಬಿಂಬಿತವಾದ ಸೂರ್ಯಬಿಂಬವೇ ಸಮುದ್ರದಲ್ಲಿರುವ ಬಡಬಾಗ್ನಿ ; ಪರ್ವತದ ನೆರಳೇ ಸಮುದ್ರವನ್ನು ಆಶ್ರಯಿಸಿದ ಮೈನಾಕಪರ್ವತವೆನ್ನುವಂತೆ ಕಂಗೊಳಿಸುತ್ತಿದ್ದಿತು. ೫೬. ಆನೆಯು ನೀರಿನಲ್ಲಿ ಮುಳುಗಿ, ತಲೆಯೆತ್ತಿದಾಗ, ಅದರ ಕುಂಭಸ್ಥಳವು ನೊರೆಯಿಂದ ಆಚ್ಛಾದಿತವಾಗಿದ್ದಿತು. ಅದು ಶ್ರೀಗಂಧದಿಂದ ಲೇಪಿತವಾಗಿ, ತೆಳುವಾದ, ಬಿಳುಪಾದ ಸೆರಗಿನಿಂದ ಮುಚ್ಚಿದ್ದ ಸರಸ್ಸಿನ ಕುಚಕಲಶಗಳಂತೆ ಶೋಭಿಸುತ್ತಿದ್ದಿತು. ೫೭. ತಾವರೆಗಳ ಮರೆಯಲ್ಲಿ ಚಕ್ರವಾಕಪಕ್ಷಿಗಳಿರಲು, ತೆರೆಗಳೆದ್ದು, ಚಲಿಸಿದ ಕಮಲದ ಎಲೆಗಳು ಅವುಗಳನ್ನು ಮುಚ್ಚುತ್ತಿದ್ದುವು. ಅದು ಕಮಲಿನಿಯೆಂಬ ರಮಣಿಯು ತನ್ನ ಸುಧಾಭರಿತವಾದ ಸ್ತನಗಳನ್ನು ಮುಚ್ಚಲು ಹಸಿರುಬಣ್ಣದ ಕುಪ್ಪಸವನ್ನು ತೊಟ್ಟಂತೆ ಕಂಗೊಳಿಸಿತು. ೫೮. ನೀರಾಟವಾಡುತ್ತಲಿದ್ದ ಆನೆಯು ಸೊಗಸುಗಾರನಂತೆ ವಿಶೇಷವಾಗಿ ಶೋಭಿಸುತ್ತಿದ್ದಿತು. ನೀರಿನಲ್ಲಿ ಸ್ನಾನಮಾಡಿ, ಪದ್ಮಪರಾಗವನ್ನು ದೇಹದಲ್ಲಿ ಹಾಕಿಕೊಂಡು, ಗಾನಮಾಡುತ್ತಲಿದ್ದ ಮತ್ತಮಧುಕರಗಳ

---

೧ ಶರ (ಕ, ತ, ರ) ೨ ಅಮರ್ದು (ರ) ೩-೩ ಬಿಸ । ಮಮ (ಯ)

ಧರದೆ ಮೃಣಾಲಹಾರಮನೆ ತಾಳ್ದೆಳಮುತ್ತನೆ ಸೂಸುವಂತೆ ಘೂ
ತ್ಕರಿಸಿ ಕಣೌಘಮಂ ಕೆದರ್ದುದಲ್ಲಿ ಗಜೇಂದ್ರಮಮಂದವಿಭ್ರಮಂ ೫೮

ಸಿರಿಯರಮನೆಯಂ ಮುಳಿದಾ
ಕರಿಯಂ ಮುಳಿದಿಟ್ಟ ಹರಿಯ ಪಾಱುಂಬಳೆಯಂ
ಬಿರವಂ ತಳೆದಳಿಮಾಲಿಕೆ
ತಿರುಗುತ್ತೆಟ್ಟಿಂದು ಕಟದೊಳೇನೆಱಗಿದುದೋ ೫೯

ಚಂಪಕ ಪುಳಿನನಿತಂಬಮಂ ಪದೆದು ಸೋಂಕಿ ತೆರಳ್ಚಿ ತರಂಗನೀವಿಯಂ
ವಿಳಸಿತಚಕ್ರವಾಕಕುಚಯುಗ್ಮಮನಪ್ಪಿ ಮದಾಳಿಮಾಲೆಯಂ
ಬಳಕಮನೊತ್ತಿ ನೇರ್ಪಡಿಸಿ ತತ್ಸರಸೀರಮೆಯಂಬುಜಾಸ್ಯಮಂ
ದಳಮನೊಜಿಲ್ದು ಚುಂಬಿಸಿ ಭುಜಂಗನವೋಲ್ ಸುಳಿಗುಂ ಸಮೀರಣಂ ೬೦

ಉತ್ಪಲ ಸೋಗೆದುಱುಂಬು ರಂಜಿಸೆ ಲತಾಂಗಮೆ ಸೊಂಪಡರ್ದೊಪ್ಪೆ ಮಾಣದಿಂ
ಬಾಗಿರೆ ಬಾಳೆನುಣ್ದೊಡೆ ಮನಂಬುಗೆ ಗುಚ್ಛಪಯೋಧರಂ ಬೆಡಂ
ಗಾಗಿ ವಿರಾಜಿಸಿರ್ಪ ವನಲಕ್ಷ್ಮಿಗೆ ಭೂರಮೆ ತೋರ್ಪ ದರ್ಪಣಂ
ಪೂಗೊಳನಪ್ಪುದಲ್ಲದೊಡೆ ತತ್ಪ್ರತಿಬಿಂಬಮದಲ್ಲಿ ತೋರ್ಕುಮೇ ೬೧

ಸಂಗೀತವನ್ನು ಕೇಳಿ, ಅವರಿಗೆ (ದಾನವಿತ್ತು-ಉಚಿತ ಸನ್ಮಾನ ಮಾಡಿ) ಮದೋದಕವನ್ನು ಕೊಟ್ಟು, ತಾವರೆಯ ದಂಟುಗಳನ್ನು ಕಂಠದಲ್ಲಿ ಹಾರದಂತೆ ಧರಿಸಿ, ಎಳೆಯ ಮುತ್ತುಗಳನ್ನು ಎರಚುವಂತೆ, ಜಲಕಣಗಳನ್ನು ಘೂತ್ಕರಿಸಿ ವಿಲಾಸವನ್ನು ತೋರುತ್ತಿದ್ದಿತು. ದಾನ=ಮದೋದಕ ; ಕೊಡುವುದು. ೫೯. ಲಕ್ಷ್ಮಿಯ ಅರಮನೆಯಾದ ಕಮಲವನ್ನು ಕಿತ್ತೆಸೆದ ಆನೆಯನ್ನು ದಂಡಿಸಲು,ವಿಷ್ಣುವು ಕೋಪದಿಂದ ಚಕ್ರಾಯುಧವನ್ನು ಪ್ರಯೋಗಿಸಿದನೆನ್ನುವ ರೀತಿಯಲ್ಲಿ, ಮಾಲಾಕಾರವಾಗಿ ಸುಳಿಯುತ್ತಾ ದುಂಬಿಗಳು ಆನೆಯ ಕುಂಭಸ್ಥಳಕ್ಕೆ ಎರಗುತ್ತಿದ್ದುವು. ೬೦. ಗಾಳಿಯು ಮರಳುದಿಣ್ಣೆಗಳನ್ನು ಸೋಕಿ, ತರಂಗಗಳನ್ನೆಬ್ಬಿಸಿ, ಚಕ್ರವಾಕಪಕ್ಷಿಗಳನ್ನು ನೂಕುತ್ತಾ, ದುಂಬಿಗಳನ್ನು ಕೆದರಿಸುತ್ತಾ, ಕಮಲಗಳ ಮೇಲೆ ಸುಳಿಯುತ್ತಿದ್ದಿತು. ಅದು ಮಾರುತನೆಂಬ ವಿಟಪುರುಷನು ಸರೋವರಲಕ್ಷ್ಮಿಯೆಂಬ ರಮಣಿಯೊಡನೆ ಭೋಗಿಸುವಂತೆ ತೋರುತ್ತಿದ್ದಿತು. ೬೧. ವನಲಕ್ಷ್ಮಿಗೆ ಭೂರಮೆಯು ತೋರುತ್ತಿದ್ದ ಕನ್ನಡಿಯಂತೆ ಹೂಗೊಳವಿದ್ದಿತು. ಆ ಕೊಳದಲ್ಲಿ ವನದ ಸೌಂದರ್ಯವು ಪ್ರತಿಫಲಿಸಿದ್ದಿತು. ವನಲಕ್ಷ್ಮಿಗೆ ನವಿಲಿನಂತೆ ತುರುಬು, ಬಳ್ಳಿಯಂತೆ ಕಂಗೊಳಿಸಿದ್ದ ದೇಹ, ಅಂದವಾಗಿದ್ದ ಬಾಳೆತೊಡೆಗಳು, ಮನೋಹರವಾದ ಪುಷ್ಪಗುಚ್ಛ

ಗುರುಕುಜಸುಮನಃಸುರಭಿ
ಸ್ಫುರಿತಂ ಪ್ರಮದಾಳಿ ಮಂಜುಘೋಷಾನ್ವಿತಮು
ಚ್ಚರಿವೆರಸಿದ ಗಿರಿವನಮದು
ಸುರವನಮೆನೆ ಗಂಧವಾಹಪುನ್ನಾಗಯುತಂ ೬೨

ಚಂಪಕ ಸರಸಸರೋಜಕೈರವವಿರಾಜಿ ಸರೋವರದಿಂ ಮಹಾಫಲೋ
ತ್ಕರಪರಿನಮ್ರಭೂಜತತಿಯಿಂ ಪ್ರಮದಾಳಿಸಮುಲ್ಲಸಲ್ಲತಾ
ತರುಚಿರಕುಂಜಪುಂಜದಿನಲಂಕೃತಿವೆತ್ತು ಪವಿತ್ರಸತ್ರಬಂ
ಧುರತರಮೊಪ್ಪುಗುಂ ಸುರಭಿಮಂದಮರುತ್ಪ್ರಯುತಂ ತಪೋವನಂ ೬೩

ಉತ್ಪಲ ಪೂಗಿಡಗಳ್ಗೆ ನೀರೆರೆವ ಪುಷ್ಪಕದಂಬಮನೆಯ್ದೆ ಕೊಯ್ದು ಚೆ
ಲ್ವಾಗಿರೆ ದಂಡೆಗಟ್ಟುವ ಶಿವಾರ್ಚನೆಗರ್ಘ್ಯಜಲಂಗಳೀವ ನೀ
ಡಾಗದೆ ಸಾಧನಂಗುಡುವ ಗಟ್ಟಿಮಗುಟ್ಟುವ ದೀಪವರ್ತಿಯುಂ
ಸಾಗಿಪ ತಾಪಸೇಂದ್ರರ ಕುಮಾರಿಯರೊಪ್ಪುಗುಮಲ್ಲಿ ಸಂತತಂ ೬೪

ದಂತೆ ಮೊಲೆಗಳು ಕೂಡಿ ವಿಶೇಷ ಸುಂದರವಾಗಿದ್ದಿತು. ೬೨. ಇಂದ್ರಕೀಲಪರ್ವತದ ವನವು ದೇವತೆಗಳ ನಂದನವನದಂತೆ ಕಂಗೊಳಿಸುತ್ತಿದ್ದಿತು. ವನದ ಪರವಾಗಿ (i) ದೊಡ್ಡ ಮರಗಳಿಂದಲೂ, ಪುಷ್ಪಗಳ ಪರಿಮಳದಿಂದಲೂ ಸೊಗಸಾಗಿದ್ದಿತು. ನಂದನದ ಪರವಾಗಿ (ii) ಬೃಹಸ್ಪತಿ, ಅಂಗಾರಕ, ದೇವತೆಗಳು, ಕಾಮಧೇನುವಿನಿಂದ ಬೆಳಗುತ್ತಿದ್ದಿತು. (i) ಮದಿಸಿದ ದುಂಬಿಗಳ ಮನೋಹರವಾದ ಝೇಂಕಾರದಿಂದ ಕೂಡಿದ್ದಿತು. (ii) ಮಂಜು ಘೋಷೆಯೆಂಬ ಅಪ್ಸರಸ್ತ್ರೀ ಮುಖ್ಯವಾದ ಹೆಂಗಸರ ಸಮೂಹದಿಂದ ಕೂಡಿದ್ದಿತು. (i) ಗಾಳಿಯಿಂದಲೂ, ಸುರಹೊನ್ನೆಯ ಮರಗಳಿಂದಲೂ ಕೂಡಿದ್ದಿತು. (ii) ಗಾಳಿ ಯಿಂದಲೂ, ಗಂಡಾನೆಯಾದ ಐರಾವತದಿಂದಲೂ ಅಥವಾ ಪುರುಷಶ್ರೇಷ್ಠರಿಂದಲೂ ಕೂಡಿದ್ದಿತು. ೬೩. ತಪೋವನವು ಕೆಂಪುತಾವರೆಹೂಗಳಿಂದಲೂ, ಬಿಳಿಯ ನೈದಿಲೆ ಹೂಗಳಿಂದಲೂ ಸುಂದರವಾಗಿ ಕಾಣುತ್ತಿದ್ದ ಸರೋವರಗಳಿಂದ ಕೂಡಿದ್ದಿತು. ಫಲಭಾರ ದಿಂದ ಬಾಗಿದ ಮರಗಳಿದ್ದುವು. ಅಲ್ಲಿನ ಲತಾಮಂಟಪಗಳು ಪುಷ್ಪಸಂಕೀರ್ಣದಿಂದ ಬಳ್ಳಿ ಗಳಿಂದ ಕೂಡಿದ್ದು, ಅವುಗಳಿಗೆ ಎರಗುತ್ತಿದ್ದ ಮತ್ತಮಧುಕರಗಳಿಂದ ಕಂಗೊಳಿಸುತ್ತಿದ್ದಿತು. ಪವಿತ್ರವಾದ ಯಾಗಮಂಟಪಗಳ ಮೇಲೆ ಬೀಸಿಕೊಂಡು ಬರುವ ಗಾಳಿಯು ಪರಿಮಳ ಯುಕ್ತವಾಗಿದ್ದಿತು. ೬೪. ಅಲ್ಲಿನ ತಪೋವನದಲ್ಲಿ ಋಷಿಕುಮಾರಿಯರಲ್ಲಿ ಕೆಲವರು ಹೂವಿನ ಗಿಡಗಳಿಗೆ ನೀರೆರೆಯುತ್ತಿದ್ದರು ; ಕೆಲವರು ವಿಶೇಷವಾಗಿ ಹೂಗಳನ್ನು ಬಿಡಿಸಿ ತಂದು, ಹೂದಂಡೆಗಳನ್ನು ಕಟ್ಟುತ್ತಿದ್ದರು ; ಕೆಲವರು ಶಿವಪೂಜೆಗೆ ಅರ್ಘ್ಯೋದಕವನ್ನು ತರುತ್ತಿದ್ದರು ; ಮತ್ತೆ ಕೆಲವರು ಸಾವಕಾಶ ಮಾಡದೆ ಪೂಜಾಸಾಮಗ್ರಿಗಳನ್ನು ಒದಗಿಸಿ,

---

೧ ಕೊಯ್ದು (ಚ, ಜ.)

ಮಹಾಸ್ರಗ್ಧರೆ ಪಸಿದೆಯ್ತಂದುಣ್ಬುದಾ ಪೆಣ್ಬುಲಿ[೧]ಯ ಮೊಲೆಯನಲ್ಲಿರ್ದ ಸಾರಂಗಶಾಬಂ
ದ್ವಿಶಿರಂ ತಾಯ್ದಪ್ಪಿ ಪಾಯ್ದೆಂಟಡಿಗೆ ಕುಟುಕನೊಲ್ದೂಡುಗುಂ ದಂತಿಪೋತ
ಪ್ರಸರಕ್ಕಂಗಾಲ್ಗಳೊಳ್ ಮುಳ್ ಮುಱಿದೊಡುಗುರ್ಗಳಿಂ ತೀರ್ಚುಗುಂ ಸಿಂಹಮಾದು
ಬ್ಬಸಮಂ ಸರ್ಪಾರ್ಭಕಕ್ಕಾತಪದೆ ತೊಲಗಿಕುಂ ಬರ್ಹದಿಂ ಬರ್ಹಿಬೃಂದಂ ೬೫

ರವಿ ಬಿಸುಗದಿರಂ ಕಱೆಯಂ
ದವಾಗ್ನಿ ಸವಿಧಸ್ಥಳಂಗಳೊಳ್ ಮೆಯ್ದೋಱಂ
ಪವನಂ ಬಿಱುಬಿಂ ಬೀಸಂ
ಜವನವರೆಡೆಯಾಡಲಣ್ಮರಾ ಮುನಿವನದೊಳ್ ೬೬

ದೇವೇಶ ನಿಮ್ಮ ಪದರಾ
ಜೀವದ ಭಾವನೆಯ ಪೆರ್ಮೆಯೆಂತುಟೊ ಮುನಿಪರ್
ತೀವಿರ್ದ ಬನದ ಪರಿಸರ
ದೋವರಿಯೊಳ್ ಮಿಟ್ಟು ಸುೞಿಯಲಳರ್ವುದ[೨]ಜಸ್ರಂ ೬೭

ಅಣಿಮಾಡುತ್ತಿದ್ದರು ; ಇನ್ನು ಕೆಲವರು ಗಂಧವನ್ನು ತೇಯುತ್ತಿದ್ದರು, ಬೇರೆ ಕೆಲವರು ದೀಪದ ಬತ್ತಿಗಳನ್ನು ಮುಂದಕ್ಕೆ ನೂಕಿ, ದೀಪಗಳ ಪ್ರಕಾಶವನ್ನು ಹೆಚ್ಚಿಸುತ್ತಿದ್ದರು. ೬೫. ಆ ತಪೋವನಗಳಲ್ಲಿ ಜಿಂಕೆಮರಿಯು ಹಸಿದು ಬಂದು ಹೆಣ್ಣುಹುಲಿಯ ಮೊಲೆಗಳನ್ನು ಕುಡಿಯುವುದು ; ತಾಯಿಯನ್ನು ಅಗಲಿ, ಅಲೆಯುತ್ತಿರುವ ಶರಭದ ಮರಿಗೆ (ದ್ವಿಶಿರಂ) ಗಂಡಭೇರುಂಡವು ಪ್ರೀತಿಯಿಂದ ಗುಟುಕನ್ನು ನೀಡುವುದು ; ಆನೆಯ ಮರಿಗಳಿಗೆ ಕಾಲುಗಳಲ್ಲಿ ಮುಳ್ಳು ಚುಚ್ಚಿರಲು, ಅದನ್ನು ಸಿಂಹವು ತನ್ನ ಉಗುರುಗಳಿಂದ ಕಿತ್ತು ತೆಗೆಯುವುದು ; ಬಿಸಿಲಿನ ಬೇಗೆಯಿಂದ ಬಸವಳಿದ ಹಾವಿನ ಮರಿಗಳಿಗೆ, ತನ್ನ ಗರಿಗಳನ್ನು ಹರಡಿ ನವಿಲುಗಳು ನೆರಳನ್ನೀಯುವುವು. (ಮುನಿಗಳ ತಪೋಮಹಿಮೆಯಿಂದ ಅಲ್ಲಿ ನಿರ್ವೈರಭಾವವಿದ್ದಿತು. ಕ್ರೂರಮೃಗಗಳೂ ಸಹ ತಮ್ಮ ಸಹಜ ವೈರಭಾವದಿಂದ ಮುಕ್ತವಾಗಿದ್ದುವು). ೬೬. ಮುನಿಗಳಿದ್ದ ಆ ವನಗಳಲ್ಲಿ ಸೂರ್ಯನು ವಿಶೇಷವಾಗಿ ಬಿಸಿಲನ್ನು ಕಾಯಿಸುತ್ತಿರಲಿಲ್ಲ ; ಸಮೀಪದಲ್ಲೆಲ್ಲಿಯೂ ಕಾಳ್ಗಿಚ್ಚು ಹತ್ತಿಕೊಳ್ಳುತ್ತಿರಲಿಲ್ಲ ; ಗಾಳಿಯೂ ಸಹ ಬಿರುಸಾಗಿ ಬೀಸುತ್ತಿರಲಿಲ್ಲ ; ಯಮನ ಭಟರೂ ಅಲ್ಲಿ ಸುಳಿಯಲು ಸಮರ್ಥರಾಗಿರಲಿಲ್ಲ. (ಸೂರ್ಯ, ಅಗ್ನಿ, ವಾಯು, ಮೃತ್ಯು ಮೊದಲಾಗಿ ಪ್ರಕೃತಿ ಶಕ್ತಿಗಳು ತಪೋವಿಘ್ನವನ್ನು ಮಾಡುತ್ತಿರಲಿಲ್ಲ. ಮುನಿಗಳ ತಪಶ್ಚರಣೆಗೆ ಅನುಕೂಲವಾಗಿ ವರ್ತಿಸುತ್ತಿದ್ದುವು ಎಂದು ಭಾವ). ೬೭. ಮೃತ್ಯುಂಜಯನಾದ ಶಿವನೇ, ನಿನ್ನ ಚರಣ ಕಮಲಗಳ ಧ್ಯಾನದ ಮಹಿಮೆಯು ಅಪರಿಮಿತವಾದುದು. ಮುನಿಗಳ ವಾಸಸ್ಥಳಗಳ

---

೧ ಪೆರ್ಬುಲಿ (ಯ) ೨ ಅಳುವುದ (ರ)

ಮತ್ತೇಭ ಜಡೆಯಂ ಸುಂಕಿಡುವಕ್ಷಮಾಲೆಗಳನೊಳ್ಪಿಂ ಕೋವ ಯೋಗಾಂಗಮಂ
ಬಿಡದಭ್ಯಾಸಿಪ ಜನ್ನಮಂ ನೆಗಟ್ವ ಭಸ್ಮೋದ್ಧೂಳನಂಗೆಯ್ವ ಸ
ನ್ಮೃಡನಂ ಜಾನಿಪ ನಾರಸೀರೆಯನಲಂಪಿಂ ಮಾಟ್ಪ ವೇದಾಂತದಿಂ
ಪಡೆದರ್ಥಂಗಳನಾಲಿಪುಜ್ಜುಗದೊಳಿರ್ಕುಂ ತಾಪಸಪ್ರೋತ್ಕರಂ ೧೮

ಒಡಲಂ ಪುತ್ತಡರ್ದೆತ್ತಲುಂ ಮುಸುಕೆ ಪಾವೆಟ್ಬಾಡೆ ತನ್ಮಸ್ತಕಂ
ಬಿಡದುದ್ಯನ್ನಖಪಂಕ್ತಿ ಬೇರ್ವರಿಯೆ ದೀರ್ಘಶ್ಮಶ್ರುವೊಳ್ ಪಕ್ಕಿ ಗೂ
ಡಿಡೆ ಸುತ್ತಂ ಜಡೆವಳ್ಳಿ ಪರ್ಬಿರೆ ಮೃಡಧ್ಯಾನಾಮೃತಾಸ್ವಾದನಂ
ಬಡೆದುದ್ಯತ್ತಪಮಾಂತು ನಿಶ್ಚಳತೆಯಿಂ ಕಣ್ಗೊಳಿಪ್ಪದರ್ ತಾಪಸರ್ ೧೯

ಸ್ಥಿರಪದ್ಮಾಸನದಿಂದೆ[1] ಸರ್ವಕರಣವ್ಯಾಪಾರಮಂ ಮಾಣ್ದು ಸಂ
ಚರಣಂಬೆತ್ತು ಸುವೃತ್ತಿಯುಂ ತಡೆದುಮಾಜ್ಞಾಚಕ್ರಪಂಕೇಜವಿ
ಷ್ಟರಮಧ್ಯಸ್ಥಿತಮಂಡಲತ್ರಯದಖಂಡಜ್ಯೋತಿಯಂ ಶುದ್ಧಭಾ
ಸುರಚಿಚ್ಚಕ್ಷುವೊಳೀಕ್ಷಿಸುತ್ತೆ ಯಮಿವೃಂದಂ ತಾಳ್ದುಮಾನಂದಮಂ ೨೦

ಸಮೀಪದಲ್ಲೆಲ್ಲೂ ಸುಳಿಯಲು ಮೃತ್ಯುವೇ ಸದಾ ಭಯಪಡುವನು. ೧೮. ತಪಸ್ವಿಗಳ ಸಮೂಹವು ತಮ್ಮ ಜಟೆಗಳನ್ನು ಮುಡಿಗಟ್ಟುತ್ತಲೂ, ರುದ್ರಾಕ್ಷಿಯ ಮಾಲೆಗಳನ್ನು ಪೋಣಿಸುತ್ತಲೂ, ಯಮ, ನಿಯಮಾದಿ ಅಷ್ಟಾಂಗಯೋಗವನ್ನು ನಿರಂತರವೂ ಅಭ್ಯಾಸ ಮಾಡುತ್ತಲೂ, ಯಜ್ಞಗಳನ್ನು ಮಾಡುತ್ತಲೂ, ಭಸ್ಮಧಾರಣೆಯನ್ನು ಮಾಡಿಕೊಳ್ಳು ತ್ತಲೂ, ಶಾಶ್ವತಸುಖಸ್ವರೂಪನಾದ ಶಿವನನ್ನು ಧ್ಯಾನ ಮಾಡುತ್ತಲೂ, ನಾರುಮಡಿ ಗಳನ್ನು ನೇಯುತ್ತಲೂ ಮತ್ತು ಉಪನಿಷತ್ತುಗಳ ತತ್ತ್ವಾರ್ಥಗಳನ್ನು ವಿಚಾರಮಾಡಿ, ನಿರ್ಣಯಿಸಿದ ವಿಷಯಗಳನ್ನು ಶ್ರವಣ ಮಾಡುತ್ತಲೂ ಕಾಲಕಳೆಯುತ್ತಿದ್ದರು. (ಸ್ವಧರ್ಮ ನಿಷ್ಠೆಯಿಂದ ಶಿವಯೋಗಸಾಧನೆ ಮಾಡುತ್ತಿದ್ದರೆಂದು ಅಭಿಪ್ರಾಯ. ೧೯. ಯೋಗಿಗಳು ಚಿರಕಾಲ ನಿಶ್ಚಲಸಮಾಧಿಯಲ್ಲಿ ಕುಳಿತಿರುತ್ತಿದ್ದರು. ಅವರ ಮೈಮೇಲೆ ಹುತ್ತವು ಬೆಳೆದು ಮುಚ್ಚಿದ್ದಿತು. ಹಾವುಗಳು ತಲೆಯ ಮೇಲೆ ಓಡಾಡುತ್ತಿದ್ದುವು. ಉಗುರುಗಳು ಬೆಳೆದು ನೆಲದಲ್ಲಿ ನುಗ್ಗಿ ಬೇರು ಬಿಟ್ಟಿದ್ದುವು. ನೀಳವಾಗಿ ಬೆಳೆದಿದ್ದ ಗಡ್ಡ, ಮೀಸೆಗಳಲ್ಲಿ ಹಕ್ಕಿಗಳು ತಮ್ಮ ಗೂಡನ್ನು ಕಟ್ಟಿಕೊಂಡಿದ್ದುವು. ಸುತ್ತಲೂ ಜಟೆಗಳು ಬಳ್ಳಿಗಳಂತೆ ಹಬ್ಬಿದ್ದುವು. ಶಿವಧ್ಯಾನದಿಂದ ಲಬ್ಧವಾದ ಆನಂದಾಮೃತವನ್ನು ಸವಿದು, ಮುನಿಗಳು ತಪೋವೃದ್ಧಿಯನ್ನು ನಿಶ್ಚಲತೆಯಿಂದ ಮಾಡಿಕೊಳ್ಳುತ್ತಿದ್ದರು. ೨೦. ಇಂದ್ರಿಯ ನಿಗ್ರಹವನ್ನು ಸಾಧಿಸಿದ್ದ ಯೋಗಿಗಳ ಸಮೂಹವು ಸ್ಥಿರವಾದ ಪದ್ಮಾಸನದಲ್ಲಿ ಕುಳಿತು, ಎಲ್ಲಾ ಇಂದ್ರಿಯವ್ಯಾಪಾರವನ್ನೂ ತಡೆದು, ಶ್ವಾಸೋಚ್ಛ್ವಾಸ ಗತಿಯಿಂದ ತಿರುಗು ತ್ತಿರುವ ಪ್ರಾಣಧರ್ಮವನ್ನು ತಡೆದು, ಆಜ್ಞಾಚಕ್ರಕಮಲವೆಂಬ ಪೀಠದಲ್ಲಿ ವಿರಾಜ ಮಾನವಾಗಿ ಬೆಳಗುವ ಸೋಮ, ಸೂರ್ಯಾಗ್ನಿ ರೂಪವಾದ ಅಖಂಡಜ್ಯೋತಿಯನ್ನೂ,

---

೧ ರಾಗಿ (ಯ)

ಮಹಾಸ್ರಗ್ಧರೆ ಪದದೊಂದಂಗುಷ್ಠದಗ್ರಂ ನೆಲಸಿ ನೆಲದೊಳೊಂದುಳ್ಳ್ರಿಯಿಂ ಕೊಂಕಿಗಿಸುತ್ತೆ
ತ್ತಿ ದುರಾಶಾಪಾತಮಂ ನೀಟ್ಕರಿಸಿ ನಿಜಭುಜದ್ವಂದ್ವಮಂ ನೀಡಿ ಮೇಗ
ಣ್ಗೆದಿರೊಳ್ ಸೂರ್ಯಂಗೆ ನಿಂದುಚ್ಚರಿಸುತಭವಸನ್ಮಂತ್ರಮಂ ಜಾನಿಸುತ್ತ
ಗ್ಗದ ಭಾಸ್ವದ್ಭರ್ಗಪಾದಾಂಬುಜಮನಚಲಯೋಗಾನ್ವಿತರ್ ಕಣ್ಗೆವಂದರ್ ೭೧

ಮತ್ತೇಭ ಚಮರೀರಾಜಿ ರಜಂಗಳಂ ಕಳೆಗುಮುದ್ಯದ್ದಂತಿ ನೀರಿಟ್ಟು ಸಂ
ಭ್ರಮದಿಂ ಸಾರಣೆಗೆಯ್ವುದಲ್ಲಿ ಪವನಂ ಪೂದೂಳಿಯಿಂ ರಂಗಮಂ
ಕ್ರಮದಿಂ ಮಾಟ್ಪುದು ಕೇಕಿ ಬರ್ಹದೆಲರಿಂ ಹೋಮಾಗ್ನಿಯಂ ವರ್ಧಿಕುಂ೨
ಸುಮನಃಸ್ತೋಮಲಸತ್ಫಲಪ್ರಸರಮಂ ಶಾಖಾಚರಂ ಸಾರ್ಚುಗುಂ ೭೨

ವಚನ ಮತ್ತಂ

ಮತ್ತೇಭ ಪುಲಿ ಕೃಷ್ಣಾಜಿನಮಂ ಸೆಲಂದಿ ಪೊಸನೂಲಿಂ ನೆಯ್ದು೩ ಪೊಂಟಟ್ಟೆಯಂ
ವಿಲಸದ್ಭೂರುಹರಾಜಿ ವಲ್ಕಲಮನೀಗುಂ ತಾಪಸರ್ಗಲ್ಲಿ ಕಂ
ದಲಸನ್ಮೂಲಮನೊಟ್ಟುಗುಂ ಮೃಗಕುಲಂ ಶೃಂಗಂಗಳಿಂ ಮಿಂಟಿ ತಂ
ದೆಲರೊಳ್ಗಂಪನಮರ್ಚುಗುಂ ಕರಡಿ ತಾಂ ತರ್ಕುಂ ಸಮಿದ್ವೃಂದಮಂ ೭೩

ಲಯ, ವಿಕ್ಷೇಪ, ಕಷಾಯರಹಿತವಾದ ತಮ್ಮ ಜ್ಞಾನನೇತ್ರಗಳಿಂದ ಸಾಕ್ಷಾತ್ಕರಿಸಿ ಆನಂದಿಸುತ್ತಿದ್ದರು. ೭೧. ನಿಶ್ಚಲಾನುಸಂಧಾನದಲ್ಲಿ ಉದ್ಯುಕ್ತರಾದ ಯೋಗಿಗಳು ತಮ್ಮ ಕಾಲಿನ ಹೆಬ್ಬೆರಳನ್ನು ನೆಲದ ಮೇಲೆ ಊರಿಕೊಂಡು, ಮತ್ತೊಂದು ಕಾಲನ್ನು ಮಡಿಚಿ, (ಮೊಣಕಾಲ ಮೇಲಿಟ್ಟು) ದುರಾಸೆಗಳೆಂಬ ಪಾಶಗಳನ್ನು ಸಡಿಲಿಸಿ, ತೋಳ್ಗಳನ್ನು ಮೇಲೆತ್ತಿ, ಅಂಜಲಿಬದ್ಧರಾಗಿ, ಸೂರ್ಯನಿಗೆ ಎದುರಾಗಿ ನಿಂತು, ಶಿವನ ಉತ್ತಮ ಮಂತ್ರಗಳನ್ನು ಉಚ್ಚರಿಸುತ್ತಾ, ದೇದೀಪ್ಯಮಾನವಾದ ಶಿವನ ಪಾದಕಮಲಗಳನ್ನು ಧ್ಯಾನಿಸುತ್ತಿದ್ದರು. ೭೨. ಋಷ್ಯಾಶ್ರಮಗಳಲ್ಲಿ ಚಮರೀಮೃಗಗಳು (ತಮ್ಮ ಬಾಲಗಳಿಂದ) ಕಸವನ್ನು ಗುಡಿಸುವುವು. ದೊಡ್ಡ ದೊಡ್ಡ ಆನೆಗಳು ನೀರನ್ನು ಚೆಲ್ಲಿ ಉತ್ಸಾಹದಿಂದ ಸಾರಿಸುವುವು. ಗಾಳಿಯು ಪುಷ್ಪಪರಾಗವನ್ನು ಉದುರಿಸಿ ರಂಗವಲ್ಲಿಯನ್ನಿಡುವುದು. ನವಿಲು ತನ್ನ ಗರಿಗಳಿಂದ ಬೀಸಿ ಹೋಮಾಗ್ನಿಯು ಪ್ರಜ್ವಲಿಸುವಂತೆ ಮಾಡುವುದು. ಕಪಿಗಳು ಹೂಗಳನ್ನೂ, ಉತ್ಕೃಷ್ಟವಾದ ಫಲಗಳನ್ನೂ ತಂದುಕೊಡುವುವು ! ವಚನ : ಮತ್ತು ೭೩. ಅಲ್ಲಿ ಹುಲಿಯು ಕೃಷ್ಣಾಜಿನವನ್ನು ತಂದು ಮುನಿಗಳಿಗೆ ಕೊಡುವುದು. ಜೇಡನು ಹೊಸ ನೂಲಿನಿಂದ ನೇದ ಹೊಂಬಣ್ಣದ ವಸ್ತ್ರಗಳನ್ನು ತಂದುಕೊಡುವುದು. ವೃಕ್ಷಸಮೂಹವು ನಾರಿನ ವಸ್ತ್ರಗಳನ್ನು ಕೊಡುವುದು. ಮೃಗಗಳು ತಮ್ಮ ಕೊಂಬುಗಳಿಂದ ಅಗೆದು ತಂದು ಗೆಡ್ಡೆ ಗೆಣಸುಗಳನ್ನು ರಾಶಿಹಾಕುವುವು. ಗಾಳಿಯು ಪರಿಮಳದಿಂದ ಕೂಡಿ

---

೧ ಸೊಂಕಿ (ಜ) ೨ ಹೊದ್ದಿಕುಂ (ಚ) ೩ ನೆಯ್ದ (ವ).

ಚಂಪಕ ಫಣಿಮಣಿದೀಪಮಂ ಬೆಳಗಿ ದೀಪದ ಕಂಬದ ಮಾಟ್ಕೆಯಿಂ ಲಸತ್
ಫಣಿತತಿ ಸಾರ್ದು ನಿಲ್ಗುಮಿರುಳಪ್ಪುದುಮೊಲ್ದುಟಜಂಗಳಲ್ಲಿ ಮ
ನ್ನಣೆವಡೆದೋದುಗುಂ ಗಿಳಿ ಪುರಾಣಮನಲ್ಲಿಯ ದಿವ್ಯಧೇನುಗಳ್
ಪ್ರಣಯದೆ ತನ್ಮಖಾಹುತಿಗೆ ಬೇಳ್ಪ ಸುಧಾರಸಮೀವುವಾಗಳುಂ ೭೪

ಬಡವಾದೊಡಲತಿವೃದ್ಧರ
ಗಡಣಕೆ ಬೆನ್ನಿತ್ತು ಪೊತ್ತು ಕೇಸರಿಗಳ್ ಸಂ
ಗಡವೆಯ್ದುಗುಮಾ ನದಿಯಿಂ
ಪೆಡೆಯುತ್ತಲ್ ಕೊಂಡು ಪೋಪುವಂಚೆಗಳವರಂ ೭೫

ಮಹಾಸ್ರಗ್ಧರೆ ಶುಕ ಮಾರ್ಕಂಡೇಯ ಬೋಧಾಯನ ಕಪಿಲ ಕಣಾದಾಕ್ಷಪಾದಾತ್ರಿ ಮೈತ್ರೇ
ಯಕ ಕಣ್ವಾಗಸ್ತ್ಯಪಾರಾಶರ ಭೃಗು ೧ವಿಮದರ್ ಸೂತ೧ ವಾಲ್ಮೀಕಿಗಳ್ ಶೌ
ನಕ ವಿಶ್ವಾಮಿತ್ರ ಧೌಮ್ಯ ಚ್ಯವನ ದಮನ ಶಾತಾತಪರ್ ಪೂರ್ಣಭದ್ರಾ
ದ್ಯಕರಿರ್ದರ್ ತತ್ತಪೋನಂದನದೊಳಘಹರಧ್ಯಾನಸಾಂದ್ರರ್ ಮುನೀಂದ್ರರ್ ೭೬

ಬೀಸುವುದು. ಕರಡಿಯು ಸಮಿತ್ತುಗಳನ್ನು ಆಯ್ದು ತಂದೀಯುವುದು ! ೭೪. ರಾತ್ರಿಯಾಗಲು ಸರ್ಪಗಳು ದೀಪಸ್ತಂಭಗಳಂತೆ ಸಾಲಾಗಿ ನಿಂತು, ತಮ್ಮ ಹೆಡೆಗಳಲ್ಲಿನ ಮಣಿ ಪ್ರಕಾಶದಿಂದ ದೀಪವನ್ನು ಬೆಳಗುವುವು. ಆಶ್ರಮದಲ್ಲಿ ಗಿಳಿಗಳು ಪುರಾಣಗಳನ್ನು ಓದಿ, ಅಲ್ಲಿನ ಋಷಿಗಳಿಂದ ಮೆಚ್ಚುಗೆಯನ್ನು ಪಡೆಯುವುವು ! ಆಶ್ರಮದ ಉತ್ತಮವಾದ ಹಸುಗಳು ಪ್ರೀತಿಯಿಂದ ಯಜ್ಞದ ಹೋಮಕ್ಕೆ ಬೇಕಾಗುವ ಹಾಲನ್ನು ಯಾವಾಗಲೂ ಕೊಡುವುವು. ೭೫. ಅತಿಕೃಶರಾಗಿದ್ದ ಋಷಿಗಳ ಸಮೂಹವನ್ನು ತಮ್ಮ ಬೆನ್ನ ಮೇಲೆ ಹೊತ್ತು ಸಿಂಹಗಳು ನಡೆಯುವುವು. ಹಂಸಗಳು ಅವರ ಜತೆಯಲ್ಲಿ ನಡೆದು, ಅವರನ್ನು ನದಿಯಿರುವ ಜಾಗಕ್ಕೆ ಕರೆದುಕೊಂಡು ಹೋಗುವುವು ! ೭೬. ಆ ತಪೋವನಗಳಲ್ಲಿ ದುರಿತಹರನಾದ ಶಿವನ ಧ್ಯಾನದಲ್ಲಿ ತಲ್ಲೀನರಾಗಿದ್ದ ಶುಕಮಹರ್ಷಿ*ಗಳು, ಮಾರ್ಕಂಡೇಯಮುನಿಗಳು, ಬೋಧಾಯನರು, ಕಪಿಲರು, ಕಣಾದರು, ಅಕ್ಷಪಾದರಾದ ಗೌತಮರು, ಅತ್ರಿಗಳು, ಮೈತ್ರೇಯರು, ಕಣ್ವರು, ಅಗಸ್ತ್ಯರು, ವ್ಯಾಸರು, ಭೃಗುಗಳು, ನಿರ್ಮದರಾದ ಸೂತರು, ವಾಲ್ಮೀಕಿಗಳು, ಶೌನಕರು, ವಿಶ್ವಾಮಿತ್ರರು, ಧೌಮ್ಯರು, ಚ್ಯವನರು, ದಮನರು,

---

೧–೧ ಸನಕಾತ್ರೇಯ (ಯ)

* ವಿವರಗಳಿಗೆ ಅನುಬಂಧವನ್ನು ನೋಡಿ.

ಚಂಪಕ ತೊಳಪ ಕಿರೀಟಮುಜ್ವಳಮೃದುಸ್ಮಿತವಕ್ತ್ರಮನೂನಕಾಂತಿ ಸಂ
ಗಳಿಸಿದ ಕಾಯಮಾಂತ ಶರಚಾಪಮಡಾಯುಧಮಾಳ್ದ ಬೆನ್ನ ಬ
ತ್ತಳಿಕೆ ನವೀನ[೧]ಭೂಷಣಚಯಂ[೧] ಮೆಱೆಯುತ್ತಿರೆ ಬಂದನಲ್ಲಿಗ
ಚ್ಚಳಿಯದ ಜವ್ವನಂ ಮಿಸುಪ ಸೌಂದರ[೨]ನೊರ್ವನಪೂರ್ವವಿಭ್ರಮಂ ೭೭

ವಚನ ಅಂತೆಯ್ತಂದು ಗಿರಿಕಂದರದ ತತ್ತಪೋವನಮನವಂ ಪೊಕ್ಕು

ಮಹಾಸ್ರಗ್ಧರೆ ತತವಿಧ್ಯುಕ್ತಪ್ರಕಾರಂ ಮಿಗೆ ಸದಮಳತೀರ್ಥಾಂಬು[೩]ವಿಂ ಮಿಂದು ಶೈವ
ವ್ರತಮಂ ಕೈಕೊಂಡು ತಾಳ್ದು[೪]ಂ ಸುಸಿತಭಸಿತರುದ್ರಾಕ್ಷಮಾಲಾಳಿಯಂ ವಿ
ಶ್ರುತತತ್ತನ್ಮಂತ್ರದಿಂ ಮಂಗಳಮಯತನು ತಾನಾದನತ್ಯಂತಶಾಂತಿ
ಸ್ಥಿತಿಗಿತ್ತು[೫]ಂ ಚಿತ್ತಮಂ ತನ್ಮುನಿ ಶಿವಪದಸದ್ಭಕ್ತಿಸಂಪತ್ಪ್ರಯುಕ್ತಂ ೭೮

ವಚನ ಆಗಳಿಂತೆಸೆದಲ್ಲಿ ಪೆಸರ್ವೆತ್ತು[೬] ಮಿಸುಪ ಸರಸಸರೋವರದ ಪರಿಸರದ ಶುಕನಿಕರ ಮುಖವಿದಾರಿತಸಾರ[೭] ಸಹಕಾರ ಖರ್ಜೂರ ಕದಳೀ ಜಂಬೂ ದ್ರಾಕ್ಷಾದಿ ಪರಿಪಕ್ವಫಳಕುಳಕ್ಷರಿತ ಮಧುರ

ಶಾತಾತಪರು ಮತ್ತು ಪೂರ್ಣಭದ್ರರೇ ಮೊದಲಾದ ಮುನಿಶ್ರೇಷ್ಠರಿದ್ದರು. ೭೭. ಆ ತಪೋವನಕ್ಕೆ ನಾವುಗಳು ಹಿಂದೆಂದೂ ಕಂಡರಿಯದ ರೀತಿಯಿಂದ ಮೆರೆಯುತ್ತಿದ್ದ ಒಬ್ಬ ಸುಂದರ ಯುವಕನು ಬಂದನು. ಅವನ ಭೂಷಣಗಳು ವಿಚಿತ್ರವಾಗಿದ್ದುವು. ಬೆಳಗುತ್ತಿದ್ದ ಕಿರೀಟವನ್ನು ಧರಿಸಿದ್ದನು. ಎಳೆನಗೆಯ ಕಾಂತಿಯಿಂದ ಕೂಡಿದ ಸುಂದರವಾದ ಮುಖ, ತೇಜಸ್ಸಿನಿಂದ ಮಿರುಗುತ್ತಿದ್ದ ದೇಹಕಾಂತಿ, ಬಿಲ್ಲು, ಬಾಣಗಳು, ಗುರಾಣಿಯನ್ನು ಧರಿಸಿದ್ದನು. ಬೆನ್ನಿಗೆ ಬತ್ತಳಿಕೆಯನ್ನು ಬಿಗಿದಿದ್ದನು. ಅವನಿಗೆ ಯೌವನವು ಉಕ್ಕೇರುತ್ತಿದ್ದಿತು. ವಚನ : ಈ ರೀತಿಯಲ್ಲಿ ಬಂದವನು ಬೆಟ್ಟದ ತಪ್ಪಲಿನ ಒಂದು ತಪೋವನವನ್ನು ಪ್ರವೇಶಿಸಿ, ೭೮. ಶಾಸ್ತ್ರಗಳಲ್ಲಿ ವಿಸ್ತಾರವಾಗಿ ನಿರೂಪಿಸಿರುವ ರೀತಿಯಲ್ಲಿ ಪುಣ್ಯತೀರ್ಥದ ನಿರ್ಮಳೋದಕದಲ್ಲಿ ಸ್ನಾನಮಾಡಿ, ಶಿವದೀಕ್ಷೆಯನ್ನು ಸ್ವೀಕರಿಸಿ, ಉತ್ತಮ ಕಾಂತಿಯಿಂದ ಕೂಡಿದ ವಿಭೂತಿಯನ್ನು ಹಚ್ಚಿಕೊಂಡು, ರುದ್ರಾಕ್ಷಿಮಾಲೆಗಳನ್ನು ಧರಿಸಿ ಶುಚಿಯಾದವನು. ಆ ಮುನಿಯು ಶಿವನ ಚರಣಕಮಲಗಳನ್ನು ಧ್ಯಾನಿಸುತ್ತಾ ಪರಮ ಶಾಂತಚಿತ್ತನಾಗಿದ್ದನು. ವಚನ : ಅಲ್ಲಿ ನಿರ್ಮಲೋದಕವು ತುಂಬಿದ್ದ ಸರೋವರವಿದ್ದಿತು. ಅದರ ದಂಡೆಯಲ್ಲಿ ಮಾವಿನಮರಗಳೂ, ಖರ್ಜೂರದ ಗಿಡಗಳೂ, ಬಾಳೆ ಗಿಡಗಳೂ, ನೇರಳೆ ಗಿಡಗಳೂ ಮತ್ತು ದ್ರಾಕ್ಷಿಯ ಬಳ್ಳಿಗಳೂ ಇದ್ದುವು. ಅವುಗಳು

---

೧-೧ ತಾಪಸಗುಣಂ (ರ) ೨ ಸುಂದರ (ಯ, ರ) ೩ ತೀರ್ಥಾಂಬುವಂ (ಯ) ೪ ತಾಳ್ದಂ (ಕ, ಯ) ೫ ಗಿತ್ತುಂ (ತ, ಗ) ೬ ಪೆರ್ಮೆವೆತ್ತು (ಯ) ೭ ಸರಸ (ಚ)

ತರ ರಸವಿಸರಪ್ರವಾಹದ ಪರಿಕಾಲ್ಗಳಿಂ ಬಳಸಿದ ಪರಮ ಕೈವಲ್ಯಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಮಳಕೋಮಳದಳತ್ರಯ ವಿಳಸಿತಸರಳಶಾಖಾನಿಕಾಯಾಗಿಕಲಿತ ಬಿಲ್ವವೃಕ್ಷದ ಕೆಳಗೆ ನಿಲ್ವುದುಂ,ತಪಸ್ಸ ಮುಚಿತ ಸ್ಥಳಮಿದಪ್ಪುದಿಲ್ಲಿಯೇ ನಿಲ್ಲೆಂಬ ಗಗನಗಂಭೀರವಾಣಿಯಂ ಕೇಳ್ದು ಮಹೋತ್ಸವಂದಾಳ್ದು ತದ್ವೃಕ್ಷಮೂಲಮನಾಶ್ರಯಿಸಿ ನಿಂದು

ಚಂಪಕ ಅರೆಮುಗುಳ್ದಕ್ಷಿಗಳ್ ಮಿಡುಕುಗುಂದದ ಚೆಂದುಟಿ ನಿಶ್ಚಳಾಂಗಮು
ರ್ವರೆಯೊಳಿ ತಳ್ತ ಕಾಲ್ವುದಿ ಸಮುದ್ಧೃತಬಾಹುಗೆ ಬದ್ಧಚಾಪಭಾ
ಸುರತರಖಡ್ಗಮುಗ್ಗದ ಕಠಾರಿಯಡಾಯುಧಮಾಳ್ದ ಬೆನ್ನ ವಿ
ಸ್ಫುರಿತ ನಿಷಂಗವೊಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ ೭೯

ತುದಿಗೊಳಿಸಿದಂಘ್ರಿಯಿಂದೆ
ತ್ತಿದ ಭುಜದಿಂ ನಿಮಿರ್ದ ದೇಹದಿಂ ನಿಳ್ಕದಿ ಚಿತ್
ಪದಮಂ ಮುಟ್ಟುವೆನೆಂದೋ
ವದೆ ನಿಮಿರ್ದೋರಂತೆ ನಿಂತ ಮಾಬ್ಕೆಯೊಳೆಸೆದಂ ೮೦

ವಚನ ಆಗಳಾ ಪೊಸತಪಸ್ವಿ ತಪಮಿರ್ಪೆಡೆಯಱಿದು ಪುರಂದರಂ ಧರಾಮರಾಕಾರಮಂ ತಾಳ್ದಿಟ್ಟಂದು ಕಟ್ಟಿದಿರೊಳ್ ನಿಂದು ನಿರೀಕ್ಷಿಸಿ ಘನಗಂಭೀರಧ್ವನಿಯಿಂದಿಂತೆಂದಂ

ಫಲಗಳಿಂದ ತುಂಬಿದ್ದುವು. ಗಿಳಿಗಳು ಆ ಹಣ್ಣುಗಳನ್ನು ಕೊಕ್ಕಿನಿಂದ ಸೀಳಿದಾಗ, ಕೆಳಗೆ ಸೋರಿದ ಸಿಹಿಯಾದ ರಸವೇ ಕೂಡಿ, ಪ್ರವಾಹವಾಗಿ ಹರಿಯಲು ಅದರಿಂದ ಪರಿವೃತ ವಾಗಿ, ಪರಮಕೈವಲ್ಯದ ಕಲ್ಪವೃಕ್ಷದಂತೆ ಶೋಭಿಸುತ್ತಲಿದ್ದ, ಉತ್ತಮವಾದ ಮೂರೆ ಸಳುಗಳಿಂದ ಕೂಡಿದ ಕುಡಿಗಳುಳ್ಳ ಮತ್ತು ಕೊಂಬೆಗಳನ್ನು ನೆಟ್ಟಗೆ ಚಾಚಿಕೊಂಡು ಬೆಳೆದಿದ್ದ ಬಿಲ್ವಮರದ ಕೆಳಗೆ ಆ ಮುನಿಯು ನಿಂತನು. 'ಇದು ತಪಸ್ಸಿಗೆ ಯೋಗ್ಯವಾದ ಸ್ಥಳ. ಇಲ್ಲಿ ನಿಲ್ಲು' ಎಂದು ಆಕಾಶವಾಣಿಯಾಯಿತು. ಅದನ್ನು ಕೇಳಿ, ಅತ್ಯಂತ ಹರ್ಷ ಚಿತ್ತನಾಗಿ, ಆ ಮರದ ಬುಡವನ್ನು ತನ್ನ ತಪಶ್ಚರಣೆಗಾಗಿ ಅವನು ಆಶ್ರಯಿಸಿದನು. ೭೯. ತುದಿಕಾಲ ಮೇಲೆ ನಿಂತು, ತೋಳ್ಗಳನ್ನು ಮೇಲೆತ್ತಿ, ನಿಶ್ಚಲನಾಗಿ, ಕಣ್ಣುಗಳನ್ನು ಅರೆಮುಚ್ಚಿ, ನಿರಂತರ ಜಪದಿಂದ ತುಟಿಗಳು ಕಂಪಿಸುತ್ತಿರಲು ಅವನು ತಪಸ್ಸನ್ನು ಪ್ರಾರಂಭಿಸಿದನು. ಬಿಲ್ಲು ಬಾಣಗಳನ್ನೂ, ಕತ್ತಿ ಗುರಾಣಿಗಳನ್ನೂ, ಬೆನ್ನಿನಲ್ಲಿ ಬತ್ತಳಿಕೆ ಯನ್ನೂ ಧರಿಸಿ, ವಿಪರೀತ ವೇಷದ ತಪಸ್ವಿಯಂತೆ ಅವನು ಕಂಗೊಳಿಸಿದನು. ೮೦. ಎಟುಕದ ಜ್ಞಾನಘನವಸ್ತುವನ್ನು ಮುಟ್ಟುವಂತೆ, ತುದಿಗಾಲನ್ನು ನೆಲಕ್ಕೆ ಊರಿ, ಭುಜಗಳನ್ನು ಮೇಲಕ್ಕೆತ್ತಿ, ಶರೀರವನ್ನು ನೆಟ್ಟಗೆ ಮಾಡಿಕೊಂಡು ನಿಂತ ರೀತಿಯ ಅವನು ಯಾವ ವಿಚಾರಗಳಿಂದಲೂ ವಿಚಲಿತನಾಗದೆ ಪ್ರಯತ್ನಿಸುವಂತಿದ್ದಿತು. ವಚನ : ಆ ಸಮಯದಲ್ಲಿ ದೇವೇಂದ್ರನು ಬ್ರಾಹ್ಮಣವೇಷವನ್ನು ಧರಿಸಿ, ಈ ಹೊಸ ಬಗೆಯ

---

೧ ಕಾಯ (ಚ, ತ) ೨–೩ ಬಾಹುನಿಬದ್ಧ (ಯ) ೩ ನೀಳ್ಕದ (ರ)

ಮೃಗಮದಕೆ ಕರ್ದಮಕೆ ಸಂ
ಪಗೆಯಲರ್ಗಳ ಸರಕೆ ಸರವಿಗೊಳ್ಮುತ್ತಿನ ಮಾ
ಲೆಗೆ ಗಾಜುದೊಡಿಗೆಗಾವುದು
ಬಗೆವೊಡೆ ಸಂಪರ್ಕಮಾಂಪ ಭೂಷಣವಿಧಿಯೊಳ್ ೮೧

ಚಂಪಕ ಕರಜಪಮಾಲೆಯೆತ್ತ ಪೊಸಕೂರಸಿಯೆತ್ತ ವಿಭೂತಿಲಿಪ್ತ ವಿ
ಸ್ಫುರಿತಶಿವಾಕ್ಷಮಾಲ್ಯವಪುವೆತ್ತ ನಿಬದ್ಧನಿಷಂಗಚಾಪವ
ಲ್ಲರಿ ಮಿಸುಪಂಗಮೆತ್ತ ಘನಶಾಂತಿ[1] ಸಮುನ್ನತಿಯೆತ್ತ ನಿನ್ನ ಭೀ
ಕರತರವೇಷಮೆತ್ತ ಪಿರಿದದ್ಭುತಮದ್ಭುತಮೇನನೆಂದಪೆಂ ೮೨

ತಪಮಿರ್ಪ ತಾಪಸರನಾ
ನಪರಿಮಿತರನಱಿವೆನಭವವೇಷಾಂಕಿತರಂ
ವಿಪರೀತವೇಷಧರ ನಿ
ನ್ನುಪಮೆಯ ಕಿತ್ತಡಿಯನೆಲ್ಲಿಯುಂ ಕಂಡಱಿಯೆಂ ೮೩

ವಚನ ಎಂದು ನುಡಿದಾಖಂಡಲನ ತಪೋವಿಡಂಬನೋಕ್ತಿಯನವನಾಕರ್ಣಿಸಿ ಕಣ್ದೆ ಱೆದಭೀಕ್ಷಿಸಿ

ತಪಸ್ವಿಯು ತಪಸ್ಸನ್ನು ಮಾಡುತ್ತಿದ್ದಲ್ಲಿಗೆ ಬಂದು, ಎದುರಿನಲ್ಲಿ ನಿಂತು, ಅವನನ್ನು ನೋಡುತ್ತಾ, ಮೇಘಗಂಭೀರವಾದ ಧ್ವನಿಯಿಂದ ಹೇಳಿದನು. ೮೧. "ಕಸ್ತೂರಿಯೆಲ್ಲಿ ? ಕೆಸರೆಲ್ಲಿ ? ಸಂಪಗೆಹೂವಿನ ದಂಡೆಯೆಲ್ಲಿ ? ಹುಲ್ಲಿನ ಹಗ್ಗವೆಲ್ಲಿ ? ಉತ್ಕೃಷ್ಟವಾದ ಮುತ್ತಿನ ಹಾರವೆಲ್ಲಿ ? ಗಾಜಿನ ಆಭರಣಗಳೆಲ್ಲಿ ? ಭೂಷಣವಿಧಿಲ್ಲಿಯೆ ? ಏನಾದರೂ ಸಂಬಂಧವುಂಟೇ ? (ಸರವಿ = ಹುಲ್ಲಿನ ಹಗ್ಗ) ೮೨. "ಕೈಯಲ್ಲಿ ಜಪಮಾಲೆಯನ್ನು ಧರಿಸಿರುವುದೆಲ್ಲಿ ? ಹರಿತವಾದ ಖಡ್ಗವನ್ನು ಧರಿಸಿರುವುದೆಲ್ಲಿ ? ದೇಹವನ್ನು ಭಸ್ಮ ಧಾರಣೆಯಿಂದಲೂ, ರುದ್ರಾಕ್ಷಿಮಾಲೆಗಳಿಂದಲೂ ಅಲಂಕರಿಸಿರುವುದು ಎಲ್ಲಿ ? ಬಿಲ್ಲು, ಬಾಣಗಳು, ಬಿಗಿದಿರುವ ಬತ್ತಳಿಕೆಗಳಿಂದ ಕೂಡಿದ ಅಂಗವೆಲ್ಲಿ ? ವರ್ಧಿಸುತ್ತಿರುವ ಶಾಂತಿ ಎಲ್ಲಿ ? ಈ ಭಯಂಕರವಾದ ವೇಷವೆಲ್ಲಿ ? ಏನು ಹೇಳಲಿ, ಬಹಳ ಆಶ್ಚರ್ಯವಾಗುವುದು". ೮೩. "ಶಿವದೀಕ್ಷೆಯನ್ನು ಸ್ವೀಕರಿಸಿ ತಪಸ್ಸನ್ನಾಚರಿಸುತ್ತಿರುವ ಎಷ್ಟೋ ಮುನಿಗಳನ್ನೂ ನಾನು ನೋಡಿರುವೆನು. ಆದರೆ, ಎಲೈ ವಿಪರೀತ ವೇಷಧಾರಿಯೆ, ನಿನ್ನಂತಹ ತಪಸ್ವಿಯನ್ನು ಮಾತ್ರ ನಾನು ನೋಡಿಲ್ಲ." ವಚನ: ಎಂದು ತನ್ನ ತಪಸ್ಸನ್ನು ಪರಿಹಾಸ್ಯ ಮಾಡುವ ರೀತಿಯಲ್ಲಿ ಇಂದ್ರನು ಹೇಳಿದ ಮಾತುಗಳನ್ನು ಕೇಳಿ, ಕಣ್ಣನ್ನು

---

[1] ಶಾಂತ (ಚ)

ಪೊಱಮೆಯ್ಯ ವೇಷದಿರವೇ
ತೆಱನಾದೊಡಮೇನೊ ಮಾನಸಾಬ್ಜಾಂತರದೊಳ್
ಕಱೆಗೊರಲನಂಘ್ರಿದಳೆದ
ಟ್ಕೆಱೊಳಾಂಗಿ ಜಾನಿಸಿ ಮಹೇಶನಂ ಮೆಚ್ಚಿಸುವೆಂ ೮೪

ವಚನ ಎನೆ ಮತ್ತಮಿಂದ್ರನಿಂತೆಂದಂ

ಮತ್ತೇಭ ಬಿಡದತ್ಯುಗ್ರತಪಂಗಳಂ ತಳೆದುಮತ್ಯಾಯಾಸದಿಂ ಯೋಗಿಗಳ್
ಮೃಡಸಂದರ್ಶನಮಂ ವಲಂ ಪಡೆಯರೆಂದುಂ ಕಾಣವಾಮ್ನಾಯಮಾ
ವೆಡೆಯೊಳ್ ದುರ್ಲಭನೀಶನಂತವನನೆಂತುಂ ಕಾಣ್ಬೆನೆಂದಿರ್ಪೆ ನೀಂ
ಗಡ ನಿನ್ನೀ ಪೃಥುಸಾಹಸಂಬಡೆಱಿದುವೆನ್ನೊಳ್ ಪೆರ್ಚಿದಾಶ್ಚರ್ಯಮಂ ೮೫

ಅತಿಸುಖಿ ನೀಂ ಸುಕುಮಾರಂ
ಪ್ರತಿದಿನಮಾಭೀಳತಪಮನೆಂತೆಸಗುವೆ ಪೇೞ್
ಸಿತಗ[3] ಶಿತಿಕಂಠನಲ್ಪ
ವ್ರತಕ್ಕೆ ತನುತರತಪಕ್ಕಮೇನೊಲ್ದಪನೇ ೮೬

ಪೆಱವಂ ಮರದುದಿಯ ಮಹಾ
ಫಳಮಂ ಮಿಗೆ ಬಯಸುವಂತೆ ತನಗಸದಳಮಂ
ತಿಳಿಯದೆ ಕಜ್ಜಮನೆಸಗುವ
ಬಳರಹಿತಂ ಜಗದ ನಗೆಗೆ ಪಕ್ಕಾಗಿರನೇ ೮೭

ಬಿಟ್ಟು ಅವನನ್ನು ನೋಡುತ್ತಾ, ಅರ್ಜುನನು ೮೪. "ಹೊರಗಿನ ವೇಷವು ಯಾವ ರೀತಿಯಿದ್ದರೆ ತಾನೆ ಏನು ? ನಾನು ಹೃದಯಕಮಲದಲ್ಲಿ ನೀಲಕಂಧರನಾದ ಶಿವನ ಚರಣವನ್ನು ಧ್ಯಾನಿಸುತ್ತಾ, ಪರಮೇಶ್ವರನನ್ನು ಮೆಚ್ಚಿಸುವೆನು" ಎಂದನು. ವಚನ: ಅದಕ್ಕೆ ಇಂದ್ರನು, ೮೫. "ಮಹೋಗ್ರ ತಪಸ್ಸನ್ನು ಮಾಡುತ್ತಾ ಕಷ್ಟಪಡುತ್ತಲಿದ್ದರೂ ಯೋಗಿಗಳೇ ಶಿವನ ಸಾಕ್ಷಾತ್ಕಾರವನ್ನು ಪಡೆಯಲಾರರು. ವೇದಗಳೇ ಅವನನ್ನೆಲ್ಲಿಯೂ ಕಂಡಿಲ್ಲ. ಪರಮೇಶ್ವರನೇನು ಸುಲಭಸಾಧ್ಯನೆ ? ಹೀಗಿರುವಾಗ, ನೀನು ಅವನನ್ನು ಕಾಣುತ್ತೇನೆ ಎನ್ನುವೆಯಲ್ಲವೆ ? ನಿನ್ನ ಈ ವಿಪರೀತ ಸಾಹಸವು ನನ್ನ ಆಶ್ಚರ್ಯವನ್ನು ಹೆಚ್ಚಿಸುತ್ತಿದೆ. ೮೬. "ಬಹಳ ಸುಖದಲ್ಲಿ ಬೆಳೆದ ಕೋಮಲಗಾತ್ರನು ನೀನು. ಪ್ರತಿನಿತ್ಯವೂ ಘೋರವಾದ ತಪಸ್ಸನ್ನು ಹೇಗೆ ತಾನೆ ಮಾಡುತ್ತೀಯೆ ? ಎಲೈ ಉದ್ಧತನೆ, ಶಿವನಾದರೋ ಸ್ವಲ್ಪ (ಸಿತಗ=ಉದ್ಧತ) ಸಾಧನೆಗಾಗಲೀ, ಕಡಿಮೆಯಾದ ತಪಸ್ಸಿಗೇ ಆಗಲಿ ಒಲಿಯುವನೇ ? ಹೇಳು, ೮೭. "ಕುಂಟನೊಬ್ಬನು ಮರದ ತುದಿಯಲ್ಲಿರುವ ದೊಡ್ಡ ಹಣ್ಣನ್ನು ಕಂಡು ಅದಕ್ಕೆ ಆಶೆಪಡುವಂತೆ, ತನಗೆ ಸಾಧ್ಯವಲ್ಲದ ಕಾರ್ಯದಲ್ಲಿ ಪ್ರವೃತ್ತನಾದ ದುರ್ಬಲನು

---

೧ ಱಿನಾಂ (ರ) ೨ ಪಡೆ (ಯ) ೩ ಕೃತಿಯೆ (ರ)

ಮುನ್ನೆಂದುಂ ತಪಮಱಿಯದ
ನಿನ್ನಿರವೆತ್ತಭವನೊಲ್ಮೆ ತಾನೆತ್ತ ಪೊದ
ಟ್ಟುನ್ನತಿಕೆಗೆಡದೆ ತಳರೆನೆ
ತನ್ನಗರಿಪು ನಗುತೆ ಮತ್ತಮುಗಿವನಿಂತೆಂದಂ ೮೮

ಶಾರ್ದೂಲ ನೀನೆಂದುಕ್ತಿಯೆ ಸತ್ಯಮಾಗಮಚಯಕ್ಕಂ ತಾಪಸರ್ಗಂ ಭವಾ
ನೀನಾಥಂ ಸಲೆ ದುರ್ಲಭಂ ಪರಿಕಿಪಂದಂತಾದೊಡಂ ಭಕ್ತಿಸಂ
ಧಾನಕ್ಕಾತನಸಾಧ್ಯನಲ್ತು ದಿಟಮುದ್ಯದ್ಭಕ್ತಿಯಿಂ ತತ್ಪದ
ಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪೆಂ ೮೯

ಚಂಪಕ ಬೆಸನಮನೇೞನೊತ್ತರಿಸಿ ಷಡ್ರಿಪುವರ್ಗಮನೊತ್ತಿ ಮೆಟ್ಟಿ ಬಾ
ಧಿಸುವ ಹೃಷೀಕಸಂಚಯಮನಳ್ಕಿಸಿ ದುರ್ಮದಮೆಂಟನಿಕ್ಕಿ ಬಂ
ಧಿಸಿ ಪೋಜಿಸೂಸದಂತುಸಿರನರ್ದಿಸಿ ಕಾಯಗುಣಂಗಳಂ ಮನಂ
ಮಿಸುಕದ ಮಾೞ್ಕೆಯಿಂ ತಡೆದು ಭಕ್ತಿಯೊಳಾಂ ಪಿಡಿವೆಂ ಮೃಡಾಂಘ್ರಿಯಂ ೯೦

ನಗೆಗೀಡಾಗುವುದಿಲ್ಲವೇ ? ೮೮. "ಹಿಂದೆ ಯಾವಾಗಲೂ ತಪಸ್ಸನ್ನು ಮಾಡಿದ ಅನುಭವವಿಲ್ಲದ ನೀನೆಲ್ಲಿ ? ಭವರಹಿತನಾದ ಶಿವನ ಅನುಗ್ರಹವೆನ್ನುವುದು ಎಲ್ಲಿ ? ಇರುವ ನಿನ್ನ ಗೌರವ ಕೀರ್ತಿಗಳಿಗೆ ಕಳಂಕವನ್ನು ತಂದುಕೊಳ್ಳದೆ, ನೀನು ಹೊರಟುಹೋಗು" ಎಂದು ಇಂದ್ರನು ಹೇಳಲು, ಆದಕ್ಕೆ ಉತ್ತರವಾಗಿ ಅರ್ಜುನನು ನಗುತ್ತ ಹೇಳಿದನು. ೮೯. "ನೀನು ಹೇಳಿದ ಮಾತೇನೋ ನಿಜವೆ. ವೇದರಾಶಿಗಳಿಗೂ, ಮಹಾತಪಸ್ವಿಗಳಿಗೂ, ಪಾರ್ವತೀರಮಣನಾದ ಶಿವನು ಪರೀಕ್ಷಿಸಿದರೆ ದುರ್ಲಭನೇನೋ ಸರಿಯೆ ; ಹಾಗಿದ್ದರೂ ಭಕ್ತಿಯ ಅನುಸಂಧಾನಕ್ಕೆ ಅವನು ಒಲಿಯುವವನೆಂಬುದು ನಿಜವೆ. ವಿಶೇಷ ಭಕ್ತಿಯಿಂದ ಅವನ ಪಾದಧ್ಯಾನ ಮಾಡುತ್ತಾ, ಗಾಢವಾಗಿ ಉಗ್ರ ತಪಸ್ಸನ್ನಾಚರಿಸಿ, ಆ ದಯಾಸಮುದ್ರನನ್ನು ಒಲಿಸಿಕೊಳ್ಳುವೆನು. ೯೦. "ಏಳು ವ್ಯಸನಗಳ ಹವ್ಯಾಸವನ್ನು ಬಿಟ್ಟು, ಅರಿಷಡ್ವರ್ಗಗಳನ್ನು ಮೆಟ್ಟಿ ತುಳಿದು, ಪೀಡಿಸುವ ಇಂದ್ರಿಯಾಕರ್ಷಣೆಗಳನ್ನು ದೂರಮಾಡಿ, ಅಷ್ಟಮದ[1]ಗಳನ್ನು ಧ್ವಂಸಮಾಡಿ, ಸಂಚರಿಸುತ್ತಿರುವ ಪ್ರಾಣವಾಯುಗಳನ್ನು ತಡೆದು, ದೇಹವ್ಯಾಪಾರಗಳನ್ನು ತಡೆದು, ಮನಸ್ಸು ಚಂಚಲವಾಗದಂತೆ ನಿಗ್ರಹಿಸಿ, ಏಕಾಗ್ರತೆಯಿಂದ ಭಕ್ತಿಪೂರ್ವಕವಾಗಿ ಶಿವನ ಅಡಿಗಳನ್ನು ಹಿಡಿಯುವೆನು.

---

೧—೧ ರಿಪುವಿಂಗೆ ನಗುತ (ಜ) ೨ ಸೆಂಬು (ಜ)

1 ಕುಲ, ಬಲ, ಧನ, ರೂಪ, ಯೌವನ, ವಿದ್ಯಾ, ರಾಜ್ಯ, ತಪಸ್ಸು—ಇವುಗಳಿಂದಾದ ಮದಗಳು

ಸ್ಥಿರಭಕ್ತಿಭಾವದಿಂ ಶಂ
ಕರನಂ ಮೆಚ್ಚಿಸುವೆನೊಚ್ಚತಂ ಮೆಚ್ಚದೊಡೀ
ಹರಣಮನೀವೆಂ ತತ್ಪದ
ಸರಸಿರುಹಕ್ಕೀತುಮೆಡೆಯೊಳಾಂ ಬಿಟ್ಟಪೆನೇ ೯೧

ವಚನ ಎಂದು ಪೂಣ್ದಂ ನುಡಿಯಲೊಡನೆ

ಬೆರಲೆತ್ತಿ ಪೊಗೞ್ದು ಮಗುೞ್ದ
ಚ್ಚರಿವಟ್ಟತಿನಿಷ್ಠೆಗವನ ಸದ್ಭಕ್ತಿಗೆ ಜಂ
ಭರಿಪು ನಿಜರೂಪುದೋಱುತೆ
ಪರಿಸಿ ಮುದಂಬೆತ್ತು ಸಗ್ಗಕೆಯ್ದಿದನಿತ್ತಲ್ ೯೨

ವರಷಟ್ತ್ರಿಂಶತ್ತತ್ತ್ವೋ
ಪರಿಗತನನವಿದ್ಯೆ ಪುಗದ ಶುದ್ಧಾತ್ಮನನ
ಕ್ಷರನನನುಪಮನನಭವನ
ನುರುತರ ಚಿದಖಂಡರೂಪನಂ ಜಾನಿಸಿದಂ ೯೩

೯೧. "ಸ್ಥಿರವಾದ ಭಕ್ತಿಭಾವದಿಂದ ಶಿವನನ್ನಾರಾಧಿಸಿ ವಿಶೇಷವಾಗಿ ಮೆಚ್ಚಿಸುವೆನು. ಹಾಗೇನಾದರೂ ಮೆಚ್ಚಿಸಲು ಸಾಧ್ಯವಾಗದಿದ್ದರೆ, ನನ್ನ ಪ್ರಾಣಗಳನ್ನಾದರೂ, ಅವನ ಪಾದಕಮಲಗಳಲ್ಲಿ ಅರ್ಪಿಸುವೆನೇ ಹೊರತು, ಯಾವ ರೀತಿಯಿಂದಲೂ ಮಧ್ಯದಲ್ಲಿ (ಮನೋರಥ ಪೂರ್ಣವಾಗದೆ) ಬಿಡುವೆನೆ?" ವಚನ: ಎಂದು ಪ್ರತಿಜ್ಞೆ ಮಾಡಿ ಹೇಳಿದನು. ತಕ್ಷಣದಲ್ಲಿಯೇ ಇಂದ್ರನು, ೯೨. ಬೆರಳನ್ನು ಎತ್ತಿ ಅರ್ಜುನನನ್ನು ಹೊಗಳಿ, ಅವನ ನಿಷ್ಠೆಗೂ, ಅವನ ಸದ್ಭಕ್ತಿಗೂ ಆಶ್ಚರ್ಯಪಟ್ಟು, ತನ್ನ ನಿಜಸ್ವರೂಪವನ್ನು ತೋರಿಸಿ. ಆಶೀರ್ವಾದವನ್ನು ಮಾಡಿ, ಸಂತೋಷದಿಂದ ಸ್ವರ್ಗಕ್ಕೆ ಹೊರಟನು. ಇತ್ತಕಡೆಯಲ್ಲಿ ಅರ್ಜುನನು, ೯೩. ಮೂವತ್ತಾರು ತತ್ತ್ವಗಳನ್ನು[1] ಮೀರಿದವನೂ, ಅವಿದ್ಯೆಯೆಂಬ ಉಪಾಧಿಗೆ ಒಳಗಾಗದ ಶುದ್ಧ ಚೈತನ್ಯಸ್ವರೂಪನೂ, ನಾಶರಹಿತನೂ, ಉಪಮಾತೀತನೂ, ಜನ್ಮಾದ್ಯುಪಾಧಿಗಳಿಲ್ಲದವನೂ, ಶ್ರೇಷ್ಠವಾದ ಅಖಂಡಜ್ಞಾನಸ್ವರೂಪನೂ

---

1 ಮೂವತ್ತಾರು ತತ್ತ್ವಗಳು :—ಶಿವ, ಶಕ್ತಿ, ಸದಾಶಿವ, ಈಶ್ವರ, ವಿದ್ಯೆ (೫) ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಪುರುಷ, ಪ್ರಕೃತಿ (೭) ಗುಣ, ಬುದ್ಧಿ, ಅಹಂಕಾರ, ಚಿತ್ತ, ಶ್ರೋತ್ರ, ತ್ವಕ್, ನೇತ್ರ, ಜಿಹ್ವೆ, ಘ್ರಾಣ, ವಾಕ್, ಪಾದ, ಪಾಣಿ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ಗಂಧ, ರಸ (ಪಂಚತನ್ಮಾತ್ರೆಗಳು), ನಭಸ್ಸು. ವಾಯು, ವಹ್ನಿ, ಜಲ, ಭೂಮಿ (೨೪) =(೩೬)

ನೆಗೆದ ಪುಳಕಾಂಕುರದ ನೆಱೆ
ಮುಗುಳ್ದಕ್ಷಿಯ ಮಿಡುಕದಂಗದಿಱಿದೇಱಿದ ನೆ
ಟ್ಟಗೆ ^{೧}ನಿಂದ ಸುಯ್ಯ^{೧} ಸುಱಿಯದು^{೨}
ಬಗೆಯ ಪ್ರೊದರ್ಪೆಸೆಯೆ ತಾಪಸಂ ತಪಮಿರ್ದಂ ೯೪

ಪೊಱಗಣ ಮಾಯಾಭ್ರಮೆಯುಂ
ಪಱಿದಿಕ್ಕಿ ಮನೋಬ್ಜಮಂಡಲತ್ರಯದೆಡೆಯೊಳ್
ಮಿಱುಗುವ ಕರೆಮರೆಯಿಲ್ಲದ
ಕುಱುಪೊಂದದ ಸೂಕ್ಷ್ಮರೂಪನಂ ಜಾನಿಸಿದಂ ೯೫

ಚಂಪಕ ದಶವಿಧನಾದಮಂ ಪದೆದು^{೩} ಕೇಳ್ದ ಸಮುಜ್ಜ್ವಳಬಿಂದುತೇಜಮಂ
ಸ್ವಶುಭಚಿದಕ್ಷಿಯಿಂ ಬಿಡದೆ ನೋಟ್ಪ ವಿಕಾಸಿ^{೪}ಮನೋಬ್ಜಗಂಧಮಂ
ಕುಶಲದೆ ಕೊರ್ತು ವಾಸಿಪ ಮಹಾಸುಖಿಸಂಶ್ರಯಮಧ್ಯನಾಡಿಕಾ
ವಿಶದಮೃತಪ್ರವಾಹಮನೆ ಪೀರ್ವ ವಿಳಾಸಮಳುಂಬಮಾತನೊಳ್ ೯೬

ಆದ ಶಿವನನ್ನು ಧ್ಯಾನಿಸಿದನು. ೯೪. ಅರ್ಜುನನ ಮೈಯಲ್ಲಿ ಪುಳಕಾಂಕುರಗಳು ಕಾಣಿಸಿದುವು. ಕಣ್ಣುಗಳು ಮುಚ್ಚಿದುವು. ದೇಹವು ನಿಶ್ಚಲವಾಯಿತು. ಶ್ವಾಸ ಗತಿಯು ನಿಂತು ಸ್ಥಿರವಾಯಿತು. ಮನಸ್ಸಿನಲ್ಲಿ ಬೇರೆ ವಿಧವಾದ ಭಾವನೆ ಗಳೇಳುತ್ತಿರಲಿಲ್ಲ. ಈ ರೀತಿಯಲ್ಲಿ ತಪಸ್ಸಿನ ಪ್ರಖರತೆಯು ಹೆಚ್ಚಿ ಅರ್ಜುನನು ತಪಸ್ಸುಮಾಡುತ್ತಿದ್ದನು. ೯೫. ಹೊರಗಿನ ಅಜ್ಞಾನಕಲ್ಪಿತವಾದ ಭ್ರಮೆ ಯಿಂದ ತೋರುವ ದೃಶ್ಯಭೇದಗಳನ್ನು ಕಿತ್ತಿಸೆದು, ತನ್ನ ಹೃದಯಕಮಲದ ಮೂರು ಮಂಡಲ[1]ಗಳ ಬಳಿಯಲ್ಲಿ ಪ್ರಕಾಶಿಸುತ್ತಿದ್ದ, ಅಕಳಂಕಸ್ವರೂಪನೂ ನಿರಾವರಣನೂ, ಅನಿರ್ದೇಶ್ಯಗಾತ್ರನೂ ಮತ್ತು ಸೂಕ್ಷ್ಮನೂ ಆದ ಶಿವನನ್ನು ಧ್ಯಾನಿಸುತ್ತಿದ್ದನು. ೯೬. ಅರ್ಜುನನು ಯೋಗಸ್ಥಿತನಾಗಿದ್ದು ಹತ್ತು ಬಗೆಯಾದ ನಾದಗಳನ್ನು[2] ಗುರುತಿಸಿ ಕೇಳುತ್ತಿದ್ದನು. ಅತ್ಯಂತ ಪ್ರಕಾಶಮಾನವಾಗಿದ್ದ ಚಿದ್ಬಿಂದುವಿನ ತೇಜಸ್ಸನ್ನು ನಿರ್ಮಲ ವಾದ ತನ್ನ ಜ್ಞಾನನೇತ್ರದಿಂದ ಅವಿಚ್ಛಿನ್ನವಾಗಿ ನೋಡುತ್ತಿದ್ದನು. ಹೃದಯಕಮಲದ ವಾಸನೆಯನ್ನು ಚತುರತೆಯಿಂದ ಲಕ್ಷ್ಯವಿಟ್ಟು ನೋಡಿ ಆಘ್ರಾಣಿಸುತ್ತಿದ್ದನು. ಮಹಾ ಸುಖಕ್ಕೆಡೆಯಾದ ಸುಷುಮ್ನನಾಡಿಯಲ್ಲಿ ಸ್ರವಿಸುತ್ತಿದ್ದ ಅಮೃತಪ್ರವಾಹವನ್ನು

---

೧—೧ ನಿಂದಸೂಯೆ (ರ) ೨ ಸುಯ್ಯದ ೩ ಪಡೆದು (ಚ, ಜ, ತ) ೪ ವಿಕಾಸ (ಜ) ; ವಿಕಾಸಿ (ಯ, ರ)

[1] ಮನ, ಮನನ, ಮನನೀಯ = ಇವು ಮನೋಬ್ಜಮಂಡಲತ್ರಯ

[2] ಹತ್ತು ಬಗೆಯ ನಾದಗಳು : ಸ್ವರನಿರ್ಘೋಷ, ನಿರ್ಣಯ ಧ್ವನಿ, ಘಂಟನಾದ, ಕಾಹಳ ನಾದ, ಶಂಖನಾದ, ಮೃದಂಗನಾದ, ಭೇರೀನಾದ, ಮಂತ್ರನಾದ, ಮೇಘನಾದ ಮತ್ತು ಅವ್ಯಕ್ತ ಪ್ರಣವನಾದ.

ಜ್ಞಾತೃಜ್ಞಾನಜ್ಞೇಯಿಯಿಕ
ತೀತನನಾದಿದ್ಯಂತಶೂನ್ಯನಂ ನಿರಘಪರಂ
ಜ್ಯೋತಿಃಸ್ವರೂಪನಂ ಪ್ರ
ಖ್ಯಾತಚಿದಾನಂದರೂಪನಂ ಚಿಂತಿಸಿದಂ೨ ೯೭

ಚಂಪಕ ನೆನೆದನನಂತತತ್ತ್ವಮಯನಂ ಪರಮಾತ್ಮನನಪ್ರಮೇಯನಂ
ಮುನಿಜನಮಾನಸಾಮಳಸರೋವರಹಂಸನನದ್ವಿತೀಯನಂ
ಘನನಿಗಮಾಂತಮೃಗ್ಯನನನಾಮಯನಂ ಚಿವಚಿತ್ರಪಂಚರಂ
ಜನನನವಂ ತುರೀಯನನಖಂಡನಿಜೋನ್ನತ ಚಿತ್ಪ್ರಕಾಶನಂ ೯೮

ಮತ್ತೇಭ ತ್ರಿದಿನಕ್ಕೊರ್ಮೆ ಫಲಾದನಂ ನೆಗಟ್ದುದಾತಂಗೊಂದು ತಿಂಗಳ್ ದ್ವಿಮಾ
ಸದೊಳಾಱು ದಿನಕೊರ್ಮೆ ತತ್ಫಳಚಯಾಹಾರಂ ತ್ರಿಮಾಸಂ ಬೞಿ
ಕ್ಕೊದವಿರ್ದತ್ತುರುಕಂದಮೂಲಸುರಸಂ ನಾಲ್ದಿಂಗಳೊಳ್ ಜೀರ್ಣಪ
ರ್ಣದ ಸಂಸೇವನೆ ಮಾಸಪಂಚಕದೊಳಾಯ್ತಾತಂಗೆ ವಾತಾಶನಂ ೯೯

ಯಥೇಚ್ಛವಾಗಿ ಪಾನಮಾಡುತ್ತಾ ಆನಂದದಿಂದಿದ್ದನು. ೯೭. ಜ್ಞಾತೃ, ಜ್ಞಾನ ಮತ್ತು ಜ್ಞೇಯವೆಂಬ ತ್ರಿಪುಟಿಗೆ ಅತೀತನಾದ, ಆದಿ ಅಂತಗಳಿಲ್ಲದ, ಪಾಪರಹಿತನಾದ, ಪರಮೋತ್ಕೃಷ್ಟಜ್ಯೋತಿಸ್ಸ್ವರೂಪನಾದ, ಸಕಲ ಜ್ಞಾನಿಗಳಿಂದ ಕೀರ್ತಿತನಾದ ಮತ್ತು ಚಿದಾನಂದ ರೂಪನಾದ ಶಿವನನ್ನು ಧ್ಯಾನಿಸುತ್ತಿದ್ದನು. ೯೮. ಅಗಣಿತತತ್ತ್ವಗಳ ಸ್ವರೂಪನಾದ, ಪರಮಾತ್ಮನಾದ, ಅಜ್ಞೇಯನಾದ, ಮುನಿಜನರ ನಿರ್ಮಲಚಿತ್ತವೆಂಬ ಸರೋವರಕ್ಕೆ ಭೂಷಣಪ್ರಾಯವಾದ ಹಂಸದಂತಿರುವ, ಅದ್ವಿತೀಯನಾದ ಮತ್ತು ಶ್ರೇಷ್ಠವಾದ ಉಪನಿಷತ್ತುಗಳಿಂದ ಅನ್ವಿಷ್ಟನಾದ, ಭವರೋಗದೂರನಾದ, ಜ್ಞಾನಾತ್ಮಕವೂ, ಜಡಾತ್ಮಕವೂ ಆಗಿರುವ ಚರಾಚರ ಜಗತ್ತಿಗೆ ಸತ್ತ್ವಸ್ವರೂಪನಾಗಿ, ಆಧಾರನಾಗಿರುವ, ತುರೀಯನಾಗಿ ಸಕಲಕ್ಕೂ ಕಾರಣನಾದ ಮತ್ತು ಅಖಂಡಸ್ವರೂಪನೂ, ನಿಜಸ್ವರೂಪನೂ, ಪರಮೋನ್ನತನೂ, ಜ್ಞಾನರೂಪದಿಂದ ಬೆಳಗುವವನೂ ಆದ ಶಿವನನ್ನು ಧ್ಯಾನಿಸಿದನು. ೯೯. ಅರ್ಜುನನು ಒಂದು ತಿಂಗಳ ಕಾಲ, ಮೂರು ದಿನಗಳಿಗೆ ಒಂದು ಸಲದಂತೆ ಫಲಗಳನ್ನು ಆಹಾರವಾಗಿ ಸ್ವೀಕರಿಸುತ್ತಿದ್ದನು. ಎರಡು ತಿಂಗಳ ಕಾಲ, ಆರು ದಿನಗಳಿಗೆ ಒಂದು ಸಲದಂತೆ ಫಲಗಳನ್ನು ತೆಗೆದುಕೊಳ್ಳುತ್ತಿದ್ದನು. ಆಮೇಲೆ ಮೂರು ತಿಂಗಳಿಗೆ ಒಂದು ಸಲ ಸ್ವಾದುವಾದ ಕಂದಮೂಲಗಳನ್ನೂ, ಗೆಡ್ಡೆಗೆಣಸುಗಳನ್ನೂ ಸೇವಿಸಿದನು. ಆಮೇಲೆ ನಾಲ್ಕುತಿಂಗಳಾದಮೇಲೆ ಒಂದು ಸಲ ಒಣಗಿದ ತರಗೆಲೆಗಳೇ ಆಹಾರವಾದುವು. ಅನಂತರ

---

೧-೧ ಯ । ಕ್ಕತೀತನಾ (ಜ, ಗ) ೨ ಜಾನಿಸಿದಂ (ಗ, ಚ)

ಚಂಪಕ ಸ್ಥಿರತರಭಕ್ತಿಯೆಂಬ ಸುಧೆಯಿಂ ಸವಿದುರ್ಬುತೆ ಕಂದುಕುಂದನಾ
ಳ್ದಿರದೆಸೆವಂಗಮುರ್ವಿದ ಲಸತ್ಪುಳಕಾಂಕುರಮುಜ್ವಲನ್ಮುಖಾಂ
ಬುರುಹಮಮರಲ್ಪ ಸತ್ತ್ವಮಯಗಿಮಾನಸಮೊಪ್ಪಿರೆ ಚಿತ್ಸುಖಾಬ್ಧಿಯೊಳ್ ೧೦೦
ಕರಮವಗಾಹಮಿರ್ದನವನೀಶ್ವರಪಾದಸರೋಜಷಟ್ಪದಂ

ವಚನ : ಮತ್ತಂ

ಮಹಾಸ್ರಗ್ಧರೆ ತನುವೃತ್ತಂ ನೇತ್ರದೊಳ್ ನೇತ್ರದ ಬಗೆ ಮನದೊಳ್ ತನ್ಮನಂ ಬುದ್ಧಿಯೊಳ್ ಬು
ದ್ಧಿ ನಿತಾಂತಂ ಚಿತ್ತದೊಳ್ ಚಿತ್ತದ ನಿಲವದಹಂಕಾರದೊಳ್ ಸಂದಹಂಕಾ
ರನಿಯೋಗಂ ಜೀವನೊಳ್ ಜೀವನೆ ಪರಮನೊಳಾಳ್ದೈಕ್ಯಮಂ ನಿಲ್ವಿನಂ ಬೇ
ರ್ಚಿನಿಪಂದಂಬೊಂದದಾನಂದದ ನಿಧಿಯೆನಿಸಲ್ ಸಾಲ್ವನಿರ್ದಂ ಮುನೀಂದ್ರಂ ೧೦೧

ಪಳಿಕುಗೊಡದೊಳಹೊಱಗೆ ಪ
ಜ್ವಳಿಪಂತಜ್ಯೋತಿಯಂತಿರೊಳಹೊಱಗೆ ಸಮು

ಐದು ತಿಂಗಳು ಕೇವಲ ವಾಯುಸೇವನೆಯೇ ಆಹಾರವೆನಿಸಿತು. ೧೦೦. ದುಂಬಿಗಳು ಕಮಲವನ್ನಾಶ್ರಯಿಸಿ, ಮಧುಪಾನಮಾಡಿ ಸುಖಿಸುವಂತೆ, ಅರ್ಜುನನು ಶಿವನ ಪಾದ ಕಮಲಗಳನ್ನು ಧ್ಯಾನಿಸುತ್ತಾ ಜ್ಞಾನಾನಂದಸುಧಾಬ್ಧಿಯಲ್ಲಿ ಮುಳುಗಿ ಆನಂದಿಸುತ್ತಿದ್ದನು. ದೃಢವಾದ ಶಿವಭಕ್ತಿಯೆಂಬ ಅಮೃತವನ್ನು ಪಾನಮಾಡಿ ಸಂತೋಷದಿಂದ ಉಬ್ಬಿದನು. ಅವನ ಶರೀರವು ಕಾಂತಿಹೀನವಾಗಲಿಲ್ಲ ; ಕೃಶವಾಗಲಿಲ್ಲ. ಮೈಯಲ್ಲಿ ಸಂತೋಷದಿಂ ಧುಂಟಾದ ಪುಲಕಾಂಕುರಗಳು, ತೇಜಃಪೂರ್ಣವಾದ ಮುಖಕಮಲ, ಸಾತ್ವಿಕಭಾವನೆಗಳಿಂದ ಪ್ರಸನ್ನವಾಗಿದ್ದ ಮನಸ್ಸಿನಿಂದ ಕೂಡಿದ್ದನು. ವಚನ : ಮತ್ತೆ ೧೦೧. ಅರ್ಜುನನ ದೇಹ ವ್ಯಾಪಾರಗಳೆಲ್ಲವೂ ಕಣ್ಣುಗಳಲ್ಲಿ ಕೇಂದ್ರೀಕೃತವಾಗಿದ್ದಿತು. ದೃಷ್ಟಿವ್ಯಾಪಾರ(ಸಂಶಯಾತ್ಮಕ ವಾದ) ಮನಸ್ಸಿನಲ್ಲಿ ನೆಟ್ಟಿದ್ದಿತು. ಮನೋವ್ಯಾಪಾರವು (ನಿಶ್ಚಯಾತ್ಮಕವಾದ) ಬುದ್ಧಿ ಯಲ್ಲಿ ಸೇರಿದ್ದಿತು. ಬುದ್ಧಿವ್ಯಾಪಾರವು ವಿಶೇಷವಾಗಿ (ಪ್ರಕಾಶಾತ್ಮಕವಾದ) ಚಿತ್ತದಲ್ಲಿ ಕೂಡಿದ್ದಿತು. ಚಿತ್ತದ ವ್ಯಾಪಾರವು (ಅಭಿಮಾನರೂಪಾವಾದ) ಅಹಂಕಾರದಲ್ಲಿ ಸೇರಿ ಹೋಗಿದ್ದಿತು. ದೇಹಾದಿಗಳು ತಾನೆಂಬ ಅಭ್ಯಾಸವನ್ನು ಹೊಂದಿದ್ದ ಅಹಂಕಾರ ಸಂಬಂಧವು (ಅವಿದ್ಯೆಯಿಂದ ಚಿದಾಭಾಸವಾದ) ಜೀವಾತ್ಮನಲ್ಲಿಯೂ, ಜೀವಕ್ಕೆ ಚೈತನ್ಯ ಸಾಕ್ಷಿಯಾದ ಆತ್ಮನು ಪರಮಾತ್ಮಚೈತನ್ಯನಲ್ಲಿ ಏಕೀಭವಿಸಿಯೂ ನಿಂತಿದ್ದನು. ದೇಹಾದಿಗಳು ಸಾಕ್ಷಿಸ್ವರೂಪವಾದ ಶುದ್ಧಚೈತನ್ಯದಿಂದ ಭಿನ್ನವೆಂಬ ಭಾವನೆಗಳಿಗೆ ಆಸ್ಪದವಿಲ್ಲದೆ ಆನಂದದ ನಿಧಿಯೆನಿಸಲು ಸಮರ್ಥನಾಗಿ ಅರ್ಜುನನು ಶೋಭಿಸಿದನು. ೧೦೨. ಸ್ಫಟಿಕ ಕಳಶದಲ್ಲಿ ಬೆಳಗುತ್ತಿರುವ ದೀಪವು ಒಳಗೂ, ಹೊರಗೂ ಏಕರೂಪವಾಗಿ ಪ್ರಕಾಶಿಸುವ

---

೧ ಚಿನ್ಮಯದ (ಚ)

ಜ್ವಳಿಪಂತಶ್ಶಿಜ್ಯೋತಿಯ
ಬೆಳಗಿನೊಳೊಡವೆರೆದು ಬೆರಸಿ ಬೆಚ್ಚವೊಲಿರ್ದಂ ೧೦೨

[1]ಸ್ವಸ್ಥತುರೀಯಾ[1]ತೀತಾ
ವಸ್ಥೆಯನೊಳಕೊಂಡು ತೊಳಪ ಶೃಂಗಾಟಕಪ
ದ್ಮಸ್ಥಿತನೊಳನಘನೊಳ್ ನಿರ
ವಸ್ಥನೊಳೊಡವೆರೆದು ಬಾಹ್ಯಮತಿಯುಱೆತ್ತಿ[2]ರ್ದಂ* ೧೦೩

ಮಱೆಪೊಂದ[3]ದೆಚ್ಚಱದ ಕ
ಣ್ದೆಱೆಯದ ನಿದ್ರಿಸದ ಬೆರೆಯದಗಲದ ಕಣ್ಣಂ[4]
ಪೊಱಸೂಸದೊಳಗಿರದ ಸೈ
ವೆಱಗಿನ ಸಮರಸದ ಭಾವವೇಂ ರಂಜಿಸಿತೋ ೧೦೪

ನೀನಾನೆಂಬೆರಡಱಿದುದು
ಮಾನಸಮಂಭೋಧಿಯಾಲಿಕಲ್ಲಾಯ್ತು ಶಿವಂ
ತಾನಾದನೊ ತಾನೇ ಶಿವ
ನೇನಾದನೊ ಎಂಬ ತೆಱದಿನವನೊಪ್ಪಿರ್ದಂ ೧೦೫

ರೀತಿಯಲ್ಲಿ, ಅಂತರ್ಬಹಿರಾವರಣಗಳಲ್ಲಿ ಸ್ವಯಂಪ್ರಕಾಶದಿಂದ ಬೆಳಗುವ ಅಂತರಾತ್ಮನ ಪ್ರಭೆಯಲ್ಲಿ ಸೇರಿ ಒಂದಾಗಿ ಹೋದಂತೆ ಅರ್ಜುನನಿದ್ದನು. ೧೦೩. ಸ್ವಸ್ಥನೂ ತುರೀಯಾತೀತಾವಸ್ಥೆಯನ್ನು ಪಡೆದವನೂ ಹೊಳೆಯುವ ಶೃಂಗಾಟಕ (ಚೌಕ) ಪದ್ಮದಲ್ಲಿ ನೆಲಸಿದವನೂ ಅನಘನೂ ಜಾಗ್ರದಾದ್ಯವಸ್ಥಾರಹಿತನೂ ಆದ ಪರಶಿವನದಲ್ಲಿ ಐಕ್ಯವನ್ನು ಹೊಂದಿ ಬಾಹ್ಯಜ್ಞಾನಶೂನ್ಯನಾಗಿದ್ದನು. (ಶೃಂಗಾಟಕ ಪದ್ಮ ಎಂಬುದರ ಅಭಿಪ್ರಾಯವು ಸ್ಪಷ್ಟವಾಗುವುದಿಲ್ಲ). (ರಂ) ೧೦೪. ಮರೆವು–ಎಚ್ಚರಗಳಿಲ್ಲದ, ಕಣ್ತೆರೆಯದ-ನಿದ್ರಿಸದಿರುವ, ವಸ್ತುವನ್ನು ಗಮನಿಸದ, ಕಣ್ಣನ್ನು ದೊಡ್ಡದಾಗಿ ಬಿಡದ-ಬಿಡದೆಯೂ ಇರದ (ಧ್ಯಾನಮುದ್ರೆಯಲ್ಲಿರುವ) ಅರ್ಜುನನ ನಿಬ್ಬೆರಗಾಗುವ ಸಮರಸದ ಭಾವವು ಅದೆಷ್ಟು ಸೊಗಸಾಯಿತೊ! (ರಂ) ೧೦೫. ನೀನು (ಧ್ಯೇಯವಸ್ತುವಾದ ಶಿವನು), ನಾನು (ಧ್ಯಾತೃವಾದ ಅರ್ಜುನನು) ಬೇರೆ ಬೇರೆಯೆಂಬ ಭೇದಭಾವವು ಅಡಗಿತು. ಅರ್ಜುನನ ಮನಸ್ಸು ಸಮುದ್ರದಲ್ಲಿರುವ ಆಲಿಕಲ್ಲಿನಂತೆ ಆಯಿತು. ಶಿವನೇ ತಾನೋ ? ಅಥವಾ ತಾನೇ

---

೧–೧ ಸ್ವಸ್ಥಂ ತುರಿಯಾ (ಗ,ವ) ೨ ಮರೆದಿ (ವ) ೩ ಪೊಂದ (ಯ,ರ) ೪ ಕರಣಂ (ಯ)
* 'ಚ' ಪ್ರತಿಯಲ್ಲಿ ಈ ಪದ್ಯವಿಲ್ಲ ; ಬಿಟ್ಟುಹೋದಂತೆ ಕಾಣುತ್ತಿದೆ.

ವಚನ ಇಂತೆಸೆವ ಸದ್ಯಶಶಿವಧ್ಯಾನಾನುಸಂಧಾನದಿನುತ್ತರೋತ್ತರ ತಪಃಪ್ರಭಾಗಿವದಿನಾ೧ ತಪಸ್ವಿ ನಿಷ್ಕಂಪನಿರ್ವಿಕಾರತೆಯಿಂ ರಂಜಿಸಿರ್ಪನ್ನೆಗಂ

ಮಹಾಸ್ರಗ್ಧರೆ ಕ್ಷಿತಿಯೆಲ್ಲಂ ಕಾಯ್ದುದಾಶಾಧಿಪರಗಿದರಮರ್ತ್ಯರ್ಕಳಲ್ಲಾಡಿದರ್ ಪ
ರ್ವತವೃಂದಂ ಕಾಯ್ಪುಗೊಂಡತ್ತತುಳಜಲಧಿ ಮೆಯ್ಗುಂದಿವತ್ತರ್ಕಚಂದ್ರೋ
ನ್ನತತೇಜಃಸ್ಫೂರ್ತಿಯೆತ್ತಂ ಮಸುಳ್ದುದಮಮ ತತ್ತಾಪಸಾತ್ತಪ್ರವೃದ್ಧೋ
ಗ್ರತಪೋಗ್ನಿಜ್ವಾಲೆಯಿಂದಂ ನೆಗೆದುದೊಗೆದ೨ ತದ್ಧೂಮದಿಂ ಮೇಘವೃಂದಂ ೧೧೭

ವಚನ ಆಗಳಾ ತಪೋವನದ ತಪೋಧನರ್ಗೆ

ಮತ್ತೇಭ ಧೃತಿಯಳ್ಕಾಡಿದುದೇಟಿಗ್ಗಿ ಗುಂದಿದುದಧೀಶಧ್ಯಾನಮುದ್ಯತ್ತಪಃ
ಸ್ಥಿತಿ ಗೆಂಟಾದುದು ಶಾಂತಿ ಸೋರ್ದುದು ಜಪಾನುಷ್ಠಾನಮಿಲ್ಲಾಯ್ತು ಸದ್
ವ್ರತಮುಂ ಸೀಕರಿಪೋದುದುಬ್ಬಿದುದು ವೇದಾಂತೋದಿತಜ್ಞಾನಮು
ನ್ನತಿಗೆಟ್ಟಿರ್ದುದು ಸದ್ವಿವೇಕಮುಚಿದತ್ತಾನಂದದೊಂದೆಟ್ಟಿರಂ ೧೧೭

ಶಿವನೋ ? ಎಂಬ ರೀತಿಯಲ್ಲಿ ಅರ್ಜುನನಿದ್ದನು. ವಚನ : ಈ ರೀತಿಯಲ್ಲಿ ಅಸಮಾನವಾದ ಶಿವಧ್ಯಾನದ ಐಕ್ಯಭಾವನೆಯಿಂದಲೂ, ಅಭಿವೃದ್ಧಿಯಾಗುತ್ತಿರುವ ತಪೋಮಹಿಮೆಯಿಂದಲೂ, ಆ ತಪಸ್ವಿಯು ನಿಶ್ಚಲನೂ, ನಿರ್ವಿಕಾರನೂ ಆಗಿ ಶೋಭಿಸಿದನು. ೧೧೭. ಅರ್ಜುನನ ಪ್ರಚಂಡ ತಪಸ್ಸಿನಿಂದ ಪ್ರಜ್ವಲಿಸಿದ ತಪೋಜ್ವಾಲೆಯಿಂದ ಭೂಮಿಯೆಲ್ಲವೂ ಬಿಸಿಯಾಯಿತು. ದಿಕ್ಪಾಲಕರೆಲ್ಲರೂ ಭೀತರಾದರು. ದೇವತೆಗಳು ನಡುಗಿದರು. ಪರ್ವತರಾಜಿಯು ಕಾದು ಕೆಂಡದಂತಾದುವು. ಮಹಾಸಮುದ್ರವು ಬತ್ತಿತು. ಸೂರ್ಯ ಚಂದ್ರರ ತೀವ್ರವಾದ ಕಾಂತಿಯು ಮಂಕಾಯಿತು. ಅಬ್ಬಬ್ಬ ! ತಪೋಜ್ವಾಲೆಯಿಂದೇಳುತ್ತಿದ್ದ ಹೊಗೆಯಿಂದ ಮೋಡಗಳು ಚದುರಿಹೋದವು. ವಚನ : ಆ ಸಮಯದಲ್ಲಿ ತಪೋವನಗಳಲ್ಲಿದ್ದ ಮುನಿಗಳಿಗೆ ೧೧೭. ಧೈರ್ಯವು ಕುಗ್ಗಿ ಭೀತಿಯಾವರಿಸಿತು, ತೇಜಸ್ಸು ಕುಂದಿತು, ಪರಮೇಶ್ವರನ ಧ್ಯಾನವು ಕುಂದಿತು. ಪ್ರವೃದ್ಧಮಾನವಾಗಿದ್ದ ತಪಸ್ಸೂ ದೂರವಾಯಿತು. ಮನಶ್ಶಾಂತಿಯು ತಪ್ಪುತ್ತಾ ಬಂದಿತು. ಜಪಾನುಷ್ಠಾನವೇ ಇಲ್ಲವೇನೋ ಎಂಬಂತಾಯಿತು. ವ್ರತನಿಯಮಗಳು ಸುಟ್ಟು ಸೀಕರಿಯಾದುವು. ಉಪನಿಷದಧ್ಯಯನ ಲಭ್ಯವಾದ ಜ್ಞಾನವು ಅಸ್ಥಿರವಾಯಿತು. ಸದಸದ್ವಿಚಾರವು ತನ್ನ ಘನತೆಯನ್ನು ನೀಗಿ

---

೧–೧ ವಿದಿತನಾ (ಗ, ತ, ವ). ೨ ದೊಗೆದು (ರ)

*ಚಂಪಕ ಅವನವನೀಶನೋ ಸುಭಟನೋ ಮುನಿಯಲ್ತು ಮುನೀಂದ್ರನಾದೊಡೇ
ಕವನುಡಿಯಲ್ಲಿ ಕಟ್ಟಿದ ಕಠಾರಿಯದಾಯುಧಮಾಂತ ಸೀಸಕಂ
ಸವಗಮುಡರ್ಪ್ಪವೆತ್ತ ಧನು ಬೆನ್ನ ನಿಷಂಗಮುಮಂತೆ ತಾಳ್ದ ಭೂ
ತಿ ವಿಲಸದಕ್ಷಮಾಲೆ ಕುಶೆಯುಂ ಮಗುಳ್ದೀನಿದು ಯೋಗಿಧರ್ಮಮೇ ೧೦೮

ವಿಪರೀತಮವನ ಚರಿತಂ
ತಪಮಧಿಕಂ ತದ್ವಿಚಾರದಿಂದೆಮಗೇಂಗಿವಂ
ದಪ್ಪದವನತ್ತಣಿನೊದವಿ
ರ್ದಾಪಟಳಮಂ ಕಳೆದು ಕಾಯ್ವುದೆಮ್ಮನುಮೇಶಾ ೧೦೯

ಚಂಪಕ ಮನದೊಳೆ ನಿನ್ನ ಚಿಂತನೆಯನಲ್ಲದೆ ಮಾತಿನೊಳೆಯ್ದೆ ದೇವ ನಿ
ಮ್ಮನುಪಮಪಂಚವರ್ಣಮಯಮಂತ್ರಮನಲ್ಲದೆ ಕಾಯದಲ್ಲಿ ನಿ
ನ್ನನಘಪದಾಬ್ಜಸೇವನೆಯನಲ್ಲದೆ ನಚ್ಚಿರವಾಗಳುಂ ಕೃಪಾ
ವನನಿಧಿ ಮಿಕ್ಕ ದುರ್ವಿಷಯಮಂ ತಿಳಿದಿರ್ದಪೆ ನೀನಿದೆಲ್ಲಮಂ ೧೧೦

ಕೊಂಡಿತು. ಅವರ ಆನಂದದ ಉನ್ನತಿಯು ಇನ್ನಿಲ್ಲವಾಯಿತು. ೧೦೮*. ಅವನು ರಾಜನೋ ಅಥವಾ ವೀರಭಟನೋ ಇರಬೇಕೇ ಹೊರತು ತಪಸ್ವಿಯಂತೂ ಆಗಿರಲಾರ. ತಪಸ್ವಿಯೇ ಆಗಿದ್ದರೆ, ಸೊಂಟಕ್ಕೆ ಕಟ್ಟಿರುವ ಕಠಾರಿಯೇಕೆ ಬೇಕು ? ಕತ್ತಿಯೇಕೆ ಬೇಕು ? ಶಿರಸ್ತ್ರಾಣ, ಕವಚಗಳೇಕೆ ಬೇಕು? ಉದ್ದಂಡವಾದ ಧನುವೇಕೆ ಬೇಕು ? ಬೆನ್ನಿನಲ್ಲಿ ಬತ್ತಳಿಕೆ ಯೆತಕ್ಕೆ ? ವಿಭೂತಿ ಲೇಪನವೇನು ? ಜಪಮಾಲೆಗಳೇನು ? ಇದು ಯೋಗಿಯಾದವನ ಲಕ್ಷಣವೇ ? ೧೦೯. "ಪಾರ್ವತೀರಮಣನೆ, ಅವನ ರೀತಿಯು ಮುನಿಗಳಿಗೆ ಯೋಗ್ಯ ವಾದುದಲ್ಲ. ಅವನ ತಪಸ್ಸಾದರೋ ಮಹೋಗ್ರವಾದುದು. ಅದನ್ನು ಕುರಿತು ಯೋಚಿಸುವುದರಿಂದ ನಮಗೇನಾಗಬೇಕಾಗಿದೆ ? ಅವನಿಂದ ನಮಗುಂಟಾಗಿರುವ ಬಾಧೆ ಯನ್ನು ಪರಿಹರಿಸಿ, ಕಾಪಾಡು. ೧೧೦. ನಾವು ನಿರಂತರವೂ ಮನಸ್ಸಿನಲ್ಲಿ ನಿನ್ನನ್ನು ಧ್ಯಾನಿಸುವೆವು. ನಿನ್ನ ದಿವ್ಯವಾದ ಪಂಚಾಕ್ಷರಿಮಂತ್ರವನ್ನು ಸದಾ ಜಪಿಸುತ್ತಿರುವೆವು. ನಿನ್ನ ಪಾವನವಾದ ಪಾದಕಮಲಗಳನ್ನು ಸೇವಿಸುತ್ತಿರುವೆವು. ಈ ರೀತಿಯಾಗಿ ಮನೋ ವಾಕ್ಕಾಯಗಳಿಂದ ನಿನ್ನ ಧ್ಯಾನ, ಜಪ, ಅರ್ಚನೆಯನ್ನಲ್ಲದೆ, ಇನ್ನಿತರ ದುರ್ವಿಷಯಗಳಲ್ಲಿ

---

೧ ದೆಮಗೇ (ಯ)

* 'ಆಗ ಮುನಿಗಳು ಶಿವನ ಬಳಿಗೆ ಹೋಗಿ ಹೀಗೆ ವಿಜ್ಞಾಪಿಸಿದರು'—ಈ ಅರ್ಥದ ವಚನ ಭಾಗ ಇಲ್ಲಿ ಲುಪ್ತವಾಗಿದೆ (ಠ).

ಪತಿಯುಂ ಗತಿಯುಂ ಹಿತನುಂ
ಪಿತನುಂ ದೇವೇಶ ನೀನೆ ಪೆಱತೆ[೧]ಮಗಿಲ್ಲಿ[೧]
ಲ್ಲತಿಶ[೨]ಯಕಿತವ[೨]ತಪಸ್ವಿಯ
ಕತದಿಂದಾದೞಲನೊರಸಿ ಪೊರೆ ಕರುಣಾಬ್ಧೀ ೧೧೧

ಆ ಗಿರಿತಟದಿಂದವನಂ
ಪೋಗಿಸಿ ತದ್ವನನಿವಾಸಮಂ ಕರುಣಿಪುದಂ
ತಾಗದೊಡೆಮಗೀವುದು ನೀ
ಡಾಗದೆ ಪೆಱತೊಂದನುಚಿತನಗನಂದನಮಂ ೧೧೨

ಪ್ರಣಯಮಣಮಿಲ್ಲದೊಡಮಾ
ಗುಣಿಯ ಗುಣಂಗಳನೆ ಮಱೆಸದುಸಿರ್ದಂ ಮುನಿಪಾ
ಗ್ರಣಿ ಪಗೆಯೊಳಾದೊಡಂ ಗುಣ
ಗಣಮಿರೆ ತಾಂ ಗ್ರಹಿಸಿ ಪೊಗೞದಿರ್ಪನೆ ಸುಜನಂ ೧೧೩

ವಚನ ಎಂದಿಂತು ಬಿನ್ನಪಂಗೆಯ್ದ ಮುನಿವರರುಕ್ತಿಯಂ ಕೇಳ್ದು ಪನ್ನಗಧರಂ ಮುಗುಳ್ನಗೆ ನಕ್ಕು

ಆಸಕ್ತರಾದವರಲ್ಲ. ಇದೆಲ್ಲವನ್ನೂ ನೀನು ತಿಳಿದಿರುವೆ. ೧೧೧. ನಮಗೆ ಪ್ರಭುವೂ, ಗತಿಯೂ, ಅತ್ಯಂತಪ್ರಿಯನೂ, ತಂದೆಯೂ ನೀನಲ್ಲದೆ ಅನ್ಯರಿಲ್ಲ. ಮಹಾಕಪಟಿಯಾದ ಆ ತಪಸ್ವಿಯಿಂದ ನಮಗುಂಟಾಗಿರುವ ಸಂಕಟವನ್ನು ನಿವಾರಿಸಿ, ಎಲೈ ದೇವೋತ್ತಮನೆ, ಕರುಣಾಸಾಗರನೆ, ನಮ್ಮನ್ನು ಕಾಪಾಡು. ೧೧೨. ಆ ಇಂದ್ರಕೀಲ ಪರ್ವತವನದಿಂದ ಅವನನ್ನು ಹೊರಡಿಸಿ, ಆ ತಪೋವನವನ್ನು ನಮಗೆ ಇರಲು ಅನುಗ್ರಹಿಸು. ಅದು ಆಗದಿದ್ದರೆ ನಮಗೇ ಬೇರೆಲ್ಲಿಯಾದರೂ ಪರ್ವತದ ಸಮೀಪದಲ್ಲಿ ಒಂದು ಸಣ್ಣ ವನವನ್ನು ದಯಪಾಲಿಸು" ಎಂದರು. ೧೧೩. ಆ ತಾಪಸೋತ್ತಮರು, ತಮಗೆ ಅರ್ಜುನನ ವಿಷಯವಾಗಿ ಯಾವ ಪ್ರೀತಿಭಾವವಿಲ್ಲದಿದ್ದರೂ ಸಹ, ಅವನ ಗುಣಗಳನ್ನು ಬಚ್ಚಿಡದೆ ತಿಳಿಸಿದರು. ಉತ್ತಮರಾದವರು ತಮ್ಮ ಹಗೆಗಳಲ್ಲಿಯೇ ಆದರೂ, ಒಳ್ಳೆಯ ಗುಣಗಳಿದ್ದರೆ ಅವನ್ನು ಒಪ್ಪಿಕೊಂಡು ಬಣ್ಣಿಸುವರಲ್ಲವೇ ? ವಚನ : ಈ ರೀತಿಯಾಗಿ ವಿಜ್ಞಾಪನೆಯನ್ನು ಮಾಡಿದ ಮುನಿಪೋತ್ತಮನ ಮಾತನ್ನು ಕೇಳಿ, ಸರ್ಪಭೂಷಣನಾದ

---

೧-೧ ಮಗಿನಿತಿ (ಚ) ೨-೨ ಯದ ತವ (ವ)

ತಳತಳನೆ ತೊಳಪ ರದನದ
ಬೆಳಗಂತಃಸ್ಥಿತಕೃಪಾಸುಧಾಂಭೋನಿಧಿಯು
ಗ್ಗಳಿಸಿ ತೆರೆಮಸಗಿದಂತಿರೆ
ಜಳರುಹರಿಪುಮೌಳಿ ತಾಪಸಂಗಿಂ೧ತೆಂದಂ ೧೧೪

ಮಲ್ಲಿಕಾಮಾಲೆ ಆ ತಪೋಧನನಾವನೆಂಬಭಿಶಂಕೆಯೇಕೆ ಜಗತ್ತ್ರಯ
ಖ್ಯಾತನರ್ಜುನನಿಂದ್ರಸೂನು ಮುಕುಂದದೇವರನುಗ್ರಶೌ
ರ್ಯಾತುಳಂ ಭವದೀಯಭಾಗ್ಯಮನೇನು೨ಮಾ ವಲಮು೨ರ್ಥಿಸಂ
ಭೀತಿ ಬೇಡವನತ್ತ್ರಣಂ ನಿಮಗಾಂತವಂ ತಪಮಿರ್ದೊಡಂ ೧೧೫

ಮತ್ತೇಭ ಪಡೆ ನೀಂ ಪಾಶುಪತಾಸ್ತ್ರಮಂ ಗಿರಿಶನಿಂ ಪೋಗಿಂದ್ರಕೀಲಕ್ಕೆ ಪೊ
ಪಡರ್ದುದ್ಯತ್ತಪಮಾಂಪ್ಪುದೆಂದು ಬೆಸನಿತ್ತಂ ವ್ಯಾಸನೆಯ್ತಂದನೀ೩
ಯೆಡೆಗಾತಂ ಪಡೆದಿತ್ತ ಮಂತ್ರಮನದಂ ಕೆಯ್ಕೊಂಡು ಮದ್ಭಕ್ತಿ ಸಂ
ಗಡಮಾಗುತ್ತಿರೆ ವೈರಿವರ್ಗವಿಜಯೋಪಾಯಾನ್ವಿತಂ ಫಲ್ಗುನಂ ೧೧೬

ರಿಪುಜಯಕಾರಣಶರಮಂ
ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆಮ್ಮಿಂ
ತಪಮಿರ್ದಪನಾ ಮುನಿಯಿ
ತ್ತುಪಳಿದೇಶಂಬಡಿದು೪ ನಿಶ್ಚಿತಾರ್ಥಂ ಪಾರ್ಥಂ ೧೧೭

ಶಿವನು ನಸುನಗೆಯಿಂದ ೧೧೪. ಶಶಿಶೇಖರನಾದ ಶಿವನು ತನ್ನ ತಳತಳಿಸುತ್ತಿದ್ದ ದಂತ ಕಾಂತಿಯು, ತನ್ನಲ್ಲಿದ್ದ ಕರುಣಾಮೃತಸಾಗರವು ಉಕ್ಕೇರಿ ತೆರೆಯುಂತಿರಲು, ಆ ಮುನಿಗಳಿಗೆ ಹೇಳಿದನು. ೧೧೫. "ಆ ತಪೋಧನನು ಯಾರೋ ಎಂಬ ಹೆದರಿಕೆ ಏತಕ್ಕೆ ? ತ್ರಿಜಗದ್ವಿಖ್ಯಾತನಾದ ಅರ್ಜುನನು, ಇಂದ್ರನಮಗ, ಶ್ರೀಕೃಷ್ಣನ ಮೈದುನ, ಪ್ರಚಂಡ ಪರಾಕ್ರಮದಲ್ಲಿ ಯಾರೂ ಸಹ ಅವನಿಗಿದಿರಾಗಲಾರರು. ನಿಮ್ಮ ಒಡವೆಯೇನನ್ನೂ ಅವನು ಅಪೇಕ್ಷಿಸುವುದಿಲ್ಲ. ಅವನು ಆ ವಿಧವಾದ ತಪಸ್ಸನ್ನು ಮಾಡುತ್ತಿದ್ದರೂ ಅವನಿಗೆ ನೀವು ಹೆದರಬೇಕಾಗಿಲ್ಲ. ೧೧೬. ನೀನು ಇಂದ್ರಕೀಲಕ್ಕೆ ಹೋಗಿ, ಅಲ್ಲಿ ಘೋರತಪವನ್ನಾಚರಿಸಿ, ಪರಮೇಶ್ವರನಿಂದ ಪಾಶುಪತಾಸ್ತ್ರವನ್ನು ಸಂಪಾದಿಸು ಎಂದು ವ್ಯಾಸಮಹರ್ಷಿಗಳು ಅಪ್ಪಣೆಮಾಡಲು, ಅವರಿಂದ ಉಪದಿಷ್ಟವಾದ ಮಂತ್ರವನ್ನು ಸ್ವೀಕರಿಸಿ, ನನ್ನಲ್ಲಿನ ಭಕ್ತಿಯ ಬಲದಿಂದ ಶತ್ರುವರ್ಗವನ್ನು ಜಯಿಸಬೇಕೆಂಬ ಉದ್ದೇಶದಿಂದ ಅರ್ಜುನನು ಬಂದಿರುವನು. ೧೧೭. ಆ ವ್ಯಾಸಮುನಿಯಿತ್ತ ಉಪದೇಶದಂತೆ (ನನ್ನನ್ನು ಮೆಚ್ಚಿಸಿ) ಶತ್ರುಗಳನ್ನು ಜಯಿಸಲು ಸಾಧಕವಾಗುವಂತಹ ಬಾಣವನ್ನು, ನನಗೆ ಶರಣಾಗತನಾಗಿ, ನನ್ನಿಂದ ಪಡೆವೆನೆಂಬ ಧೃಡವಿಶ್ವಾಸದಿಂದ ಅರ್ಜುನನು ತಪವನ್ನಾಚರಿಸು

---

೧ ತಾಪಸರ್ಗಿಂ (ಜ, ಯ) ೨–೨ ಮಂನಲವ (ಕ, ಗ, ಚ) ; ಮಂಡಲೆದ (ರ) ೩ ದನಾ (ರ) ೪–೪ ದೇಶಂ ಪಡೆದು (ರ,) ; ದೇಶಂಬಡಿದು (ವ)

ಉತ್ಪಲ ಆತನಭೀಷ್ಟಮಂ ಸಲಿಸಿ ಪಾಶುಪತಾಸ್ತ್ರಮನಿತ್ತು ತತ್ತಪೋ
ಜಾತಮಹೋಷ್ಣಮಂ ತವಿಸಿ ನಿಮ್ಮ ಮನೋರಥಮಿತ್ತು ರಕ್ಷಿಪೆಂ
ಮಾತಿದು ನನ್ನಿಯೆಂದಭಯಮಿತ್ತವರಂ ಕಳಿಪುತ್ತೆ ಭಕ್ತಸಂ
ಪ್ರೀತಿಯಿನೆಯ್ದಲುಜ್ಜುಗಿಸಿದಂ ಮೃಗಯಾರತಗಿಂದುಶೇಖರಂ ೧೧೮

ಗದ್ಯ ಇದು ನಿಖಿಲಭುವನೈಕವಲ್ಲಭ ಸುರಾಸುರೇಂದ್ರವರದ ಕರುಣಾವರಣ ಪರಮಶಿವಲಿಂಗ ತರುಣಪತಂಗಸಂಗತ ಮಂಗಳಹೃದಯಾರವಿಂದ ಬಂಧುರಸರಸಸಜ್ಜನನಿ ಮಾನಿತೋಭಯ ಕವಿತಾ ವಿಚಕ್ಷಣಳಿ ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳ ಪ್ರಬಂಧದೊಳ್ ದ್ವಿತೀಯಾಶ್ವಾಸಂ ಪರಿಸಮಾಪ್ತಂ.

ತ್ತಿರುವನು. ೧೧೮. ಅರ್ಜುನನ ಮನೋರಥವನ್ನು ಪೂರ್ಣಮಾಡಿ, ಅವನಿಗೆ ಪಾಶುಪತಾಸ್ತ್ರವನ್ನನುಗ್ರಹಿಸುವೆನು. ಅವನ ಘೋರತಪಸ್ಸಿನಿಂದ ಉಂಟಾದ ಬೇಗೆಯನ್ನು ನಂದಿಸಿ, ನಿಮ್ಮ ಮನೋರಥವನ್ನು ಸಲ್ಲಿಸಿ, ನಿಮ್ಮನ್ನು ರಕ್ಷಿಸುವೆನು. ಈ ಮಾತು ಸತ್ಯ." ಎಂದು ಅಭಯಪ್ರದಾನಮಾಡಿ,ಆ ಮುನಿಗಳನ್ನು ಕಳುಹಿಸಿದನು. ಭಕ್ತವತ್ಸಲನಾದ ಚಂದ್ರಶೇಖರನು ಬೇಟೆಯಲ್ಲಿ ಆಸಕ್ತನಾಗಿ ಹೊರಡಲುದ್ಯುಕ್ತನಾದನು. ಗದ್ಯ: ಸಮಸ್ತ ಲೋಕಗಳಿಗೂ ಏಕಮಾತ್ರ ಪ್ರಭುವೂ, ದೇವದಾನವೇಂದ್ರರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸುವವನೂ, ದಯಾಕವಚನೂ, ಶ್ರೇಷ್ಠನೂ, ಶುಭಚಿಹ್ನನಾದ ಮಹಾದೇವನೆಂಬ ತರುಣ ಭಾಸ್ಕರನೊಡಗೂಡಿದ ನಿರ್ಮಲಚಿತ್ತವೆಂಬ ತಾವರೆಯಿಂದ ಶೋಭಿತನೂ, ರಸಜ್ಞರಿಂದ ವಿದ್ವಾಂಸರಿಂದ ಪುರಸ್ಕೃತನೂ, ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಕವಿತಾಕೌಶಲವುಳ್ಳವನೂ ಆದ ಶ್ರೀ ಷಡಕ್ಷರದೇವನೆಂಬ ಕವಿಯಿಂದ ವಿರಚಿತವಾದ ಕಿರಾತರುದ್ರಲೀಲಾ ಕಥನಮಹಾಕೃತಿಯಲ್ಲಿ ಎರಡನೆಯ ಆಶ್ವಾಸವು ಸಮಾಪ್ತವಾದುದು.

---

೧ ಯಾತ್ರೆಯ (ರ) ೨ ಸಮಸ್ತ (ಚ, ಜ) ೩ ಸರಸಜನ (ಯ) ೪ ವಿಶಾರದ (ಯ)

# ತೃತೀಯಾಶ್ವಾಸಂ

ಶ್ರೀಮದಗಪತಿಸುತಾಮುಖ
ತಾಮರಸಾಮೋದಭೃಂಗನಮಿತಕೃಪಾಂಗಂ
ಸಾಮಜಹರನಾನತಜನ
ತಾಮರತರು ಮಾೞ್ಕೆ ಸೌಖ್ಯಮಂ ಶಿವಲಿಂಗಂ ೧

ಉತ್ಪಲ ದೇವನ ಬೇಂಟೆಯುಜ್ಜುಗದ ಸಬ್ಬವಕಾಜರ ಡಿಂಡಿಮಾರವಂ
ತೀವಿದುದಾ ಮಹಾಕಟಕದೊಳ್ ಸುರದುಂದುಭಿನಿಕ್ವಣಾನ್ವಿತಂ
ಭಾವದೊಳುತ್ಸವಂ ನೆಗೞ್ದುದಲ್ಲಿ ಗಣಾಳಿಗೆ ಸಂಭ್ರಮಂ ಪೊಪ
ೞ್ಟಾವರಿಸಿರ್ದುದಗ್ಗದಮರರ್ಗದನೂಹಿಸಲಾರ್ಗೆ ಗೋಚರಂ ೨

ವಚನ : ಮತ್ತಮಾಗಳ್

ಚಂಪಕ ಜಡೆಗಳ ಬಂಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್
ಗಡಲದು ಪುಷ್ಪಮಾಲೆ ಗಱಿವೂಗೞ್ ತೆಳ್ವೆೞ್ ಬಗ್ಗಸಮ್ಮದೊ
ಳ್ಪಡೆ ಪೊಸಚಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಗಮಪರಾಗವಿಲೇಪನಮಗ್ನಿಲೋಚನಂ ೩

೧. ಶಿವನು ಸಂಪತ್ಕರಳಾದ ಪರ್ವತರಾಜಕುಮಾರಿಯ ಮುಖಕಮಲದ ಪರಿಮಳವನ್ನು ಆಸ್ವಾದಿಸುವ ಭ್ರಮರದಂತಿರುವವನು. ಭಕ್ತರನ್ನು ಅನುಗ್ರಹಿಸುವಲ್ಲಿ ಧಯಾಮೂರ್ತಿಯು, ಗಜಾಸುರನನ್ನು ಮಥಿಸಿದವನು, ತನ್ನನ್ನಾಶ್ರಯಿಸುವ ಭಕ್ತರ ಮನೋವಾಂಛಿತಗಳನ್ನು ಈಡೇರಿಸುವಲ್ಲಿ ಕಲ್ಪವೃಕ್ಷದಂತಿರುವವನು. ಅಂತಹ ಮಂಗಳಮೂರ್ತಿಯೆ ನಮಗೆ ಸುಖವನ್ನು ಕೊಡಲಿ. ೨. ಪರಮೇಶ್ವರನು ಬೇಟೆಗೆ ಸನ್ನದ್ಧನಾಗಲು ಅದಕ್ಕನುರೂಪವಾಗಿ ವೇಷಧಾರಿಗಳಾದ ಪ್ರಮಥರು ಭೇರಿಯನ್ನು ಬಾರಿಸಿದರು. ದೇವತೆಗಳು ದುಂದುಭಿಯನ್ನು ಮೊಳಗಿದರು. ಆ ಮಹಾಶಬ್ದವು ಗಿರಿತಪ್ಪಲಿನಲ್ಲೆಲ್ಲಾ ತುಂಬಿತು. ಶಿವಗಣಗಳ ಮನಸ್ಸಿಗೆ ಹರ್ಷವಾಯಿತು. ವ್ಯಾಪಿಸಿದ ಹರ್ಷ, ಸಂಭ್ರಮಗಳು ದೇವತೆಗಳನ್ನು ಆವರಿಸಿದುವು. ಈ ಸಂಭ್ರಮವನ್ನು ಯಾರಿಗೆ ತಾನೇ ಊಹಿಸಲಿಕ್ಕೆ ಸಾಧ್ಯ ?
ವಚನ : ಮತ್ತೆ ಆಗ, ೩. ಶಿವನು ಕಿರಾತರೂಪವನ್ನು ಧರಿಸಿದನು. ಅವನ ಜಟಾಜೂಟವು ಚಿಗುರೆಲೆಯ ಕುಲಾವಿಯಾಯಿತು. ಸರ್ಪವು ಅದಕ್ಕೆ ಸುತ್ತಿದ್ದ ಬಳ್ಳಿಯಾಯಿತು. ಧರಿಸಿದ್ದ ದೇವಗಂಗೆಯು ಮುಡಿದಿದ್ದ ಹೂಮಾಲೆಯಾಯಿತು. ಬಾಲಚಂದ್ರನು ಕೇದಗೆ ಹೂವಿನ ಎಸಳಾದನು. ವ್ಯಾಘ್ರಾಜಿನವು ಒಳಗಿನ ಉಡಿಗೆಯ ಹೊಸ ಚಡ್ಡಿಯಾಯಿತು. ಗಜಚರ್ಮವು ತೊಟ್ಟ ಕರಿಯಬಣ್ಣದ ಅಂಗಿ, ಮೈಗೆ ಬಳಿದ ವಿಭೂತಿಯೇ ಪುಷ್ಪಪರಾಗ

ಗೈರಿಕಲಲಾಮಮಹಿಪ
ಸ್ಫಾರಫಣಾರತ್ನರಾಜಿ ಗುಂಜಾಭರಣಂ
ಸಾರಪಿನಾಕಂ ಪದವಿಲ್
ಕೂರಂಬೆಸೆವಾತ್ಮಶಕ್ತಿ ತನಗೊಪ್ಪುವಿನಂ ೪

ಚಂಪಕ ಅರೆಯೊಡಲಾದ ಕಾಳಿಯುಳಿದಂಗಮನಾವರಿಸಿರ್ದ ಮಾಳ್ಕೆಯಿಂ
ಕರಮೆಸೆದಿಂಗಿದ್ರನೀಲರುಚಿಕಾಂತಕಳೇವರಮೊಪ್ಪೆ ತಾಳ್ದನಾ
ದರದೆ ಕಿರಾತರೂಪಮನುಮಾಧಿಪನಲ್ಲಿ ಘನಸ್ವತಂತ್ರನ
ಚ್ಚರಿವಡೆದಾಗಮಪ್ರತತಿ ಕೀರ್ತಿಸೆ ಬಣ್ಣಿಸೆ ಸರ್ವನಿರ್ಜರರ್ ೫

ಚಂಪಕ ತಳಿರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ ತ
ಳ್ತಳಿರುಚಿ ಕಾಯಕಾಂತಿ ಕಡುಗತ್ತಲೆ ಮೂಕುತಿಯಿಮುತ್ತು ಶುಕ್ರಮಾ
ಡಳಮಮದೊಪ್ಪೆ ಭಿಲ್ಲಿಯ ವಿಳಾಸಮನಾಳ್ದೆಸೆದಂದು ಸರ್ವಮಂ
ಗಳೆ ನಿಜಕಾಳರಾತ್ರಿಯೆಸರಂ ಮಿಗೆ ಸಾರ್ಥಕಮಂ ನೆಗಳ್ಚಿದಳ್ ೬

ವನ್ನು ಲೇಪಿಸಿದಂತೆ ಇದ್ದಿತು. ಹಣೆಯಲ್ಲಿನ ಉರಿಗಣ್ಣು, ೪. ಹಣೆಯಲ್ಲಿಟ್ಟ ಗೈರಿಕ ಧಾತುವಿನ ಬೊಟ್ಟು, ಆದಿಶೇಷನ ಉಜ್ಜ್ವಲ ಫಣಾಮಣಿಗಳು ಧರಿಸಿದ್ದ ಹವಳದ ಒಡವೆಗಳು, ಪ್ರಬಲವಾದ ಶಿವನ ಪಿನಾಕವೆಂಬುದೇ ಹಿಡಿದಿದ್ದ ಬಿಲ್ಲು, ಶಿವನ ಶಕ್ತಿ ಸ್ವರೂಪನಾದ (ವಿಷ್ಣುವೇ) ತೀಕ್ಷ್ಣವಾದ ಬಾಣವಾಯಿತು. ೫. ಶಿವನ ವಾಮಾರ್ಧ ಶರೀರಿಣಿಯಾದ ಕಾಳಿಯು ಉಳಿದ ಶಿವನ ಅರ್ಧಶರೀರವನ್ನೂ ಆಕ್ರಮಿಸಿದಳೋ ಎಂಬಂತೆ ಇಂದ್ರನೀಲಮಣಿಕಾಂತಿಯಿಂದ ಬೆಳಗುತ್ತಿದ್ದ ದೇಹದಿಂದ ಸರ್ವಸ್ವತಂತ್ರನಾದ ಶಿವನು ಕಿರಾತರೂಪವನ್ನು ತಾಳಿದನು. ಶಿವಾಗಮಗಳು ಕೊಂಡಾಡಿದುವು. ಸಕಲ ದೇವತೆಗಳೂ ಬಣ್ಣಿಸುತ್ತಿದ್ದರು. ೬. ಶಿವನನ್ನು ಅನುಕರಿಸಿ ಶಬರಿಯ ರೂಪವನ್ನು ಧರಿಸಿದ ಸರ್ವಮಂಗಳೆಯಾದ ಪಾರ್ವತಿಯು ಕಾಳರಾತ್ರಿಯೆಂಬ ತನ್ನ ಹೆಸರನ್ನು ಅರ್ಥ ಪೂರ್ಣವನ್ನಾಗಿ ಮಾಡಿದಳೆನ್ನುವಂತೆ ಕಂಡಳು. ಹೇಗೆಂದರೆ, ಅವಳು ಧರಿಸಿದ್ದ ಚಿಗುರುಗಳ ಉಡಿಗೆಯು ಸಂಜೆಯ ಕೆಂಪಿನಂತೆ ಇದ್ದಿತು. ಮುತ್ತಿನಹಾರವು ನಕ್ಷತ್ರಮಾಲೆಯೆನ್ನುವಂತಿದ್ದಿತು. ದುಂಬಿಗಳಂತೆ ಕಪ್ಪಾಗಿ ವ್ಯಾಪಿಸಿದ್ದ ಮೈಬಣ್ಣವು ಗಾಢಾಂಧಕಾರವೆನಿಸಿತು. ಅವಳು ಧರಿಸಿದ್ದ ಮೂಗುಬಟ್ಟು ಬೆಳಗುವ ಶುಕ್ರಮಂಡಲದಂತೆ ಅಣಿಯಾಗಿ ಒಪ್ಪುತ್ತಿತ್ತು.

೧ ಮಸೆವಿಂ (ಯ) ೨ ಮೂಗುತಿ (ಯ)

ಮಹಾಸ್ರಗ್ಧರೆ ಅರನೇಱಿಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ ಪಂ
ಕರುಹಾಸ್ಯಂ ಬಿಣ್ಪನಾಳ್ದೊಪ್ಪುವ ನೆಲೆವೊಲೆ ಬಿಂಬಾಧರಂ ದೀರ್ಘನೇತ್ರಂ
ತರಳಾಪಾಂಗಂ ಬಟಲ್ಪಲ್ಮುಡಿ ಬಡನಡು ರಂಭೋರು ಕೋಂಕಾಂತ ಘುರ್ಬೊಂ
ದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ ೭

ಮತ್ತೇಭ ಹರಿಮಧ್ಯಂ ಮೃಗಶಾಬನೇತ್ರಮಳಿಮಾಲಾವೇಣಿ ಚಂಚದ್ರಥಾಂ
ಗರುಚಿಸ್ಫಾರಪಯೋಧರಂ ದ್ವಿರದಯಾನಂ ಕೋಕಿಲಾಲಾಪಮೊ
ಪ್ಪಿರೆ ಭಿಲ್ಲಾಂಗನೆಯರ್ಕಳಾದಮರಿಯರ್ ನೈಜಾಂಗಮಂ ನೋಡಿ ಭೀ
ತಿರಸಂ ತನ್ಮೃಗವೃಂದಕಾಗದಿರವಂ ತಾಳ್ದಂತೆ ಕಣ್ಗೊಪ್ಪಿದರ್ ೮

ಚಂಪಕ ತೊಳಗುವ ದಂತದೋಲೆ ಗುರುಗಂಜಿಯ ಬಣ್ಣಸರಂ ತಮಾಲದೊ
ಳ್ದಳಿರುಡೆ ತಳ್ತ ಪೀಲಿಯ ತರಂಗದ ಬಲ್ನಿಱಿಗಟ್ಟು ಸೂಡಿದು
ತ್ಪಳದಳಮಾಲೆ ತಾಳ್ದ ಪುಟುವಚ್ಚಿಯ ಬೊಟ್ಟು ಪಸಿರ್ಪುವೆತ್ತ ಪ
ಟ್ಟಳಿಯ ನಿಚೋಳವೊಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ ೯

ವಚನ ಮತ್ತಂ

೭. ಸಕಲ ಶಕ್ತಿದೇವತೆಯರೂ ಬೇಡತಿಯರ ರೂಪವನ್ನು ಧರಿಸಿ ಮೆರೆದರು. ಅವರಿಗೆ ಅರ್ಧ ಮಾಗಿದ ನೇರಳೆಹಣ್ಣಿನಂತೆ ಮೈಬಣ್ಣ, ದುಂಡಾಗಿದ್ದ ನಿತಂಬ, ಕಪ್ಪಾದ ಕುರುಳು, ಕಮಲದಂತೆ ಮುಖ, ಉಬ್ಬಿ ಶೋಭಿಸುವ ದೃಢವಾದ ಮೊಲೆಗಳು, ತೊಂಡೆಹಣ್ಣಿನಂತೆ ತುಟಿಗಳು, ಅಗಲವಾದ ಕಣ್ಣುಗಳು, ಚಂಚಲವಾದ ದೃಷ್ಟಿ, ಜಾರುತ್ತಲಿದ್ದ ಕೇಶರಾಶಿ, ತೆಳ್ಳಗಿದ್ದ ನಡು, ಬಾಳೆಯ ದಿಂಡಿನಂತಿರುವ ತೊಡೆಗಳು, ಬಾಗಿದ ಹುಬ್ಬು ಒಪ್ಪುತ್ತಿದ್ದುವು. ೮. ಶಕ್ತಿದೇವತೆಗಳು ತಮ್ಮನ್ನು ಕಂಡು ವನ್ಯಮೃಗಗಳು ಹೆದರದಿರಲೆಂದು, ವನದೇವತೆಯ ಸ್ವರೂಪವನ್ನೇ ಧರಿಸಿದರೋ ಎನ್ನುವ ರೀತಿಯಲ್ಲಿ ಬೇಡತಿಯರ ವೇಷವನ್ನು ಧರಿಸಿದರು. ಹೇಗೆಂದರೆ, ಅವರಿಗೆ ಸಿಂಹದಂತಿರುವ ನಡು, ಹುಲ್ಲೆಯ ಮರಿಗಿರುವಂತಹ ಕಣ್ಣುಗಳು, ದುಂಬಿಗಳ ಗುಂಪಿನಂತಿರುವ ಜಡೆ, ಚಕ್ರವಾಕಪಕ್ಷಿಗಳಂತೆ ಶೋಭಿಸುತ್ತಿರುವ ದುಂಡಾದ ಮೊಲೆಗಳು, ಆನೆಯು ನಡೆಯುವ ರೀತಿಯಲ್ಲಿ ಗಂಭೀರವಾದ ನಡೆ, ಕೋಕಿಲೆಯ ಧ್ವನಿಯಂತೊಪ್ಪುವ ಮಾತುಗಳು ಇದ್ದುವು. ೯. ಹೊಳೆಯುವ ದಂತದ ಓಲೆಗಳು, ಗುಲಗಂಜಿಯ ಬಣ್ಣದ ಮಾಲೆಗಳು, ಹೊಂಗೆಸೊಪ್ಪಿನ ಉಡಿಗೆ, ಹರಡಿದ ನವಿಲುಗರಿಗಳ ಪಾವುಡೆ, ಬಲವಾಗಿ ಬಿಗಿದಿದ್ದ ನಡುಗಂಟು, ಮುಡಿದಿದ್ದ ನೈದಿಲೆ ಹೂಗಳು, ಮಿಣುಕುಹುಳದ ರೆಕ್ಕೆಯಂತಿರುವ ಹಣೆಯ ಬೊಟ್ಟು. ಹೀಗೆ ಹಸಿರು ಕುಪ್ಪಸವನ್ನು ತೊಟ್ಟು, ದೇವರಮಣಿಯರು ಬೇಡಿತಿಯರಂತೆ ಕಣ್ಗೊಪ್ಪಿದರು. ವಚನ :

---

೧ ಗುಲು (ಚ) ೨ ನಿಚೊಲ್ಲಮೊ (ಚ, ಜ) ; ನಿಚೊಲ್ಲೆಯೊ (ಕ)

ಚಂಪಕ ತಲೆವಳಸುತ್ತೆ ಕಟ್ಟಿದ ತಳಿರ್ ನವಚಂಪಕಕರ್ಣಪೂರಮ
ಬ್ಜಲಸಿತಕರ್ಣಿಕಾರಚಿತಕಾಂಚಿ ಮರಂದದ ಬೊಟ್ಟು ಬೆನ್ನ ಮೇ
ಲೊಲೆದೆಸೆವೆಣ್ಣೆಗಂಟು ಪದವಿಲ್ ಮೊನೆಯಂಬು ಲತಾಂತಮಾಲೆ ಮು
ಜುಲಗಜದಂತದೊಳ್ಪಳೆ ವಿರಾಜಿಸೆ ಕಣ್ಗೆಸೆದರ್ ಪುಳಿಂದಿಯರ್ ೧೦

ಮೃಗಮದದಂಗರಾಗಮಸಿತೋತ್ಪಲಮಾಲೆಯ ಚೊಲ್ಲೆಯಂ ಮನಂ
ಬುಗುವ ತಮಾಲಪಲ್ಲವದ ಮೆಲ್ಲುಡೆ ಕಟ್ಟಿದ ಪೀಲಿದಂಡೆ ಚಿ
ಲ್ವಗಲದ ಸಾಂದ್ರಕಜ್ಜಲಲಲಾಮಮಗಾಹಿತರತ್ನಭೂಷಣಂ
ಸೊಗಯಿಸೆ[1] ದೇವಿಯರ್ ಬಳಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ[2] ೧೧

ಚಂಪಕ ಸಿರಿ ಶಚಿ ವಾಣಿ ರೋಹಿಣಿ ಕರಾಳಿ ಕಳಾವತಿ ಕಾಳರಾತ್ರಿ ಸೌಂ
ದರಿ ವನಲಕ್ಷ್ಮಿ ಶಾಕಿನಿ ಕಪಾಲಿನಿ ಡಾಕಿನಿ ಕಾಳಿ ಮಾರಿ ಶಾ
ರ್ವರಿ ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ ಸಿದ್ಧಿ ಸಂ
ಗರಚರಿ ಚಕ್ರಧಾರಿಣಿ ಮನೋನ್ಮನಿ ಮಾಲಿನಿಯೆಂಬ ಶಕ್ತಿಯರ್ ೧೨

ಮತ್ತು ೧೦. ತಲೆಯ ಸುತ್ತಲೂ ಚಿಗುರುಗಳನ್ನು ಕಟ್ಟಿಕೊಂಡು, ಹೊಸದಾಗಿ ಅರಳಿದ ಸಂಪಗೆಹೂವನ್ನು ಕಿವಿಯಲ್ಲಿಟ್ಟುಕೊಂಡು, ತಾವರೆ ಮತ್ತು ಕರ್ಣಿಕಾರಪುಷ್ಪಗಳನ್ನು ಕಟ್ಟಿದ ಮಾಲೆಯನ್ನು ಡಾಬಿನಂತೆ ಬಿಗಿದು, ಮಕರಂದದ ಹಣೆಬೊಟ್ಟನ್ನಿಟ್ಟು, ಎಣ್ಣೆ ಸವರಿದ ಜಡೆಯಗಂಟು ಬೆನ್ನಮೇಲೆ ಅಲುಗುತ್ತಿರಲು, ಬಿಲ್ಲನ್ನೂ ಚೂಪಾದ ಬಾಣವನ್ನೂ ಹಿಡಿದು, ಹೂಮಾಲೆಗಳನ್ನು ಧರಿಸಿ, ಆನೆಯ ದಂತದ ಕಡಗಗಳನ್ನು ಇಟ್ಟುಕೊಂಡು ಶಬರಿಯರು ಕಂಗೊಳಿಸಿದರು. ೧೧. ದೇವತಾಸ್ತ್ರೀಯರು ಮೈಗೆ ಕಸ್ತೂರಿಯನ್ನು ಬಳಿದುಕೊಂಡರು. ಕನ್ನೈದಿಲೆಹೂಗಳನ್ನು ಜಡೆಯ ಕೊನೆಗೆ ಕುಚ್ಚನ್ನಾಗಿ ಕಟ್ಟಿಕೊಂಡರು. ಮನೋಹರವಾದ ರೀತಿಯಲ್ಲಿ ಹೊಂಗೆಯ ಚಿಗುರಿನ ಮೇಲ್ಕಟ್ಟನ್ನು ಬಿಗಿದರು. ನವಿಲುಗರಿಗಳನ್ನು ಸರವಾಗಿ ಮಾಡಿ ಹಾಕಿಕೊಂಡರು. ಅಂದಕ್ಕೆ ಊನವಾಗದಂತೆ ಅಗಲವಾಗಿ ಸಾದಿನ ಬೊಟ್ಟನ್ನಿಟ್ಟರು. ಇಂದ್ರನೀಲಮಣಿಗಳ ಒಡವೆಗಳನ್ನು ಧರಿಸಿ ಪರ್ವತರಾಜಕುಮಾರಿಯ ಸುತ್ತಲೂ ನೆರೆದರು. (ಅಗ + ಆಹಿತ = ಪರ್ವತವೈರಿಯಾದ ಇಂದ್ರ) ೧೨. ಲಕ್ಷ್ಮಿ, ಶಚಿ, ಸರಸ್ವತಿ, ರೋಹಿಣಿ, ಕರಾಳಿ, ಕಾಳರಾತ್ರಿ, ಸೌಂದರಿ, ವನಲಕ್ಷ್ಮಿ, ಶಾಕಿನಿ, ಕಪಾಲಿನಿಯರು, ಡಾಕಿನಿಯರು, ಕಾಳಿ, ಮಾರಿ, ಶಾರ್ವರಿಯೆಂಬ ರಾತ್ರಿದೇವತೆ, ರತಿ, ಮುಕ್ತಕೇಶಿ, ಶವವಾಹಿನಿಯೆನಿಸಿದ ದಕ್ಷಿಣ ಕಾಳಿ, ಮೋಹಿನಿ, ಚಂಡಿ, ಸಿದ್ಧಿ, ರಣದುರ್ಗೆ, ಚಕ್ರಧಾರಿಣಿಯೆಂಬ ಯಂತ್ರದೇವತೆ, ಮನೋನ್ಮನಿಯೆಂಬ

---

೧ ಸೊಗಯಿಪ ಚ) ೨ ಪುತ್ರಿಯಂ (ಕ, ಯ)

ಮತ್ತೇಭ ಕ್ಷಿತಿ ಶಾಕಂಬರಿ ವಾರದೇವತೆಯರಾಶಾದೇವಿಯರ್ ಯಜ್ಞದೇ
ವತೆ ಮಂತ್ರಾತ್ಮಿಕೆ ಸಪ್ತಮಾತೃಕೆಯರಂಭೋವಾಸಿನೀ ನಿಮ್ನಗಾ
ಸತಿಯರ್ ಜೋಗಿಣಿಯರ್ ಸುಧಾಂಶುವಧುಗಳ್ ಗಾಯತ್ರಿ ಸಾವಿತ್ರಿ ಸ
ನ್ಮತಿ ವಿಖ್ಯಾತಿಯೆನಿಪ್ಪ ದೇವಿಯರಮಂದೋತ್ಸಾಹದಿಂದೆಯ್ದಿದರ್ ೧೩

ವಚನ ಮತ್ತಂ

ಚಂಪಕ ಬಡನಡು ಬಳ್ಕೆ ಬಟ್ಟಮೊಲೆ ಮೇಲುದನೆತ್ತೆ ನಿತಂಬಮಂಡಲಂ
ಪೊಡರೆ ಕಟಾಕ್ಷಕಾಂತಿ ಮಿಱುಗುತ್ತಿರೆ ಸೋರ್ಮುಡಿ ಜಾಱೆ ಮೀಱೆ ದಿಂ[1]
ಕಿಡೆ ರದನಾಂಶು ಬಿಲ್ಸರಲನಾಂತು ಕರಾಗ್ರದೊಳಾರ್ಪಿನಿಂದದೇಂ
ನಡೆದುದೊ ಕಾರ ಕಾರ್ಮು[2]ಗಿಲ ಬಣ್ಣದ ತಿಣ್ಣದ ನಿರ್ಜರೀಜನಂ ೧೪

ವಚನ ಮತ್ತಂ

ಚಂಪಕ ಅಳಿಕುಲನೀಲಕುಂತಳದ ಕಾಂತಿ ವಪುರ್ಲತೆಯಂ ಮುಸುಂಕಿದಂ
ತಳವಡೆ ಕರ್ಪು ಕಾರ್ಮುಗಿಲ ಮಿಂಚಿನೆ ಕಣ್ಗದಿರುರ್ವಿ ಮಿಂಚೆ ಸಾ
ರ್ದೆಳಸಿ ಪಗಿಲ್ತು ಕೇಕಿಯೆನೆ ಒಲ್ಮಿಡಿ ತೋಱೆ ಕಲಾಪಮಾಲೆ ಸಂ
ಗಳಿಸೆ ನಗೇಂದ್ರಜಾತೆಯೊಡನೆಟ್ಟಿರುತಿರ್ದರಮರ್ತ್ಯನಾರಿಯರ್ ೧೫

ನಾಡಿದೇವತೆ, ಮಾಲಿನಿಯೆಂಬ ಪುಷ್ಪದೇವತೆ, ಈ ಶಕ್ತಿಸ್ವರೂಪಿಣಿಯರೂ, ೧೩. ಭೂದೇವಿ, ವನದೇವಿ, ದಿನಾಭಿಮಾನಿಯರಾದ ವಾರದೇವತೆಯರು, ದಿಗ್ದೇವತೆಯರು, ಯಜ್ಞದೇವತೆಯರು, ವೇದರೂಪಿಗಳಾದ ಮಂತ್ರದೇವತೆಯರು, ಸಪ್ತಮಾತೃಕೆಯರು, ಸಾಗರದೇವಿಯರು, ನದಿಗಳ ಅಭಿಮಾನದೇವತೆಯರು, ಯೋಗಿನೀಗಣಗಳು, ಚಂದ್ರನ ರಮಣಿಯರಾದ ನಕ್ಷತ್ರದೇವಿಯರು, ಪ್ರಾತಃಸಂಧ್ಯಾಭಿಮಾನಿಯಾದ ಗಾಯತ್ರಿದೇವಿ, ಮಾಧ್ಯಾಹ್ನಿಕ ದೇವತೆಯಾದ ಸಾವಿತ್ರಿ, ಸನ್ಮತಿ, ವಿಖ್ಯಾತಿ ಎಂಬುವ ದೇವರಮಣಿಯರು ಅತಿಶಯ ಹರ್ಷದಿಂದ ಜತೆಯಲ್ಲಿ ಹೊರಟರು. ವಚನ : ಮತ್ತು ೧೪. ಸಣ್ಣ ನಡುವು ಅಲುಗುತ್ತಿರಲು, ವೃತ್ತಕುಚಗಳು ಮೇಲುಸೆರಗನ್ನು ಜಾರಿಸುತ್ತಿರಲು, ನಿತಂಬಮಂಡಲವು ಹರವಾಗಿರಲು, ಕುಡಿನೋಟದ ಹೊಳಪು ಥಳಥಳಿಸುತ್ತಿರಲು, ಸಡಿಲವಾದ ತುರುಬು ಜಾರುತ್ತಿರಲು, ಹಲ್ಲುಗಳ ಹೊಳಪು ಮಿಂಚಿ ಪ್ರಸರಿಸುತ್ತಿರಲು, ಬಿಲ್ಲು, . ಬಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ಕಾಲಮೇಘದಂತೆ ಕಪ್ಪಾದ ಮೈಬಣ್ಣದ, ಮಂದಗಮನೆಯರಾದ ದೇವಸ್ತ್ರೀಯರು ಠೀವಿಯಿಂದ ನಡೆದು ಬರುತ್ತಿದ್ದರು. ವಚನ : ಅಲ್ಲದೆ ೧೫. ದೇವತಾರಮಣಿಯರು ಬೇಡತಿಯರ ವೇಷಧರಿಸಿ ಪರ್ವತರಾಜಪುತ್ರಿಯೊಡನೆ ನಡೆತರುತ್ತಿದ್ದರು. ಕಪ್ಪಾಗಿದ್ದ ಅವರ ಶರೀರಗಳು, ದುಂಬಿವಿಂಡಿನಂತೆ ಇದ್ದ ಅವರ ಕೇಶಪಾಶದ ಹೊಳಪು ಮುಸುಕಿ ಮತ್ತು ಕಪ್ಪಾಗಿ ಕಾಣುತ್ತಿದ್ದುವು. ನೀಲಮೇಘದಲ್ಲಿ ಮಿಂಚಿನ ಪ್ರಕಾಶವಾದಂತೆ, ಕಣ್ಣಕಾಂತಿಯು

---

೧ ಧೀಂ (ಯ) ೨ ಕರ್ಮು (ಯ)

ತಳಿರ್ಗಳಿಮರ್ಕೆವೆತ್ತ ತಲೆಕಟ್ಟು ಲತಾಂತದ ಮಾಲೆ ಬೆನ್ನ ಬ
ತ್ತಳಿಕೆ ಮರಂದದಣ್ಪು ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇ
ಣಿಳವಡೆ ತೊಟ್ಟ ಪೊಂಬುಲಿಯ ಸಮ್ಮದ ಚಲ್ಲಣವೊಪ್ಪೆ ಬಿಲ್ಸರಲ್
ದಳೆದು ಗಣಾಳಿ ರುದ್ರತತಿ ತಾಳ್ವುದನೂನ ಪುಳಿಂದವೇಷಮಂ ೧೬

ಮಹಾಸ್ರಗ್ಧರೆ ನೆರೆದೆಟ್ಟಿಂದಿರ್ದುದಾ ವೇಳೆಯೊಳೆ ವನಚರಾಕಾರಮಂ ತಾಳ್ದು ನಂದೀ
ಶ್ವರನುಂ ಭೃಂಗೀಶ ವೀರೇಶ್ವರ ಗುಹ ಗಣಪರ್ ದಾರುಕಂ ರೇಣುಕಂ ದು
ರ್ಧರನುಂ ಧೂಮ್ರಾಕ್ಷನುಂ ಧೂರ್ಜಟಿಯುಸಿತಗಳಂ ಬಭ್ರು ಶುಭ್ರಾಂಗನಂಭೋ
ಧರನಾದಂ ತಾಳಜಂಘಂ ಮೊದಲೆನಿಪ ಮಹಾಸತ್ತ್ವಸಾಂದ್ರರ್ ಗಣೇಂದ್ರರ್ ೧೭

ಮಹಾಸ್ರಗ್ಧರೆ ಭುವನೇಶಂ ಭೂತಿಯುಕ್ತಂ ಭುಜಗಧರನಜೇಯಂ ಮಹಾಕಾಯನುಗ್ರಂ
ಶಿವರುದ್ರಂ ಪೂರ್ಣಭದ್ರಂ ಬಲವಿಕರಣನಭ್ರಾಂಗನಾದಿತ್ಯವರ್ಣಂ
ಭವನಾಶಂ ಶಂಭುರುದ್ರಂ ಕಲವಿಕರಣನೋಂಕಾರನೀಶಾನರುದ್ರಂ
ಧವಳಾಂಗಂ ಧರ್ಮರೂಪಂ ದಮನವಿಮದರುದ್ರರ್ಕಳೆಯ್ತಂದರಾಗಳ್ ೧೮

ಚಿಮ್ಮುತ್ತಿರಲು, ದಟ್ಟವಾದ ಅವರ ತುರುಬು ಗರಿಗೆದರಿ ಸಮೀಪಕ್ಕೆ ಸುಳಿಯುವ ನವಿಲಿನಂತೆ ಕಾಣುತ್ತಿದ್ದಿತು. ಒಡ್ಯಾಣವು ಸುಂದರವಾಗಿ ಒಪ್ಪುತ್ತಿತ್ತು. ೧೬. ಶಿವಗಣಗಳೂ, ರುದ್ರರೂ ಬೇಡರ ವೇಷವನ್ನು ಧರಿಸಿದರು. ಅವರು ಚಿಗುರೆಲೆಗಳಿಂದ ಕುಲಾವಿಯನ್ನು ಮಾಡಿಕೊಂಡು ತಲೆಗಿಟ್ಟರು. ಹೂಮಾಲೆಗಳನ್ನು ಧರಿಸಿದರು. ಬೆನ್ನಲ್ಲಿ ಬತ್ತಳಿಕೆ, ಹೂವಿನ ರಸದ ಹಣೆಬೊಟ್ಟು, ತೊಟ್ಟಿದ್ದ ಹಸಿರು ಅಂಗಿಗೆ ಪಾರ್ಶ್ವದಲ್ಲಿ ಒಂದು ಗೇಣು ಉದ್ದವಿರುವ ನವಿಲುಗರಿಯ ಕುಚ್ಚುಗಳು, ಹೊಂಬಣ್ಣದ ಹುಲಿಯ ತೊಗಲಿನ ಚಡ್ಡಿಯನ್ನು ತೊಟ್ಟರು. ಧನುರ್ಬಾಣಗಳನ್ನು ಹಿಡಿದುಕೊಂಡು ಹೊರಟರು. ೧೭. ಆ ಸಮಯಕ್ಕೆ ಸರಿಯಾಗಿ ನಂದೀಶ್ವರ, ಭೃಂಗೀಶ, ವೀರೇಶ್ವರ, ಷಣ್ಮುಖ, ಗಣಪತಿ, ದಾರುಕ, ರೇಣುಕ, ದುರ್ಧರ, ಧೂಮ್ರಾಕ್ಷ, ಧೂರ್ಜಟಿ, ಕಾಳಕಂತ, ಬಭ್ರು, ಶುಭ್ರಾಂಗ, ಅಂಭೋದರನಾದ ತಾಳಜಂಘನೇ ಮೊದಲಾದ ಮಹಾ ಪ್ರತಾಪಿಗಳಾದ ಗಣಾಧಿಪತಿಗಳು ಬೇಡರ ರೂಪವನ್ನು ಧರಿಸಿ ಬಂದು ಸೇರಿದರು. ೧೮. ಭುವನೇಶ, ಭೂತಿಯುಕ್ತ, ಭುಜಗಧರ, ಅಜೇಯ, ಮಹಾಕಾಯ, ಉಗ್ರ, ಶಿವರುದ್ರ, ಪೂರ್ಣಭದ್ರ, ಬಲವಿಕರಣ, ಅಭ್ರಾಂಗ, ಆದಿತ್ಯವರ್ಣ, ಭವನಾಶ, ಶಂಭುರುದ್ರ, ಕಲವಿಕರಣ, ಓಂಕಾರ, ಈಶಾನರುದ್ರ, ಧವಳಾಂಗ, ಧರ್ಮರೂಪ, ದಮನ, ವಿಮದ ಮೊದಲಾದ ರುದ್ರಗಣಗಳೂ ಬಂದರು.

---

೧ ಳೆಟ್ಟಿಂದ (ಕ, ಯ)

ಮತ್ತೇಭ ಸಿಡಿಲಂ ನುರ್ಗುವ ಶೇಷನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊ
ಟ್ಟಿಡುವಾಕಾಶಧರಾತಳಂಗಳನೆ ಕೆಯ್ದಾಳಂಗಳಂ ಮಾಳ್ಪ ಪೆ
ರ್ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡುವಾದಿತ್ಯನಂ
ಮಿಡಿವಾರ್ಪುಳ್ಳ ಗಣಾಧಿನಾಥರೊಡನೆಯ್ತಂದರ್ ಮಹೋತ್ಸಾಹದಿಂ ೧೯

ವಚನ ಅಂತೆಯ್ತಂದ ಗಣೇಂದ್ರಸಂದೋಹಮಲ್ಲದೆಯುಂ ಬೇಱೆವೇಱೆ ನಿಜರಮಣಿಯರೊಡನೆ ಕಿರಾತನೂತ್ನವೇಶಾಲಂಕೃತರಾಗಿ

ಚಂಪಕ ಕುಲಿಶಧರಂ ಧನಂಜಯನಿನಾತ್ಮಭವಂ ದನುಜಂ ಜಲಾಧಿಪಂ
ಜ್ವಲನಸಖಂ ಕುಬೇರನನಲಾಕ್ಷಮಹರ್ಪತಿ ಪದ್ಮವೈರಿ ಮಂ
ಗಲನುಶನಂ ಬೃಹಸ್ಪತಿಮುಖರ್ ವಸುಗಳ್ ಸುರಸಿದ್ಧಸಾಧ್ಯರು
ಜ್ಜ್ವಲತರಯಕ್ಷಚಾರಣಪಿಶಾಚಗಣಂ ನಡೆತಂದುದಟ್ಟಿಯಿಂ ೨೦

ಮುನಿಕೋಟಿ ಮುಗಿದ ಕೆಯ್ಗಳಿ
ನನುನಯದಿಂ ಪೊಗೞೆ ಜಯಜಯಧ್ವನಿಯಿಂ ಪಾ
ವನಪದದಿಂ ಮೆಟ್ಟಿದನೊ
ಯ್ಯನೆ ಗಿರಿಶಂ ವಿಧಿನಿಷೇಧಮಯಪಾದುಕೆಯಂ ೨೧

೧೯. ಸಿಡಿಲನ್ನು ಪುಡಿಗುಟ್ಟುವವರೂ, ಶೇಷನನ್ನು ಆಭರಣದಂತೆ ಧರಿಸುವವರೂ, ಪ್ರಳಯಕಾಲದ ಬೆಂಕಿಯನ್ನು ಉಜ್ಜಿ ಹಣೆಗೆ ಬೊಟ್ಟಿಕ್ಕುವವರೂ, ಭೂಮ್ಯಂತರಿಕ್ಷಗಳನ್ನು ಕೈಯಲ್ಲಿ ಹಿಡಿಯತಕ್ಕ ತಾಳಗಳನ್ನಾಗಿ ಮಾಡುವವರೂ, ಮಹಾಸಮುದ್ರವನ್ನು ಆಪೋಶನವ ಮಾಡುವವರೂ, ಕುಲಪರ್ವತಗಳನ್ನು ಕೈಯಲ್ಲಿ ಹಿಡಿದು ಚೆಂಡಾಟವಾಡುವವರೂ, ಸೂರ್ಯಬಿಂಬವನ್ನು ಬೆರಳುಗಳಿಂದ ಚಿಮ್ಮುವ ಸಾಮರ್ಥ್ಯವುಳ್ಳವರೂ ಆದ ಗಣಾಧಿಪತಿಗಳು ಮಹಾಉತ್ಸಾಹದಿಂದ ಕೂಡಲೇ ಬಂದರು. ವಚನ : ಈ ರೀತಿಯಲ್ಲಿ ಆಗಮಿಸಿದ ಗಣಾಧಿನಾಯಕರ ಸಮೂಹವೇ ಅಲ್ಲದೆ, ಬೇರೆ ಬೇರೆ, ತಮ್ಮ ಪತ್ನಿಯರೊಡಗೂಡಿ, ಬೇಡರಂತೆ ಹೊಸ ವೇಷವನ್ನು ಅಲಂಕರಿಸಿಕೊಂಡ, ೨೦. ಇಂದ್ರನೂ, ಅಗ್ನಿಯೂ, ಸೂರ್ಯನ ಮಗನಾದ ಯಮನೂ, ನಿರುತಿಯೂ, ವರುಣನೂ, ವಾಯುವೂ, ಕುಬೇರನೂ, ಈಶಾನನೂ, ಸೂರ್ಯನೂ, ಚಂದ್ರನೂ, ಅಂಗಾರಕನೂ, ಶುಕ್ರನೂ, ಬೃಹಸ್ಪತಿಯೂ ಮೊದಲಾದವರೂ, ವಸುಗಳೂ, ಸಿದ್ಧರೂ, ಸಾಧ್ಯರೂ, ಮಹಾತೇಜಸ್ವಿಗಳಾದ ಯಕ್ಷರೂ, ಚಾರಣರೂ, ಪಿಶಾಚಗಣಗಳೂ ಆಸಕ್ತಿಯಿಂದ ಬಂದರು. ೨೧. ಮುನಿಗಳ ಸಮೂಹವು ಕೈಗಳನ್ನು ಮುಗಿದುಕೊಂಡು, ವಿನೀತರಾಗಿ ಜಯ ಜಯಕಾರವನ್ನು ಮಾಡಿ ಹೊಗಳುತ್ತಿರಲು, ಪರಮೇಶ್ವರನು ವಿಧಿ, ನಿಷೇಧ

ಚಂಪಕ
ಮೊಳಗಿದುದಭ್ರದೊಳ್ ದಿವಿಜಭೇರಿಯ ಭೂರಿಗಭೀರರಾವಮು
ಜ್ಜ್ವಳಸಿತಶಂಖನಾದದೊಡನಾನಕಘೋಷಣಮುಣ್ಮಿದತ್ತು ಮಂ
ಗಳರವದಿಂದೆ ಪೊಂಬರಿಯಣಂಗಳೊಳಾರತಿಯೆತ್ತಿ ಪಾಡಿದರ್
ವಿಳಸಿತಭಾರ್ಗವೀ ವಿಧಿವಧೂ ರತಿಮುಖ್ಯನಿಳಿಂಪಕಾಂತೆಯರ್ ೨೨

ಮತ್ತೇಭ
ಮಿಡಿವಿಲ್ ಮಿಂಟೆ ತುಪಾಕವಿಟ್ಟಿ ಪದವಿಲ್ ಕೂರಂಬು ಬೆನ್ಗಲ್ಲಿ ಕೆಯ್
ಪೊಡೆ ಗಾಳಂ ಕಿಱುಗೂಳಿ ಬೀಸುವಲೆ ಬೆಳ್ಳಾರಂ ಸೊಡರ್ಮುಡ್ಡಿ ಕ
ರ್ಪಡಗಿಮುಂಟಗಿಡ್ಡಣಮುಲ್ಪಣಂ ಕವಣೆ ನಾರಾಚಂ ಕವಲ್ಕಣ್ಣಿ ಪೇ
ರಡಿ ಖಡ್ಗಂ ಒಡಿಕೋಲ್ಗಳೊಪ್ಪೆ ಜವದಿಂದೆಟ್ತಂದರಾ ಧೀವರರ್ ೨೩

ಇಡುವಲೆ ಸಿಡಿವಲೆ ಕಿಱುವಲೆ
ನಡೆವಲೆ ಪೆರ್ವಲೆ೨ ತೊಡಂಕುವಲೆ ಕೊಲ್ವಲೆ ಕ
ಕ್ಕಡವಲೆ ನಿಡುವಲೆ ಸಾಲ್ವಲೆ
ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ ೨೪

ಗಳೆಂಬ ಪಾದುಕೆಗಳನ್ನು ತನ್ನ ಕಾಲಿಗೆ ಧರಿಸಿದನು. ೨೨. ಆಗ ಅಂತರಿಕ್ಷದಲ್ಲಿ ದೇವ ದುಂದುಭಿಗಳ ವಿಶೇಷವಾದ ಗಂಭೀರಧ್ವನಿಯು ಮೊಳಗಿತು. ದಿವ್ಯವಾದ ಬಿಳಿಯ ಶಂಖ ಧ್ವನಿಯೊಡನೆ, ತಮಟೆಗಳ ಶಬ್ದವೂ ಕೇಳಿಸಿತು. ಲಕ್ಷ್ಮಿ, ಸರಸ್ವತಿ, ರತಿಯೇ ಮೊದಲಾದ ದೇವರಮಣಿಯರು ಮಂಗಳಗೀತೆಗಳನ್ನು ಹಾಡುತ್ತಾ, ಸುವರ್ಣದ ಹರಿವಾಣಗಳಲ್ಲಿ ಆರತಿಯೆತ್ತಿದರು. ೨೩. ಬೆರಳಿನಿಂದ ಮಿಡಿದು ಹಾರಿಸುವ ಬಿಲ್ಲು, ಸನ್ನೆಕೋಲು, ಕೊಳವಿಬಾಣ, ತಿವಿಯುವ ಕೋಲು, ಕೈಬಿಲ್ಲು, ಹರಿತವಾದ ಬಾಣಗಳು, ಬೆನ್ನಿನಲ್ಲಿ ಜೋಲಾಡುತ್ತಿದ್ದ ಕತ್ತಿ, ಕೈಮಚ್ಚು, ಗಂಟಲಮುಳ್ಳು, ಸಣ್ಣಬನಿಕೆ, ಬೀಸುವ ಬಲೆ, ದೊಡ್ಡ ಬಲೆ, ಭ್ರಾಂತಿಯನ್ನುಂಟುಮಾಡುವ ದೀವಿಗೆಗಳು, ಕರಿಯ ಬಣ್ಣದ ಮುಸುಕು, ಮಂಕುಬೂದಿ, ಬೆದರಿಸುವ ವಾದ್ಯಗಳು, ಕವಣೆ, ಸಲಾಕೆಗಳು, ಕಣ್ಣೆಚೀಲ, ದೊಡ್ಡ ದೊಣ್ಣೆಗಳು, ಖಡ್ಗಗಳು, ಬಡಿಯುವ ಕೋಲುಗಳು-ಇವನ್ನು ಹಿಡಿದುಕೊಂಡು ಆ ಬೇಡರು ಬೇಗನೆ ಬಂದರು. ೨೪. ಇಡುವ ಬಲೆಗಳೂ, ಹಾರಿಸುವ ಬಲೆಗಳೂ, ಸಣ್ಣ ಬಲೆಗಳೂ, ನಡೆಯುತ್ತಾ ಬೀಸುವ ಬಲೆಗಳೂ, ದೊಡ್ಡ ಬಲೆಗಳೂ, ತೊಡರಿಬೀಳುವಂತೆ ಮಾಡುವ ಬಲೆಗಳೂ, ಕೊಲ್ಲುವಂತಹ ಬಲೆಗಳೂ, ಜಜ್ಜಿಹಾಕುವ ಬಲೆಗಳೂ, ಎತ್ತರವಾದ ಬಲೆಗಳೂ, ಸಾಲಾಗಿ ಕಟ್ಟುವ ಬಲೆಗಳೂ, ದಾರಿಯನ್ನು ಬಿಟ್ಟು ಅನಂತರ ಸಿಕ್ಕಿಸಿಕೊಳ್ಳುವ

೧-೧ ಪೆರ್ಮ (ಚ) ೨ ಪೆರ್ಬಲೆ (ಕ)

ವಚನ ಮತ್ತಂ ಮತ್ತಮಲ್ಲದೆಯುಂ

ಮತ್ತೇಭ ಪ್ರಣವಂ ಶೃಂಖಲೆ ಸಾರಮೇಯಮುಮುದಾರಾಮ್ನಾಯಂ ಪುರಾಣವ್ರಜಂ
ಶಣ[೨]ಸೂತ್ರಂ ಸ್ಮೃತಿ ಜಂತ್ರಮಾಗಮಮೆ ಬೆಳ್ಯಾರಂ ಮಹಾದೀಕ್ಷೆ ಕೊ
ರ್ಗಣೆ ತರ್ಕಂ ಬಡಿಕೋಲ್ ಸಮಾಧಿ ಸಬಳಂ ಕೂರಿಟ್ಟಿ[೩] ಯೋಗಂ ಸಲ
ಕ್ಷಣಮಂತ್ರಂ ಧನು ಜ್ಞಾನಮೇ ಕವಣೆ ನಾರಾಚಂ ತಪೋವಿಸ್ತರಂ ೨೫

ಚಂಪಕ ಸುರಿಗೆ[೪] ವಿರಕ್ತಿ ಸುವ್ರತಮಡಾಯುಧಮುಷ್ಟಣಮಾತ್ಮವಿದ್ಯೆ ಸ
ಚ್ಚರಿತಮೆ ಬೋಟೆಯಂಬು ಕಿಱುಗೇಣ್ ಶ್ರವಣಂ ಮನನಂ ಕರಾಸಿ ಶಾಂ
ಕರನವಭಕ್ತಿ [೫]ದೀಹದ ಮೃಗಾರಿಗಳಾಗೆ[೫] ಗಣಾಳಿ ತಾಳ್ದು ವಿ
ಸ್ಫುರಿತವಿಲಾಸ[೬]ದಿಂ ನಡೆದರೊ[೭]ಲ್ದೊಡಗೂಡಿ ಕಿರಾತರುದ್ರನಂ[೮] ೨೬

ಗಱಿಗಣೆ ಬೆನ್ನ ಬತ್ತಳಿಕೆ ಮೆಟ್ಟಿದ ಕೆರ್ಪು ತಮಾಲಪಲ್ಲವಂ
ತುಱುಗಿದ ಗೊಂಡೆಯಂ[೯] ಮಿಸುಪ ಬಿಲ್ ಗುರುಗುಂಜೆಯ ದಂಡೆ ಮುಂಡೆಯೊಳ್
ಮಿಱುಗುವ ಪೀಲಿಗಟ್ಟು ಪೊಸನಿಗ್ಗವದೊಳ್ಬಳೆ ಪಚ್ಚೆಗುಪ್ಪಸಂ
ಕಿಱುವಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ ೨೭

ಬಲೆಗಳೂ ಆ ಬೇಟೆಗಾರರ ಬಳಿಯಲ್ಲಿದ್ದುವು. ವಚನ: ಅಷ್ಟಲ್ಲದೆ, ೨೫. ಓಂಕಾರವೇ ಸರಪಣಿ, ಪವಿತ್ರವಾದ ವೇದಗಳೇ ನಾಯಿಗಳು, ಪುರಾಣಗಳ ಸಮೂಹವೇ ಕುಣಿಕೆ ಹಗ್ಗಗಳು, ಸ್ಮೃತಿಗಳೇ ಬೋನುಗಳು, ಆಗಮಗಳೇ ದೊಡ್ಡ ಬಲೆಗಳು, ಲಿಂಗದೀಕ್ಷೆ ಯೆಂಬುವುದೇ ಹರಿತವಾದ ಸಲಾಕಿ, ತರ್ಕಶಾಸ್ತ್ರವೇ ಬಡಿಯುವ ಕೋಲು, ಚಿತ್ತ ಸಮಾಧಿಯೇ ಶೂಲ, ಯೋಗವೇ ಕ್ರೂರವಾದ ಈಟಿ, ಸ್ವರಲಕ್ಷಣದಿಂದ ಉಚ್ಚರಿಸುವ ವೇದಮಂತ್ರಗಳೇ ಬಿಲ್ಲು, ಧ್ಯಾನವು ಕವಣೆಗಲ್ಲು, ಅಭಿವೃದ್ಧಿಯಾಗುತ್ತಿರುವ ತಪಸ್ಸೇ ಬಾಣಗಳು. ೨೬. ವೈರಾಗ್ಯವೇ ಇರಿಯುವ ಕತ್ತಿ, ಶ್ರೇಷ್ಠವಾದ ವ್ರತವೇ ಅಡಾಯುಧ, ಆತ್ಮವಿದ್ಯೆಯೇ ಗುರಾಣಿ, ಸದಾಚಾರವೇ ದಿವ್ಯಾಸ್ತ್ರಗಳು, ಶಾಸ್ತ್ರವನ್ನು ಶ್ರವಣ ಮಾಡುವುದೇ ಚಿಣ್ಣಿಗೋಲು, ಶಾಸ್ತ್ರಾರ್ಥಚಿಂತನವೇ ಕೈಕತ್ತಿ, ಶಂಕರನಲ್ಲಿ ಮಾಡುವ ನವವಿದ ಭಕ್ತಿಗಳೇ ವನ್ಯಮೃಗಗಳನ್ನು ನುಬಿಸುವುದಕ್ಕಾಗಿ ಬಳಸುವ ಮೃಗಗಳು. ಈ ರೀತಿಯಲ್ಲಿ ಸನ್ನದ್ಧರಾದ ಶಿವಗಣಗಳು ಬೆಡಗಿನಿಂದಲೂ, ಶಿವನಲ್ಲಿನ ಭಕ್ತಿಯಿಂದಲೂ ಕೂಡಿ ಕಿರಾತ ರುದ್ರನನ್ನು ಅನುಸರಿಸಿದರು. ೨೭. ಗರಿಗಳನ್ನು ಕೂಡಿಸಿದ್ದ ಬಾಣಗಳು, ಬೆನ್ನಿನಲ್ಲಿ ಕಟ್ಟಿದ್ದ ಬತ್ತಳಿಕೆ, ಕಾಲಿಗೆ ಹಾಕಿಕೊಂಡ ಕೆರಗಳು, ಹೊಂಗೆಯ ಚಿಗುರುಗಳಿಂದ ಕಟ್ಟಿದ ಕುಚ್ಚುಗಳು, ಜ್ವಲಿಸುವಂತಿದ್ದ ಬಿಲ್ಲು, ಜುಟ್ಟಿಗೆ ಮುಡಿದಿದ್ದ ಗುಲಗಂಜಿಯ ದಂಡೆಗಳು, ಸೆಕ್ಕಿಸಿಕೊಂಡ ನವಿಲುಗರಿಯ ಕುಲಾವಿ, ಹೊಸದಾದ ಗಜದಂತದಿಂದ ಮಾಡಿದ್ದ ನವೀನ

೧ ಅಂತು (ಗ, ತ) ೨ ಚಣ (ಕ, ಗ, ಜ) ೩ ಕೂರೀಟಿ (ಚ, ಜ) ೪ ಸುರಗಿ (ಯ) ೫-೫ ದೀಹದ ಮೃಗಾದಿಗಳಾಗೆ (ಚ, ಜ) ; ದೀಪಕಮೃಗಾವಳಿಯಾಗೆ (ಯ) ೬ ವಿಶಾಲ (ಕ) ೭ ನಡೆದುದೊ (ಯ) ೮ ರುದ್ರನಾ (ಯ) ೯ ಯಿಂ (ವ)

ಕರಿರಿಪು ಮತ್ಸರಂ ಮದಮೆ ದಂತಿ ವಿಮೋಹಮೆ ಖಡ್ಗಿ ಕಾಮಮೇ
ಹರಿಣಮಸೂಯೆ ಸೂಕರಮನಲ್ಪತರಕ್ಷುವೆ ರೋಷಮಾಸೆ ಕಾಟ್
ಮರೆ ಘನದಂಭಮೇ ಕರಡಿ ಲೋಭಮೆ ಸೈರಿಭಮನ್ಯಪಾತಕೋ
ತ್ಕರಮೆ ವಿಹಂಗಸಂಘಮೆನಿಸಿರ್ದುದು ತದ್ವನದೊಳ್ ಮೃಡಾಜ್ಞೆಯಿಂ ೨೮

ವಚನ ಆಗಳ್ ವಿಪುಳಪುಳಿಂದವೇಷದಗಣಿತಗಣಪ್ರತಾನಮುಮಪರಿಮಿತ ನಿರ್ಜರವಿತಾನಮುಂ ಬೆನ್ನನೆಟ್ಟಿರೆ ಬಿಂಕದ ಬೆಡಂಗಿನ ಬಿಯದವೆಣ್ಗಳೊಡನೆ ಸಂಭ್ರಮಾಪಂಬರಂಮಿಗೆ ಬಂದ ಗಿರಿತನೂಜೆವೆರಸು ಕಿರಾತಮಹೇಶ್ವರು ವಿಪುಳತರೋತ್ಸಾಹನಡಿದಾವರೆಯ ಸೋಂಕಿನಿಂ ಪೊಡವಿವೆಣ್ಣೊಡಲ್ಗೆ ಪುಳಕಾಂಕುರಮನೊಡರ್ಚುತುಂ ನಡೆತಂದಿಂದ್ರಕೀಲಕುತ್ಕೀಲಕಟಕದ ಪೇರಡವಿಯಂ ಪೊಕ್ಕು ನಿಂದು ನಿರೀಕ್ಷಿಪಾಗಳ್

ಮಹಾಸ್ರಗ್ಧರೆ ಶುಕ ಭಾರದ್ವಾಜ ಶಾಂಡಿಲ್ಯ ರುರು ಕಪಿಲ ಸತ್ಕೌಶಿಕಾಗಸ್ತ್ಯಯುಕ್ತಂ
ಪ್ರಕಟೋದ್ಯತ್ತಾಪಸಾವಾಸಮಸದು ನಭಮುಂ ಋಕ್ಷರಾಜಾನ್ವಿತಂ ನಾ

ಪಾದ ಬಳೆಗಳು, ಹಸಿರುಬಣ್ಣದ ಅಂಗಿ, ಸಣ್ಣಚಿಗುರುಗಳಿಂದ ಕೂಡಿದ್ದ ಚಡ್ಡಿಗಳು—ಇವುಗಳಿಂದ ಆ ಬೇಡರು ರಂಜಿಸಿದರು. ೨೮. ಆ ಅರಣ್ಯದಲ್ಲಿ ಪರಮೇಶ್ವರನ ಇಚ್ಛೆಯಂತೆ ದೀರ್ಘದ್ವೇಷವೇ ಸಿಂಹವಾಯಿತು. ಗರ್ವವೇ ಆನೆಯಾಯಿತು. ವಿಶೇಷವಾದ ಮೋಹವೇ ಖಡ್ಗಮೃಗವಾಯಿತು. ಕಾಮವೇ ಜಿಂಕೆಯಾಯಿತು. ಅಸೂಯೆಯೇ ಹಂದಿಯಾಯಿತು. ಕೋಪವೇ ದೊಡ್ಡ ಹುಲಿಯಾಯಿತು. ದುರಾಶೆಯೇ ನರಿ ಮೊದಲಾದ ಕ್ಷುದ್ರಜಂತುಗಳಾದುವು. ದಂಭವೇ ಕರಡಿಯಾಯಿತು. ಲೋಭವೇ ಕಾಡುಕೋಣವಾಯಿತು. ಇತರ ಪಾಪರಾಶಿಗಳೇ ಪಕ್ಷಿಸಂಕುಲಗಳಾದುವು. ವಚನ : ಆಗ ಶಿವನನ್ನು ಹಿಂಬಾಲಿಸುತ್ತಾ ಬೇಡರ ವೇಷವನ್ನು ಧರಿಸಿದ್ದ ಗಣಗಳ ಗುಂಪೂ, ದೇವತೆಗಳ ಗುಂಪೂ ಅಸಂಖ್ಯಾತವಾಗಿ ಬರುತ್ತಿದ್ದಿತು. ಬೆಡಗಿನಿಂದಲೂ, ಠೀವಿಯಿಂದಲೂ ಬರುತ್ತಿದ್ದ ಬೇಡಸ್ತ್ರೀಯರೊಡನೆ, ಸಂಭ್ರಮದಿಂದಲೂ, ಉತ್ಸಾಹದಿಂದಲೂ ಬಂದು ಜತೆಗೂಡಿದ ಪಾರ್ವತಿಯೊಡಗೂಡಿ ಶಬರಶಂಕರನು ದಿಟ್ಟತನದಿಂದ ನಡೆಯುತ್ತಾ, ತನ್ನ ಪಾದ ಕಮಲಗಳ ಸ್ಪರ್ಶದಿಂದ ಭೂದೇವಿಯ ಮೈಯಲ್ಲಿ ರೋಮಾಂಚನವನ್ನುಂಟುಮಾಡುತ್ತಾ, ಇಂದ್ರಕೀಲಪರ್ವತದ ತಪ್ಪಲನ್ನು ಪ್ರವೇಶಿಸಿ, ಅಲ್ಲಿನ ಮಹಾರಣ್ಯವನ್ನು ನೋಡುತ್ತಿದ್ದನು. ೨೯. ಅರಣ್ಯವು ಶುಕ (ಗಿಳಿ ; ಶುಕಮುನಿ), ಭಾರದ್ವಾಜ (ಮುನಿ ; ಕಬ್ಬುಲಹಕ್ಕಿ), ಶಾಂಡಿಲ್ಯ (ಮುನಿ ; ಬೇಲದ ಮರ ; ಸಂಡಿಲಹಕ್ಕಿ), ರುರು (ಮುನಿ ; ಜಿಂಕೆ), ಲಸತ್‌ಕೌಶಿಕ (ವಿಶ್ವಾಮಿತ್ರಮುನಿ ; ಗೂಬೆ), ಅಗಸ್ತ್ಯ (ಮುನಿ ; ಆಗಸೆಗಿಡ) ರಿಂದ ಕೂಡಿದ್ದು ತಪೋವನದಂತೆಯೂ, ಋಕ್ಷರಾಜಾನ್ವಿತ (ಹೆಗ್ಗರಡಿಗಳು ; ನಕ್ಷತ್ರ ಮತ್ತು ಚಂದ್ರ) ವಾಗಿ ನಭೋಮಂಡಲದಂತೆಯೂ ಕಂಗೊಳಿಸುತ್ತಿದ್ದಿತು. ನಾಗ (ಆನೆ ; ಸರ್ಪ)

---

೧ ಮಾ (ಗ, ಜ, ತ)

ಗಕದಂಬಾನಂತವಿಭ್ರಾಜಿತಮಹಿಪುರಮಂ ಕರ್ಣಾಭೀಷ್ಮಾದ್ಭುತಧ್ವಾ
ನಕಠೋರಂ ಪಿಂಗಚಕ್ಷುರ್ಬಲಮನಮುಮ ಪೋಲ್ತೊಪ್ಪುತಿರ್ದತ್ತರಣ್ಯಂ ೨೯

ಮಱುಜವಣಿಗೆ ಮಾಣಿಕದ ಪಾ
ಸಱೆ ಪರಿಸದ ಮೊರಡಿ ಪರಿವ ಸಿದ್ಧರಸದ ಬಾ
ಲ್ದೊಱೆ ಬಜ್ಜರಗವಿ ಪಸಿರ್ಗ
ಲ್ಲಱೆ ಸಸಿಗಲ್ಗೋಡು ಮೆಱೆಗುಮಾ ಗಿರಿತಟದೊಳ್ ೩೦

ಇದು ದವಶಿಖಿಯಿದು ಕಿಂಶುಕ
ಮಿದು ಕಾರ್ಮುಗಿಲಿದು ತಮಾಲಮಿದು ಮದಗಜಮಿಂ
ತಿದು ಗಂಡಶೈಲಮೆಂದೆಂ
ಬುದುಃ ತಿಳಿವೊಡಶಕ್ಯಮೆನಿಪುದಾ ಪೆರ್ಗಾಡೊಳ್ ೩೧

ಮಹಾಸ್ರಗ್ಧರೆ ಬೆಟ್ಟಲಾಲಂ ಮತ್ತಿ ಬೇಲಂ ಪುಣಿಸೆಯಣಲೆ ದಿಂಡಾಲಮಂಕೋಲೆ ಬೇವಿಂ
ಗಳಮೆಕ್ಕಂ ಕಕ್ಕೆ ಮಾವಂಬಟೆ ಬಿದಿರರಿಟಾಳಂಬಟಂಳಿ ಚಂದನಂ ಗು

ಗಳ ಕದಂಬ (ಗುಂಪು ; ಕಡಹದಮರ) ಗಳಿಂದಲೂ, ಅನೇಕ (ವಿಭ್ರಾಜಿತಂ) ಹಕ್ಕಿಗಳಿಂದಲೂ ಮನೋಹರವಾಗಿ ಆದಿಶೇಷನಿಂದ ಕೂಡಿರುವ ಭೋಗವತಿಪಟ್ಟಣದಂತಿದ್ದಿತು. ಕರ್ಣಾಭೀಷ್ಮಾದ್ಭುತಧ್ವಾನ ಕಠೋರಂ-ಕಿವಿಗಳಿಗೆ ಭಯಂಕರವೂ, ಆಶ್ಚರ್ಯಕರವೂ ಆದ ಶಬ್ದಗಳಿಂದ ಉಗ್ರವಾದ ಅರಣ್ಯವು ಕರ್ಣ, ಭೀಷ್ಮರ ಅದ್ಭುತವಾದ ಸಿಂಹನಾದದಿಂದ ಘೋರವಾದ ಪಿಂಗಾಕ್ಷನಾದ ದುರ್ಯೋಧನನ ಸೈನ್ಯವನ್ನು ಹೋಲುತ್ತಿದ್ದುದು. ೩೦. ಆ ಬೆಟ್ಟದ ತಟದಲ್ಲಿ ಸಂಜೀವಿನೀವನಸ್ಪತಿಯೂ, ಪದ್ಮರಾಗಮಣಿಯ ಹಾಸುಗಲ್ಲುಗಳೂ, ಸ್ಪರ್ಶಮಣಿಯ ದಿಣ್ಣೆಯೂ, ಪ್ರವಹಿಸುವ ಸಿದ್ಧರಸದ ಹೆದ್ದೊರೆಗಳೂ, ವಜ್ರದ ಗವಿಗಳೂ, ಪಚ್ಚೆಮಣಿಯ ಬಂಡೆಗಳೂ, ಚಂದ್ರಕಾಂತಶಿಲೆಯ ಶಿಖರಗಳೂ ಹೊಳೆಯುತ್ತಿದ್ದುವು. ೩೧. ಇದು ಕಾಡ್ಗಿಚ್ಚೋ ಅಥವಾ ಹೂಬಿಟ್ಟ ಮುತ್ತುಗದ ಮರವೋ, ಇದು ಕಪ್ಪಾದ ಮೋಡವೋ ಅಥವಾ ಹೊಂಗೆಯ ಮರವೋ, ಇದು ಮತ್ತಗಜವೋ ಅಥವಾ ದೊಡ್ಡ ಕಲ್ಲುದುಂಡಿಯೋ ಎಂದು ತಿಳಿಯುವುದಕ್ಕೆ ಯಾರಿಗಾದರೂ ಆ ಕಾಡಿನಲ್ಲಿ ಸಾಧ್ಯವಾಗುತ್ತಿರಲಿಲ್ಲ. (ಅಂದರೆ ರೂಪಸಾದೃಶ್ಯದಿಂದ ಸಂದೇಹವುಂಟಾಗುತ್ತಿದ್ದಿತು). ೩೨. ಆ ಕಾಡಿನಲ್ಲೆಲ್ಲಿ ನೋಡಿದರೂ ಬೆಲ್ಲವತ್ತದ ಮರವೂ, ಆಲದ ಮರವೂ, ಮತ್ತಿ ಮರವೂ, ಹುಣಿಸೆ ಮರವೂ, ಅಣಲೆ ಅಥವಾ ಚಳ್ಳೆಮರವೂ, ದಿಂಡಿಗದ ಮರವೂ, ಅಂಕೋಲೆ ಮರವೂ, ಬೇವಿನ ಮರವೂ, ಗಾರೆ ಗಿಡವೂ, ಎಕ್ಕದ ಮರವೂ; ಕಕ್ಕೆಯ ಮರವೂ, ಮಾವಿನ ಮರವೂ, ಅಮಟೆ ಗಿಡವೂ, ಬಿದಿರ ಮೆಳೆಗಳೂ, ಅಂಟುವಾಳ

---

೧ ವಣಿ (ಯ) ೨ ಬಾನ್ (ವ) ೩ ಬುದ (ಗ, ತ) ೪ ಳಂಬಕಂ (ಅನ್ಯತ್ರ)

ಗ್ಗುಳಮೀಚಲ್ ಬನ್ನಿಗೇರ್ ಮುತ್ತುಗಮರಳಿ ಪತಂಗಂ ಪುಲಿಂಗಿಲ್೧ ತಮಾಲಂ
ಮೊಳಗಾಚಂ ನೆಲ್ಲಿ ನೇರಿಲ್ ತದುಕು ಪನೆ೨ಗಳೊಪ್ಪಿರ್ಕುಮಾ ಕಾಡೊಳೆತ್ತಂ ೩೨

ಗರುಡಂ ಕರ್ಬಕ್ಕಿ ಕಂಕಂ ಗೊರವವೊರಲೆ ಪೆರ್ಬಕ್ಕಿ ಪಾರಾವತಂ ಹಂ
ಗುರು ಟೀವಂ೩ ಟಿಟ್ಟಿಭಂ ತೊಂಡಿಗನುರುಳಿಗನಿರ್ಬಾಯನುಂ ಚಾತಕಂ ತಿ
ತ್ತಿರಿ ಚಿಂಬೋತಂ ಪಿಕಂ ಮೀಂಗುಲಿ೪ ಮರಕುಟಿಗಂ ಗೀಜಗಂ ಗುಬ್ಬಿ ಘೂಕಂ
ಸರಟಂ ಸಾಳ್ವಂ ಪಸುಂಬಂ ಪರಡೆ೫ ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ ೩೩

ಚಂಪಕ ಶರಭನಿಭಾರಿ ಸೈರಿಭವಿಭಂ ಬನವಂದಿ ತರಕ್ಷು ಖಡ್ಗಿ ಶಂ
ಬರ ಮೃಗ ಮೇಪಮೇಣಮಜಭೇದನಮೃಕ್ಷಮುಗೌಕಸಂ ಮೊಲಂ
ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ
ಕರಮೆಸೆದಿರ್ಪಿನಂ ಮೆಱೆದುದಾ ವಿಪಿನಂ ವಿಪಿನದ್ಧಕಂದರಂ ೩೪

ಜ್ಯೋತಿರ್ಲತೆಗಳ ರುಚಿಸಂ
ಜಾತಂ ಫಣಿಗಣಫಣಾಮಣಿಪ್ರಭೆ ಬಿಡದು೬
ದ್ಯೋತಿಪುದದಲ್ಲದಾ ಖ
ದ್ಯೋತಶಶಾಂಕಾಂಶು ಪುಗದು ತತ್ಕಾನನದೊಳ್ ೩೫

ಮರಗಳೂ, ಅಂಬಟೆ ಮರಗಳೂ, ಗಂಧದ ಮರಗಳೂ, ಗುಗ್ಗುಳದ ಮರವೂ, ಈಚಲ ಗಿಡಗಳೂ, ಬನ್ನಿಮರಗಳೂ, ಗೇರುಮರಗಳೂ, ಮುತ್ತುಗ, ಅರಳಿ ಮತ್ತು ಪತಂಗ ವೃಕ್ಷಗಳೂ, ಪುಲಿಂಗಿತ (?), ಹೊಂಗೆಯ ಮರವೂ, ಮೊಳಗಾಚ (?), ನೆಲ್ಲಿ ಮರವೂ, ನೇರಿಳೆ ಮರವೂ, ಆನೆಬೇಲ ಮತ್ತು ತಾಳೆಮರಗಳೂ ಕಾಣುತ್ತಿದ್ದುವು. ೩೩. ಆ ಕಾಡಿನೊಳಗೆ ಗರುಡ, ಕಬ್ಬಕ್ಕಿ, ಹದ್ದು, ಗೊರವ, ಕೂಗುವಕ್ಕಿ, ದೊಡ್ಡಹಕ್ಕಿ, ಪಾರಿವಾಳ, ಹೆಂಗುರು, ಟೀವ, ಟಿಟ್ಟಿಬ, ಗಿಳಿ, ಗಿಡುಗ, ಪರಟಿಹಕ್ಕಿ, ಸಾಳುವದಹಕ್ಕಿ, ಚಾತಕಪಕ್ಷಿ, ಕಪಿಂಜಲ ಹಕ್ಕಿ, ಕೆಂಬೂತ,ಕೋಕಿಲೆ, ಚುಕ್ಕೆಹಕ್ಕಿ, ಮರಕುಟಗ, ಗೀಜಗದಹಕ್ಕಿ, ಗುಬ್ಬಚ್ಚಿ, ಗೂಬೆ, ಸಪ್ಪಳದಹಕ್ಕಿ, (ಓತಿಕೇತ ?) ಸಾಳ್ವ, ಬಣಜಿಗಹಕ್ಕಿ, ಚಾಚಲುಹಕ್ಕಿ, ನವಿಲು, ಅರಗಿಳಿ ಮುಂತಾದ ಪಕ್ಷಿಸಂಕುಲವಿದ್ದಿತು. ೩೪. ಯಾವಾಗಲೂ ಶರಭ ಮೃಗಗಳೂ, ಸಿಂಹಗಳೂ, ಕಾಡುಕೋಣಗಳೂ, ಕಾಡಾನೆಗಳೂ, ಕಾಡುಹಂದಿಗಳೂ, ಹುಲಿಗಳೂ, ಖಡ್ಗಮೃಗಗಳೂ, ಜಿಂಕೆಗಳೂ, ಹುಲ್ಲೆಗಳೂ, ಕಾಡುಕುರಿಗಳೂ, ಚುಕ್ಕೆಯಿಲ್ಲದ ಜಿಂಕೆಗಳೂ, ತೋಳಗಳೂ, ಕರಡಿಗಳೂ, ಮಂಗಗಳೂ, ಮೊಲಗಳೂ, ಗುಳ್ಳೆನರಿಗಳೂ, ಪುಣುಗಿನ ಬೆಕ್ಕುಗಳೂ, ಮುಂಗಸಿಗಳೂ, ಮರದ ಹಾವುಗಳೂ ಕಾಡಿನೊಳಗೆ ಹಾಗೂ ಗುಹೆಗಳಲ್ಲಿ ಕಾಣುತ್ತಿದ್ದುವು. ೩೫. ಆ ಕಾಡಿನಲ್ಲಿ ಸೂರ್ಯನ ಪ್ರಕಾಶಕ್ಕಾಗಲೀ, ಚಂದ್ರನ ಬೆಳುದಿಂಗಳ ಪ್ರವೇಶಕ್ಕಾಗಲೀ ಆಸ್ಪದವಿಲ್ಲದ ರೀತಿಯಲ್ಲಿ ಮರಗಳು ದಟ್ಟವಾಗಿ

---

೧ ಗೆಲ್ (ಗ, ತ) ೨ ಪರಿ (ಜ) ೩ ಲಾವಂ (ಯ) ೪ ಮೀಂಗಿಲಿ (ಜ) ೫ ಪರಡ (ಜ) ೬ ಬಿಡಿದು (ಜ)

ವಚನ ಮತ್ತಮಲ್ಲಿ ಬಿತ್ತರಮಾದ ಸಿಂಗರಂಬೆತ್ತು ಬಿನದದಿಂ ಮನದನ್ನನಂ ಸಮ್ಮದಂ[೧] ಮಿಗೆ ನೆರ್ವಿ ಕುಳ್ಳಿರ್ದ[೨] ಶಶಿಕಾಂತದೊಡ್ಡಂಗಲ್ಲೊಳ್ ತನ್ನ ಪಡಿನೆೞಲಂ ಕಂಡು ಮೆಯ್ಯಾನರ್ದು ನಿಂದು ಸಪತ್ನಿಯೆಂದು ಬಗೆದು ಮುಳಿದು ಮುಗಿಲ್ವಟ್ಟೆಗೆ ಮಿಱಿ ಪಾಱುವ ಬಿಜ್ಜೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೊನೆ ಕೊಂಕಿದ ನಿಜಕಂಟಕದೊಳ್ ತೊಡರ್ದು ಸರ್ಜನೆ ಪಱಿದು ಸಿಲ್ಕಿ ಪಸರಿಸಿ ಪವನನಲೆಪದಿನೊಲೆದು ಗಿರಿವರನ ನೆಗೞ್ತೆಗೆ ನೇಮಿಸಿದ ಕೇತುಪಟದಂತೆಸೆಯೆ ತದ್ಧ್ವಜ ದೀರ್ಘದಂಡಾಕಾರಮಂ ತಳೆದು ಬಾಂದಳಮಂ ಮುಟ್ಟಿ ನಿಮಿರ್ದು ನಿಂದ ವೇಣುಕಾಂಡದಿಂ; ಕರಿ ಮುಱಿದ ಪೆರ್ಗೊಂಬಿನಿಱಿಂಬಿನೊಱೆತುಗುವ ಪಾಲ ಪಗಿನದೊಳ್ ಮಿಗೆ ನೆಗೆವ ಗಗನಚರಿಯ ನಿಡುಜಡೆ ತೊಡಂಕಿ ಜಗಿಲ್ತು ತೆಗೆಯಲ್ ಬಾರದಿರೆ ಪಾಱುಗೆಟ್ಟು ಬಿಡಿಸಲೊಡರ್ಚುವ ತನ್ನಿತಂಬಿನಿಗೆ ಕುಳ್ಳಿರಲ್ ಕೊಂಬನಿಂಬುಗೊಟ್ಟು ಸೆಳೆಮಿಂಚಂ ತಳೆದ ಕಾರ್ಮುಗಿಲ ಪಿರಿಯ ಸಿರಿಯನೊಳಕೊಂಡು ಕೆಲದೊಳ್ ಕಣ್ಗೊಳಿಪ ತರುಣತಮಾಲದಿಂ; ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸಸಂಗೀತಮಂ ಕೇಳ್ದು ಗಡಣಂಗೊಂಡು ಪೆಡೆಯೆತ್ತಿ ನಲಿವ

ಬೆಳೆದಿದ್ದುವು. ಅಲ್ಲಿದ್ದ ಬೆಳಕೆಂದರೆ, ಕೇವಲ ಜ್ಯೋತಿರ್ಲತೆಗಳು ಚೆಲ್ಲುತ್ತಿದ್ದ ಬೆಳಕು ಮತ್ತು ಹಾವುಗಳ ಹೆಡೆಯಲ್ಲಿ ಬೆಳಗುತ್ತಿದ್ದ ಫಣಾಮಣಿಗಳ ಕಾಂತಿಮಾತ್ರವೇ. ವಚನ : ಆ ವನಪ್ರದೇಶದಲ್ಲಿ ಒಬ್ಬ ವಿದ್ಯಾಧರಿಯು ಬಹಳವಾಗಿ ಶೃಂಗರಿಸಿಕೊಂಡು ವಿನೋದವಾಗಿ ತನ್ನ ಪ್ರಿಯನನ್ನು ಉತ್ಸಾಹದೊಡನೆ ಸೇರಿ ವಿಶ್ವಾಸದಿಂದ ಚಂದ್ರಕಾಂತಶಿಲೆಯ ಜಗಲಿಯ ಮೇಲೆ ಕುಳಿತಿದ್ದಳು. ಅವಳು ಅಲ್ಲಿನ ನಿಲುವುಗಲ್ಲಿನಲ್ಲಿ ಪ್ರತಿಫಲಿಸಿದ ತನ್ನ ನೆಳಲನ್ನು ಕಂಡು, ಹತ್ತಿರಹೋಗಿ ನಿಂತು, ನೋಡಿ, ಪ್ರತಿಬಿಂಬವನ್ನು ಸವತಿಯೆಂದು ಭಾವಿಸಿ, ಕೋಪಗೊಂಡು ಮೇಘಮಾರ್ಗದಲ್ಲಿ ಸರ್ರನೆ ನೆಗೆದಳು. ಆಗ ಅವಳು ಬಿಗಿಯಾಗಿ ಉಟ್ಟಿದ್ದ ಸರಿಗೆಯ ಪೀತಾಂಬರದ ಸೆರಗು ಚೂಪಾಗಿ, ಬಾಗಿದ್ದ ಗರಿಗಳಲ್ಲಿ ಸಿಕ್ಕಿಕೊಂಡು, ಬಿಚ್ಚಿಕೊಂಡು ಗಾಳಿಯು ಬೀಸಿದಾಗ ಅಲೆದಾಡುತ್ತಿದ್ದಿತು. ಅದು ಇಂದ್ರಕೀಲಪರ್ವತದ ಕೀರ್ತಿಗೆತ್ತಿದ ಧ್ವಜಪಟದಂತೆಯೂ, ಅಂತರಿಕ್ಷದ ಎತ್ತರಕ್ಕೆ ಬೆಳೆದು ನಿಂತ ಬಿದಿರ ಮೆಳೆಗಳು ಧ್ವಜದ ಸ್ತಂಭಗಳಂತೆಯೂ ಕಂಗೊಳಿಸುತ್ತಿದ್ದುವು. ಹೊಂಗೆಯ ಮರದ ಒಂದು ದೊಡ್ಡಕೊಂಬೆಯನ್ನು ಆನೆಯು ಮುರಿದು, ಅದರ ಸಂದಿಯಲ್ಲಿ ಹಾಲು ಜಿನುಗಿ ಅಂಟಾಗಿದ್ದಿತು. ಹಾರುತ್ತಲಿದ್ದ ಖೇಚರಿಯ ನೀಳವಾದ ಜಡೆಯು ಆ ಅಂಟಿನಲ್ಲಿ ಸಿಕ್ಕಿಕೊಂಡು, ಅವಳು ಹಾರಲಾಗದೆ, ಜಡೆಯನ್ನು ಸಿಕ್ಕಿನಿಂದ ಬಿಡಿಸಿಕೊಳ್ಳಲು ಯತ್ನಿಸಿ, ಹೊಂಗೆಯ ಮತ್ತೊಂದು ಕೊಂಬೆಯ ಮೇಲೆ ಕುಳಿತಳು. ಅದು ಮೇಘಚ್ಛಾಯೆಯಂತಿದ್ದ ಹೊಂಗೆಯ ಮರದ ಮೇಲೆ, ಖೇಚರಿಯು ಮಿಂಚಿನಂತೆ ನೆಲೆಸಿದಂತಿದ್ದಿತು. ಅಲ್ಲಿಯ ಶ್ರೀಗಂಧದ ಮರಗಳಿಗೆ ಸುತ್ತಿಕೊಂಡಿದ್ದ ಹಾವುಗಳು

೧ ಸಂದು (ಚ, ತ) ೨ ಕುಳ್ಳಿರ್ದು (ತ)

ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನುಗುಗಿವಡೆದ ಪೆಡೆವಣಿದುಱುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಿಂ; ಶಶಿಶಿಲಾಸದನದೊಳವರಿಯ ಪೂವಸೆರಿಯೊಳ್ ಸವಿಸುಸಿಲೆಸಗುವ ಖಚರದಂಪತಿಗಳ ಗಳರವದ ಕಳಕಳಮಂ ಕೇಳ್ದು ಗಳಿಲನೆ ತಲೆಯೆತ್ತಿ ನಲಿದುಲಿವಳ ವಿಗಟಿವೆಳಸುವ ಪರಿವಿಡಿಯ ಪಾರಿವಂಗಳಂ ತಳೆದುಸಿ ಮದನಾಗಮದ ಮಂತಣಸಾಲೆಯಂತೆ ಮನೋಜ್ಞಮಾದ ಕುರವಕಾನೋಕಹದಿಂ; ಮನಃಪ್ರಿಯನೊಡನೆ ಮನಂಬಂದ ಬಂಧದಿಂ ತನು ಕರಗಿ ತನಿಸುಸಿಲ ಸೊಗದ ಸೊಗಸನನುಭವಿಸಿ ಶಶಿಕರು ಸೊಂಕಿದ ಸಸಿಗಲ್ಲ ಪುತ್ತಳಿಯಂತೆ ಬೆಮರ್ತು ಸರಸುದತಿಯೊರಸಿದ ಬೆಮರ ಪರಿಮಳಮಂ ತಳೆದು ಪರಿಸರದ ಸುರಯಿಯಲರ್ಗಳನುಜಿದು ಪರಿಮರಿಳಿಗೊಂಡೆರಗಿದ ಪಜಿಮೆಪಱಿದುಱುಗಲಿಂ ತಳ್ತಿಸಿ ನಿಱಿದಳಿರನಾಳ್ದ ಕೊಂಬುಗಳಿಂ ಪಣ್ತ ಜಂಬೂಕುಜದಂತೆ ಕಮನೀಯಮಾದತೋಕದ್ರುಮದಿಂ; ರತಿಮದನರನೋಜೆಯಿಂ ಪೂಜಿಸಲ್ಕೆ ಪೂದಿಜಿಯಲೇಱಿದೇಱುಂಜವ್ವನದ ಸೊಂಪೆಸೆವ ಕಿಂಪುರುಷನಿತಂಬಿನಿಯ ಸಡಿಲ್ದೆಟಿಲ್ವ ಕಡುನಿಡಿದಾದ ಕೇಶಪಾಶದಿಂ ತೊಡರ್ದು ತಳಿರ್ತ ತಮಾಲಲತೆ ತಳ್ತಂತೆ ಪೊಪನಾಳ್ದ ಚಂಪಕಕುಜಂಗಳಿಂ; ಕಾದಲನಗಲ್ಕೆಗಲ್ಕೆಯುರಿಪಂ ಸೈರಿಸಲಾಜದೆ ಹರಣಂಗಳೆಯಲುಜ್ಜುಗಿಸಿ ತುಱುಗಿ ತೀವಿದ ಕಿಂಬೊಗರನಾಳ್ದ ಪೂದೊಡಂಬೆಯ ಮೊಗ್ಗರಮಂ ಕಂಡು

ಸಮೀಪದಲ್ಲಿಯೆ ಕಿನ್ನರಸ್ತ್ರೀಯು ಕಿನ್ನರಿಯನ್ನು ಶ್ರುತಿಮಾಡಿ ಮಧುರನಾದದಿಂದ ಹಾಡುತ್ತಲಿದ್ದುದನ್ನು ಕೇಳಿ, ಆನಂದಿಸಿ, ಹೆಡೆಬಿಚ್ಚಿ ಕೇಳುತ್ತಿದ್ದುವು. ಅವುಗಳ ಫಣಾಮಣಿಗಳು ರೆಂಬೆರೆಂಬೆಗಳಲ್ಲಿ ಬೆಳಗುತ್ತ ಶ್ರೀಗಂಧಮರಗಳು ಮಾಣಿಕ್ಯದ ಮರವೋ ಎನ್ನುವಂತೆ ಶೋಭಿಸುತ್ತಿದ್ದುವು. ಚಂದ್ರಕಾಂತಶಿಲಾಮಂದಿರಗಳಲ್ಲಿ ಹೂವಿನ ಹಾಸಿಗೆಯಲ್ಲಿ ರತಿಸುಖದಲ್ಲಿ ಮಗ್ನರಾದ ಖೇಚರದಂಪತಿಗಳ ಕಂಠಧ್ವನಿಯ ಕಳಕಳ ಶಬ್ದವನ್ನು ಕೇಳಿ ಹರ್ಷಿಸಿ, ಸಾಲಾಗಿ ತಲೆಯೆತ್ತಿ ಪಾರಿವಾಳದ ಪಕ್ಷಿಗಳು ಗೋರಂಟಿಗಿಡದ ಮೇಲೆ ಕುಳಿತಿದ್ದರೆ, ಆ ಮರವು ಕಾಮಶಾಸ್ತ್ರ ವಿಚಾರವನ್ನು ಮಾಡುವ ಮಂತ್ರಾಲೋಚನಾ ಸಭೆಯಂತಿದ್ದಿತು. ಪ್ರಿಯನೊಡನೆ ಬೇಕಾದ ರೀತಿಯಲ್ಲಿ ರತಿಸುಖವನ್ನನುಭವಿಸಿ, ಬೆಳುದಿಂಗಳಿಗೆ ಕರಗುವ ಚಂದ್ರಕಾಂತಶಿಲೆಯ ಬೊಂಬೆಯಂತೆ ಕರಗಿ, ಕೃಶಳಾದ ದೇವಸ್ತ್ರೀ ತನ್ನ ಮೈಬೆವರನ್ನಾರಿಸುತ್ತಿದ್ದಳು. ಅದರ ಪರಿಮಳವನ್ನು ಆಸ್ವಾದಿಸಲು, ಸುರಗಿ ಹೂಗಳನ್ನು ಬಿಟ್ಟು, ಹೆಣ್ಣುದುಂಬಿಗಳು ಗುಂಪು ಗುಂಪಾಗಿ ಬಂದು, ಅಶೋಕವೃಕ್ಷವನ್ನು ಮುತ್ತುತ್ತಿದ್ದುವು. ಆಗ ಅಶೋಕವೃಕ್ಷವು ಹಣ್ಣುಗಳಿಂದ ತುಂಬಿದ್ದ ನೇರಿಳಿ ಮರದಂತೆ ಕಾಣುತ್ತಿದ್ದಿತು. ರತಿಮನ್ಮಥರನ್ನು ಕ್ರಮವಾದ ರೀತಿಯಲ್ಲಿ ಪೂಜಿಸುವುದಕ್ಕಾಗಿ, ಹೂಗಳನ್ನು ಕೊಯ್ಯಲು ಒಬ್ಬ ಕಿಂಪುರುಷಸ್ತ್ರೀಯು ಸಂಪಿಗೆಯ ಮರವನ್ನು ಏರಿದಾಗ, ಅವಳ ನೀಳವಾದ ಕೇಶರಾಶಿಯು ಸಡಿಲವಾಗಿ ಜೋಲುತ್ತಾ, ಹರಡಿಕೊಂಡಿರಲು, ಆ ಸಂಪಗೆಯ ಮರದ ಚಿಗುರೆಲೆಗಳು ಕಪ್ಪಾದ ಕಾಂತಿಯಿಂದ ಕೂಡಿದ್ದು,

---

೧ ಮಿಱುಗು (ಚ) ೨ ಪೊಸವಸೆ (ಯ) ೩ ತಳೆದ (ಚ) ೪ ಪರಿಮಳಂ (ಚ) ೫ ತಳೆದು (ಚ) ೬ ನಿಡು (ಯ)

ದವಶಿಖಿಯ ಕೆಂಪದೊಟ್ಟಿಲ್‌ಗೆತ್ತು ಪೊಕ್ಕ ಸಿದ್ಧಸೀಮಂತಿನಿಯನೊಳಕೊಂಡು ಮದನಪ್ರತಾಪ ಲಕ್ಷ್ಮಿಯುಂ ಪೊತ್ತಂತೆ ಚಿತ್ರಂಗೊಳ್ವ ಕಿಂಶುಕನಿಕುಂಜದಿಂ; ಕಣ್ಬೊಲಂದಪ್ಪಿ ಕಡೆಸರಿದು ತನ್ನನಱಸಿ ತೊಳಲ್ವ ಕಾದಲನಂ ಕಾದಲ್ಮೆಯಿಂ ಕಾಪಲೆಳಸಿ ಘೞಿಲನೆ ಬೀೞಲ್ವಿಡಿದಡರ್ದು ನಿಡುಗೊಂಬಿನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ; ಬಾನ್ಬಟ್ಟೆಯೊಳ್ ಬಿಱುಬಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬೞಲ್ದು ಬರ್ಪ ಗರುಡದಂಪತಿಗೆ ತಂಪು ಪರೆಪಲೆಂದು ವಿಪಿನಲಕ್ಷ್ಮಿ ವಿಲಾಸದಿಂ ಬೀಸಲ್ ನಿಡುದೋಳ್ಗಳಿಂ ನೆಗಪಿ ಪಿಡಿದ ವ್ಯಜನಗಿವೆನಿಸಿ ರಂಜಿಪ ಪರ್ಣಪಾಳಿಯಿನೇೞ್ಗೆವೆತ್ತ ತಾೞಭೂರುಹದಿಂ; ಪೆಂಪುವೆತ್ತಪರಿಮಿತ ಫಲಪರ್ಣಪುಷ್ಪಗುಚ್ಛಂಗಳಿನತಿನಿಬಿಡತೆಯನಪ್ಪುಕೆಯ್ದು ರವಿಶಶಿಕರಂಗಳೆಡೆಯಾಟಕ್ಕೆ ತೆಱಪುಗುಡದೆ ತಮದ ತವರ್ಮನೆಯೆನಿಸಿ ವಿಚಿತ್ರತರ ಖಗಮೃಗಂಗಳ್ಗೆ ವಿಹರಣಸ್ಥಲಮಾಗಿ ಮಹಾಗಹನಮೊಪ್ಪಿರ್ದುದಲ್ಲಿ

ಅದು ಹೊಂಗೆಯಮರವೆನ್ನುವ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಮುಳ್ಳು ಮುತ್ತುಗದ ಮರದ ಪೊದೆಗಳು ವಿಪುಲವಾದ ಕೆಂಪುಹೂಗಳಿಂದ ಕೂಡಿದ್ದವು. ಪ್ರಣಯ ಕಲಹದಲ್ಲಿ ಪ್ರಿಯನನ್ನು ಕೋಪದಿಂದ ಅಗಲಿ, ಅನಂತರ ವಿರಹದಿಂದ ಬೆಂದ ಸಿದ್ಧ ಸೀಮಂತಿನಿಯೊಬ್ಬಳು, ಪ್ರಾಣಗಳನ್ನು ಕಳೆದುಕೊಳ್ಳಲೆಂದು ಅಗ್ನಿಪ್ರವೇಶಮಾಡಲಿಚ್ಛಿಸಿ, ಕೆಂಪುಹೂಗಳಿಂದ ನಿಬಿಡವಾಗಿದ್ದ ಮುತ್ತುಗದ ಮರದ ಪೊದೆಯನ್ನೇ ಕಾಳ್ಗಿಚ್ಚೆಂದು ಭ್ರಾಂತಿಯಿಂದ ಪ್ರವೇಶಿಸಿದಳು. ಆಗ ಸಿದ್ಧಾಂಗನೆಯೊಡನೆ ಕೂಡಿದ್ದ ಮುತ್ತುಗದ ಮರವು ಕಾಮನ ಪ್ರತಾಪಲಕ್ಷ್ಮಿಯನ್ನು ಒಳಗೊಂಡಿರುವಂತೆ ಮನೋಹರವಾಗಿ ಕಾಣಿಸಿತು. ಗಂಧರ್ವರಮಣಿಯು ತನ್ನ ಪ್ರಿಯನನ್ನು ಕಣ್ಣು ತಪ್ಪಿಸಿ, ಪಕ್ಕಕ್ಕೆ ಸರಿದು, ತನ್ನನ್ನು ಹುಡುಕುವ ಪ್ರಿಯನನ್ನು ಕಾಡುವ ಉದ್ದೇಶದಿಂದ, ಆಲದಮರದ ಬಿಳಲನ್ನು ಹಿಡಿದು, ಮೇಲಕ್ಕೆ ಹತ್ತಿಹೋಗಿ, ಎತ್ತರವಾಗಿದ್ದ ಕೊಂಬೆಗಳಲ್ಲಿ ದಟ್ಟವಾಗಿ ಬೆಳೆದಿದ್ದ ಎಲೆಗಳ ಮರೆಯಲ್ಲಿ ಅವಿತುಕೊಂಡಳು. ಆಗ ಆ ಆಲದಮರವು ದೊಡ್ಡ ಯಕ್ಷಿಣಿಯನ್ನು ಹೊತ್ತಿದ್ದಂತೆ ಕಾಣುತ್ತಿದ್ದಿತು. ಆಕಾಶಮಾರ್ಗದಲ್ಲಿ ಹಾರುವಾಗ ಉಗ್ರವಾದ ಬಿಸಲು ಬೆನ್ನನ್ನು ಸುಡಲು, ಸೊರಗಿ, ಶಕ್ತಿಗುಂದಿ ಬರುವ ಗರುಡ ದಂಪತಿಗಳಿಗೆ ತಂಪಾಗಿರಿಸಲೆಂದು ವನಲಕ್ಷ್ಮಿಯು ಒಯ್ಯಾರದಿಂದ ತನ್ನ ನೀಳವಾದ ತೋಳುಗಳನ್ನೆತ್ತಿ, ಬೀಸಣಿಗೆಯಿಂದ ಗಾಳಿಯಿಕ್ಕುತ್ತಿರುವಂತೆ, ಗರಿಗಳಿಂದ ತುಂಬಿ ತೊನೆಯುತ್ತಿದ್ದ ತಾಳೆ ಮರಗಳು ಶೋಭಿಸುತ್ತಿದ್ದುವು. ಹಣ್ಣುಗಳೂ, ಎಲೆಗಳೂ, ಹೂಗಳೂ ಜಿಗಿಯುತ್ತಿದ್ದ, ಮರಗಳು ದಟ್ಟವಾಗಿ ಬೆಳೆದು, ಸೂರ್ಯ ಚಂದ್ರರ ಕಿರಣಗಳು ಪ್ರವೇಶಿಸಲು ಅವಕಾಶವನ್ನು ಕೊಡದೆ, ಕತ್ತಲಿನ ತವರ್ಮನೆಯೆನ್ನುವಂತೆ, ವಿಚಿತ್ರವಾದ ಮೃಗ, ಪಕ್ಷಿಗಳ ವಿಹಾರ

---

೧ ಬಿಜ್ಜಣ (ಯ) ೨ ಸ್ಥಾನ (ಕ)

ಮತ್ತೇಭ ಮೊಟಗಂ ಬೃಂಹಿತಮೆಂದು ತಳ್ತ ಕುಡಿಮಿಂಚಂ ಕೋಡಿದೆಂದಣ್ಮಿ ಪೆರ್
ಮೞೆಯಂ ಸೋರ್ವ ಮದಾಂಬುವೆಂದು ಬಗೆದಂದೇಘೋದಮಂ ದಂತಿಯೆಂ
ದಳಿಪಿಂ ಪಾಯ್ದು ವಿಲಂಘಿಸುತ್ತುಗರ್ಗಳಿಂ ಪೊಯ್ದತ್ತದಂ ಮೌಕ್ತಿಕಾ
ವಳಿ ಝಲ್ಲೆಂದುಗೆ ಭೀಮಗರ್ಜನಮಿಳತ್ಕಂಠೋಗ್ರಕಂಠೀರವಂ ೩೬

ನಿಡುಗಟ್ಟಿಲೆಯ ಮೊಸೆಯುರ್ಚಿದ
ಜಡಧರಮೆಸೆದುದು ನಗಾಹಿತಪ್ರಣಿಧಿಯಿದೆಂ
ದಡರ್ದತಿರೋಷದಿನಾ ಗಿರಿ
ತೊಡರ್ಚಿ ಪಿಡಿದುಗ್ರಶೂಲದೊಳ್ ತೋಱುವವೋಲ್ ೩೭

ಒರಸೆ ಕರಿ[1] ಕಟದ ಮದದಿಂ
ಪೊರೆದುರುಚಂದನದೊಳೆಱಗಿ ನಿಂದಳಿಕುಳಮಂ
ಹರಿನೀಲಮೆಂದು ತಿಱೆಯಲ್
ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ ೩೮

ಜರದಜಗರಮಂ ಕರದಿಂ
ಕರಿ ಪಿಡಿದಿಡೆ ನಭದೊಳದು ವಿಧುಂತುದನೆಂತಂಗಿ

ಸ್ಥಾನವಾಗಿ ಆ ಮಹಾರಣ್ಯವು ಭೀಕರವಾಗಿದ್ದಿತು. ೩೬. ಗಗನದೆತ್ತರ ಹಬ್ಬಿದ ಇಂದ್ರಕೀಲಪರ್ವತದ ಶಿಖರಗಳಲ್ಲಿದ್ದ ಸಿಂಹವು ಗರ್ಜಿಸುತ್ತಾ, ಸಮೀಪದಲ್ಲಿಯೇ ಚಲಿಸುತ್ತಿದ್ದ ಮೋಡವನ್ನು ಆನೆಯೆಂಬ ಭ್ರಾಂತಿಯಿಂದ ತನ್ನ ಪಂಜದಿಂದ ಅಪ್ಪಳಿಸಿತು. ಆಗ ಮೋಡವು ಛಿದ್ರವಾಗಿ ಹನಿಗಳುದುರಿದುವು. ಭ್ರಾಂತಿಗೆ ಕಾರಣ-ಗುಡುಗು ಆನೆಯ ಘೀಂಕೃತಿಯಂತಿದ್ದಿತು. ಅಂಚಿನಲ್ಲಿ ಹೊಳೆವ ಮಿಂಚು ದಂತದಂತಿದ್ದಿತು. ಸುರಿಯುತ್ತಿದ್ದ ಮಳೆಯು ಮದಧಾರೆಯಂತಿದ್ದಿತು. ಮೋಡವು ಆನೆಯಂತಿದ್ದಿತು. ೩೭. ಪರ್ವತದ ಮೇಲೆ, ಎತ್ತರವಾಗಿ ಬೆಳೆದಿದ್ದ ಬಿದಿರಿನ ಗಳುಗಳಿಗೆ ಅಂತರಿಕ್ಷದಲ್ಲಿ ಚಲಿಸುತ್ತಿದ್ದ ಮೇಘಗಳು ಸಿಕ್ಕಿಕೊಳ್ಳುತ್ತಿದ್ದವು. ಆಗ ಪರ್ವತಗಳಿಗೆ ಶತ್ರುವಾದ ಇಂದ್ರನ ಕಡೆಯ ಗೂಢಚಾರರೇ ಈ ಮೋಡಗಳೆಂದು ಭಾವಿಸಿ, ಇಂದ್ರಕೀಲಪರ್ವತವು ಅವನ್ನು ಶೂಲಕ್ಕೇರಿಸುವಂತೆ ಕಾಣುತ್ತಿದ್ದಿತು ! ೩೮. ಆನೆಯು ತನ್ನ ಹಣೆಯನ್ನು ಗಂಧದ ಮರಕ್ಕೆ ತಿಕ್ಕಿತು. ಆಗ ಆನೆಯ ಮದೋದಕವು ಮರಕ್ಕೆ ಮೆತ್ತಿಕೊಂಡು, ಅದರ ಪರಿಮಳಕ್ಕಾಗಿ ದುಂಬಿಗಳು ಎರಗಿದವು. ಆ ದುಂಬಿಗಳನ್ನು ನೋಡಿದ ದೇವಸ್ತ್ರೀಯೊಬ್ಬಳು, ಇವು ಇಂದ್ರನೀಲಮಣಿಗಳೆಂದು ಭಾವಿಸಿ, ಅವನ್ನು ಆರಿಸಿಕೊಳ್ಳಲುದ್ಯುಕ್ತಳಾದಳು. ಅದನ್ನು ನೋಡಿದ ಪ್ರೌಢೆಯಾದ ಸಖಿಯು ನಕ್ಕಳು. ೩೯. ಪರ್ವತದ ಮೇಲೆ ಒಂದು ಆನೆಯು ಮುದಿಯಾದ ಅಜಗರ ಸರ್ಪವನ್ನು ಸೊಂಡಿಲಿನಲ್ಲಿ ಹಿಡಿದು ಮೇಲಕ್ಕೆಸೆಯಿತು.

---

೧ ನೆಂಬಂ (ಯ)

ತಿರೆ ಪಾಯ್ದುದು ಮುನ್ನುಂಗಿದ
ಮರೆಯುಡಗುಚ್ಚಳಿಸೆ ಮುಖದಿನಳಱಿ[1] ದಿನೇಶಂ ೩೯

ಹರಿ ಬೆಸಸಿದೊಡಾರ್ದೆಱಗಿ
ದರ್ರಿಜಳಧರಭಟನ ಮಿಂಚಿನಿಪ್ಪಸಿಲತೆಯುಂ
ಗಿರಿ ಸೆಳೆದೊಳಗಿಟ್ಟಂತಿರೆ
ಕರವೋಪಧಿಗಲತೆಯುದೇಂ ಮನಂಗೊಳಿಸಿದುದೋ ೪೦

ಚಂಪಕ ಪದಗೊಳಿಸುತ್ತೆ ದಾನರಸದಿಂ ರಸೆಯುಂ ಮದಭೃಂಗಮಾಲೆಯುಂ
ಕೆದಱುತೆ ಕರ್ಣವಾಳ[2]ದೆಲರಿಂ ಬಿಸಕಾಂಡಮಿದೆಂದು ಚಂದ್ರಕಾಂ
ತದೊಳಿದಿರಲ್ಲಿ ಮಾರ್ಪೊಳೆವ ತನ್ನಯ ಕೊಂಬನೊಱಲ್ದು ನೋಡುತುಂ
ಮೃದುಗತಿಯೊಪ್ಪೆ ತೂಗಿ. ತೊನೆದಾಡುತೆ ಬಂದುದದೊಂದು ಸಿಂಧುರಂ ೪೧

ಕೊಳದೊಳೆ ಕಿೞ್ತು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ಪಾ
ಯ್ವಳಿಗಳನಗ್ರಪಲ್ಲವದೆ ಸೋವುತೆ ಪಂಕಜರೇಣು ತಳ್ತ ಮು
ಱುಳರದನಂ ತೆಱಂಬೊಳೆಯೆ ಶೈವಲವಲ್ಲರಿ ಪತ್ತಿ ವಕ್ಷದೊಳ್
ಮಿಳಿರೆ ಕರೇಣುವಿರ್ದೆಡೆಗದೇಂ ತಳರ್ದತ್ತೊ ಮದಾಂಧಸಿಂಧುರಂ ೪೨

ಆ ಹಾವು ಸಮೀಪದಲ್ಲಿಯೇ ಬೆಳಗುತ್ತಿದ್ದ ಸೂರ್ಯಬಿಂಬದ ಪಕ್ಕದಲ್ಲಿಯೇ ತೂರಿ ಹೋಯಿತು. ಆಗ ಹೆಬ್ಬಾವು ಮೊದಲು ನುಂಗಿದ್ದ ಜಿಂಕೆಯ ಮಾಂಸವನ್ನು ಕಕ್ಕಲು ಸೂರ್ಯನು ಹೆದರಿದನು. ೪೦. ಪರ್ವತದ ಮೇಲೆ ಮಹಾಪ್ರಕಾಶದಿಂದ ಬೆಳಗುತ್ತಿದ್ದ ಜ್ಯೋತಿರ್ಲತೆಗಳಿದ್ದುವು. ಅವು ಶತ್ರುವಾದ ಇಂದ್ರನ ಅಪ್ಪಣೆಯ ಮೇರೆಗೆ ಆರ್ಭಟಿಸುತ್ತಾ, ತನ್ನ ಮೇಲೆರಗಿದ ಮೇಘವೆಂಬ ವೀರನ ಕೈಯಲ್ಲಿದ್ದ ಮಿಂಚೆಂಬ ಕತ್ತಿಯನ್ನು ಕಿತ್ತು ಸೆಳೆದು ಪರ್ವತವು ತನ್ನಲ್ಲಿರಿಸಿಕೊಂಡಂತೆ ಕಾಣುತ್ತಿದ್ದಿತು. ೪೧. ತನ್ನ ಸ್ರವಿಸುತ್ತಿರುವ ಮದೋದಕಧಾರೆಯಿಂದ ಭೂಮಿಯನ್ನು ನೆನೆಸಿ ಮೆತ್ತಗೆ ಮಾಡುತ್ತ, ಬೀಸಣಿಗೆಯಂತಿದ್ದ ಕಿವಿಗಳನ್ನು ಚಲಿಸುತ್ತಾ, ಎದ್ದ ಗಾಳಿಯಿಂದ ದುಂಬಿಗಳನ್ನು ಎಲ್ಲೆಡೆಗೂ ಓಡಿಸುತ್ತ, ಎದುರಿಗೆ ಚಂದ್ರಕಾಂತಶಿಲೆಯಲ್ಲಿ ಪ್ರತಿಬಿಂಬಿತವಾದ ತನ್ನ ದಂತಗಳನ್ನು ಕಮಲದ ದಂಟುಗಳೆಂದು ಭಾವಿಸಿ, ಬೃಂಹಿತಧ್ವನಿಗೂಡಿ ನೋಡುತ್ತ, ಮಂದಗಮನದಿಂದ ತೂಗಾಡುತ್ತ, ಜಗ್ಗುತ್ತಾ ಒಂದು ಆನೆಯು ಬಂದಿತು. ೪೨. ಕೊಳದಲ್ಲಿನ ಕಮಲಗಳನ್ನು ಕಿತ್ತು, ಗಂಡಸ್ಥಲದ ಮಧ್ಯದಲ್ಲಿ ಸುರಿದುಕೊಂಡು, ಎರಗಿ ಬೀಳುತ್ತಲಿದ್ದ ದುಂಬಿಗಳ ಗುಂಪನ್ನು ಚಿಗುರು ಕೊನೆಗಳಿಂದ ಓಡಿಸುತ್ತಾ, ಪದ್ಮಪರಾಗವು ಮುಸುಕಿ ದಂತಗಳು ಒಂದು ರೀತಿಯಲ್ಲಿ ಹೊಳೆಯುತ್ತಿರಲು, ಪಾಚಿಗಳು ಎದೆಗೆ ಮೆತ್ತಿಕೊಂಡು ಜೋಲುತ್ತಿರಲು, ಮದದಿಂದ ಕುರುಡಾದ ಒಂದು ಆನೆಯು ಹೆಣ್ಣಾನೆಯಿದ್ದೆಡೆಗೆ

---

೧ ಕರಮೆಸೆದೀ (ಚ) ೨ ಕರ್ಣತಾಳ (ಯ)

ವಚನ ಮತ್ತಮಲ್ಲಿ

ಪಿಡಿಯ ಮೊಲೆಯುಂಡು ತಣಿಯುತೆ
ಕಡೆವಾಯೊಳ್ ಪಾಲಧಾರೆ ಮೊಳೆವಲ್ಗಳವೋಲ್
ಬಿಡದೆಸೆಯೆ ಮುದ್ದುವೀಱು
ತ್ತಡಿಯಿಡುವುವು ಪಲ್ಲಮೞಿಯ ಮಱಿಗಳ್ ವನದೊಳ್ ೪೩

ಎರಡುಂ ಕಡೆವಾಯೊಳ್ ತ
ಳ್ತಿರೆ ಬಿಸಕಾಂಡಂಗಳೆರಡು ರದನದ ಬೞಿ ಸಂ
ದುರುಜಳಫೇನವಳಕ್ಷಂ
ಕರಮೆಸೆದುದದೊಂದು ದಂತಿ ಚೌದಂತನವೋಲ್ ೪೪

ವಚನ ಇಂತು ಸಂತತವೊಪ್ಪುವ ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡ ಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ನೀದು ನೆರೆದು ಪರೆದು

ನೊರೆ ತುಪ್ಪುೞ್ ಕೊಳಗು ಕೆಸಱ್
ನೊರಜುಗಳುಗುರಡರ್ದ ಸೊವಡು ಪಜ್ಜೆಗಳಂ ಪಾ
ಯ್ದಿರದಱಸಿ ನೋಟ್ಟಿ ಬಿಯದರ್
ತ್ವರಿತದಿನಲ್ಲಲ್ಲಿ ಪರಿದರಾ ಪೆರ್ಗಾಡೊಳ್ ೪೫

ಹೊರಟಿತು. ವಚನ : ಮತ್ತೆ ಆ ಪ್ರದೇಶದಲ್ಲಿ ೪೩. ಇನ್ನೂ ಹಲ್ಲುಗಳು ಮೊಳೆಯದಿದ್ದ ಆನೆಯ ಮರಿಗಳು ಹೆಣ್ಣಾನೆಯ ಮೊಲೆಯನ್ನು ಕುಡಿದು ತೃಪ್ತಿಪಟ್ಟು, ಕಟವಾಯಿಯಲ್ಲಿ ಹಾಲು ಸೋರುತ್ತಿರಲು ಆ ವನದಲ್ಲಿ ನಡೆದಾಡುತ್ತಿದ್ದುವು. ಸೋರುತ್ತಲಿದ್ದ ಹಾಲ ಧಾರೆಯು ಮೊಳೆಯುತ್ತಲಿದ್ದ ದಂತಗಳಂತೆ ತೋರುತ್ತಿದ್ದಿತು. ೪೪. ಆನೆಯು ಕೊಳ ದಲ್ಲಿ ತಾವರೆಯ ದಂಟನ್ನು ಕಿತ್ತು ತಿಂದು, ಮೇಲೆ ಬರುವಾಗ, ತಾವರೆ ದಂಟುಗಳೆರಡು ದಂತದ ಮಗ್ಗುಲನ್ನು ಸೇರಿದ್ದು, ನಾಲ್ಕು ದಂತಗಳಿರುವಂತೆ ಕಾಣುತ್ತಿರಲು, ಮೈಗೆಲ್ಲಾ ನೊರೆಯನ್ನು ಮೆತ್ತಿಕೊಂಡು ಬೆಳ್ಳಗಿದ್ದ ಆನೆಯು ಐರಾವತದಂತೆ ಕಾಣುತ್ತಿದ್ದಿತು. ವಚನ : ಈ ರೀತಿಯಲ್ಲಿ ಸದಾಕಾಲವೂ ಮನೋಹರವಾಗಿದ್ದ ಅರಣ್ಯದ ಮಧ್ಯದಲ್ಲಿ ಬೇಡರು ಬೇಟೆಯಾಡಲು ಸಂಭ್ರಮದಿಂದ, ಮೃಗಗಳು ಹೋದ ದಾರಿಯ ಗುರುತು ಹಿಡಿದು, ಮೃಗಗಳಿರುವ ಸ್ಥಳಕ್ಕೆ ಬಂದು, ಗುಂಪುಗೂಡಿ ನಿಂತರು. ೪೫. ಆ ಮಹಾರಣ್ಯ ದಲ್ಲಿ ಮೃಗಗಳ ಬಾಯಿಂದ ಜೊಲ್ಲು ನೊರೆನೊರೆಯಾಗಿ ಬಿದ್ದಿರುವುದನ್ನೂ, ಮೈಕೂದಲು ಮರಿರುವುದನ್ನೂ, ಕೆಸರಿನಲ್ಲಿ ಕಾಲಿನ ಗೊರಸುಗಳೊತ್ತಿ ಗುರುತುಗಳಾಗಿರುವುದನ್ನೂ, ಬಾಯಿಂದ ತುಂಡರಿಸಿದ ಆಹಾರದ ಚೂರುಗಳು ಬಿದ್ದಿರುವುದನ್ನೂ, ಉಗುರುಗಳ ಗುರುತನ್ನೂ, ವಾಸನೆಯನ್ನೂ, ಮೃಗಗಳ ಹೆಜ್ಜೆಗಳನ್ನೂ ಓಡಾಡುತ್ತಾ ಹುಡುಕಿ

ಚಂಪಕ ಮದರಸಮೊಕ್ಕುದಿಲ್ಲಿ ಕರಿ ಪೋದುದು ಸಿಂಗದ ಬಟ್ಟೆ ನೋೞ್ಪೊಡಿಂ
ತಿದು ಗಜಮೌಕ್ತಿಕಂ ಸಿಡಿದುದಿಲ್ಲಿ ಲುಲಾಯದ ಮಾರ್ಗಮಪ್ಪುದಾ
ಸ್ಯದ ನೊರೆ ಬಿಟ್ಟುದಿಲ್ಲಿ ಕೆಸಱ್ದರ್ಪುದಿಲ್ಲಿ ವರಾಹಮೆಯ್ದಿದ
ತ್ತಿದಿರೊಳೆ ಪುಲ್ಲೆ ಪಾಯ್ದಿಡೆಯಿದಪ್ಪುದು ಸೂಸಿದುವಾ[1]ಸ್ಯದೂರ್ವೆಗಳ್ ೪೬

ವಚನ ಎಂದು ಪಲವಜ್ಜೆಯುಂ ಪರೀಕ್ಷಿಸಿ

ಚಂಪಕ ಕರಿಗೆ ಕರಾಗ್ರಮಂ ನೆಗೆಪಿ ಕೋಟಿ[2]ಮೃಗಕಿರ್ವೆರಲೆತ್ತಿ ಸಿಂಹಕೊ
ಪ್ಪಿರೆ ರಸನಾಗ್ರಮಂ ತೆಱೆದು ಕೆಯ್ಯೆರಡಂ ನಿಮಿರ್ದೆತ್ತಿ ಬಗ್ಗಿಕೆ
ಟ್ಟಿರದ ಕುರುಳ್ಗಳಂ ಪರೆಪಿ ಜಲ್ಲಿಮಿಗಕ್ಕೆ ವರಾಹಯೂಥಮೋ
ಟ್ಟಿರೆ ಮಣಿಕಾಲ್ಗಳಂ ಮಡಿದು[3] ತೋಱಿದರೊಯ್ಯನೆ ಸನ್ನೆವೇಂಟೆಯೊಳ್ ೪೭

ಸರಳಿಸುವೇಣನೋಡುವ ಮೊಲಂ ಬಗೆಗುಂದುವ ಖಡ್ಗಿ ನಿಲ್ವ ಸೂ
ಕರನಡಿಗೊಳ್ವ ಪೆರ್ಮಱೆಯುಡುಂಗುವ ಪೆರ್ಬುಲಿ ಕಣ್ದೊಟಲ್ವ ಬ
ಲ್ಗರಡಿ ಕಡಂಗಿ ಮೆಯ್ಮುರಿವ ಕೇಸರಿಯಾಲಿಪ ದಂತಿ ಪಾಱಿ ಸೈ
ವರಿವ ಖಗಾಳಿಯೊಪ್ಪೆ ಪಿರಿದಾದುದು ಬೇಂಟೆಯ ವಾದ್ಯದಬ್ಬರಂ ೪೮

ಗುರುತಿಸಿ ನೋಡಿ ಬೇಡರು ಹುಡುಕಾಡಿದರು. ೪೬. "ಮದೋದಕ ಬಿದ್ದಿದೆ, ಆದ್ದರಿಂದ ಇಲ್ಲಿ ಆನೆ ಹೋಗಿದೆ. ಇಲ್ಲಿ ಆನೆಯ ಕುಂಭಸ್ಥಳದಿಂದ ಮುತ್ತುಗಳು ಉದುರಿವೆ, ಆದ್ದರಿಂದ ಇದು ಸಿಂಹವು ಹೋದಮಾರ್ಗ. ಇಲ್ಲಿ ಬಿದ್ದಿರುವ ಬಾಯಿನ ನೊರೆಯನ್ನು ನೋಡಿದರೆ, ಇದು ಕಾಡುಕೋಣ ಹೋದ ದಾರಿ. ಇಲ್ಲಿ ಕೆಸರಾಗಿರುವುದರಿಂದ, ಇತ್ತ ಕಡೆ ಹಂದಿಯು ಹೋಗಿದೆ. ಇಲ್ಲಿ ಬಾಯಿಂದ ಬಿದ್ದಿರುವ ಎಳೆ ಹುಲ್ಲಿನ ತುಂಡುಗಳಿವೆ, ಆದ್ದರಿಂದ ಇಲ್ಲಿ ಹುಲ್ಲೆಗಳು ಹಾದುಹೋಗಿರಬೇಕು" ವಚನ : ಎಂದು ಅನೇಕ ಗುರುತುಗಳನ್ನು ಪರೀಕ್ಷಿಸುತ್ತಾ, ೪೭. ಆ ಬೇಡರು ಸನ್ನೆಬೇಂಟೆಯಾಡುವಾಗ, ಯಾವ ಮೃಗವೆಂಬುದು ತಿಳಿಯುವಂತೆ ಗುರುತು ತೋರಿಸುತ್ತಿದ್ದರು. ಹಸ್ತವನ್ನು (ಸೊಂಡಿಲಿನಂತೆ) ಮೇಲಕ್ಕೆತ್ತಿ ಆನೆಗಳನ್ನೂ, ಎರಡು ಬೆರಲುಗಳನ್ನು ಎತ್ತಿ ಕೊಂಬುಗಳುಳ್ಳ ಪ್ರಾಣಿಗಳೆಂಬುದನ್ನೂ, ನಾಲಗೆಯನ್ನು (ಭೀಕರವಾಗಿ) ಚಾಚಿ ಸಿಂಹವೆಂಬುದನ್ನೂ, ಎರಡು ಕೈಗಳನ್ನು (ಮೇಲೆ ಬೀಳುವಂತೆ) ಎತ್ತಿ ಹುಲಿಯೆಂಬುದನ್ನೂ, ಕೂದಲನ್ನು ಹರಡಿ ಚಮರೀಮೃಗವೆಂಬುದನ್ನೂ, ಮೊಣಕಾಲನ್ನು ಮಡಿಚಿಕೊಂಡು (ಅಭಿನಯಿಸುತ್ತಾ) ಹಂದಿಗಳ ಗುಂಪು ಬಂದಿತೆಂಬುದನ್ನೂ ಸಂಕೇತದಿಂದ ಸೂಚಿಸುತ್ತಿದ್ದರು. ೪೮. ಬೇಟೆಯಲ್ಲಿ ಬಾರಿಸುತ್ತಿದ್ದ ವಾದ್ಯಗಳ ಆರ್ಭಟವು ವಿಶೇಷವಾಗಿತ್ತು. ಅದನ್ನು ಕೇಳಿ ಜಿಂಕೆಯು ಮೈಯನ್ನು ನೆಟ್ಟಗೆ ಮಾಡಿತು. ಮೊಲವು ಓಡಿತು. ಖಡ್ಗಮೃಗವು ಹೆದರಿತು. ಹಂದಿಯು ಸ್ತಬ್ಧವಾಗಿ ನಿಂತಿತು. ದೊಡ್ಡ ಜಾತಿಯ ಜಿಂಕೆ ಮುಂದಕ್ಕೆ ಹೆಜ್ಜೆಯಿಕ್ಕಿತು. ದೊಡ್ಡಹುಲಿಯು ಅವಿತುಕೊಂಡಿತು. ಬಲವಾದ

---

೧ ಸೂಸಿದುದಾ (ಕ, ತ) ೨ ಕಿರ್ಚೆರ (ಕ) ೩ ಮಣಿದು (ಯ)

ವಚನ ಮತ್ತಮಾಗಳ್

ಮಹಾಸ್ರಗ್ಧರೆ ನಡೆ ಸಾರ್ ಮುಂದೆಯ್ದು ಬೆಳ್ಳಾರವನೆ ಬಿಗಿ ನಿಕುಂಜಂಗಳಂ ಸೋದಿಸೆಂಬಂ
ಬಿಡು ನೀರ್ದಾಣಂಗಳೊಳ್ ನಿಲ್ ಪಸರಿಸು ಬಲೆಯಂ ಪಜ್ಜೆಯಂ ನೋಡು ನೀಂ ಪೇ
ರಡಿಯಂ ಕೆಯ್ಸನ್ನೆಗೆಯ್ ನಿಂದೆಚಿಗದಿರುಲಿಪಂ ಮೆಲ್ಲನಾಕರ್ಣಿಸೊಳ್ಪಿಂ
ದಡರುದ್ಯದ್ಭೂಜವಂ ಮಾರ್ಗಮನೆ ತಡೆವುದೆಂಬಬ್ಬರಂ ಪರ್ಬಿತೆತ್ತಂ ೪೯

ವಚನ ಮತ್ತಂ

ಚಂಪಕ ಬಡಿಯುಡುವಂ ತೊಡಂಕದಿಡು[1] ಪೆರ್ವೊಲನಂ ಬಲೆವೀಸಿ ಪುಲ್ಲೆಯಂ
ಕೆಡೆಪು ಲುಲಾಯಮಂ ತಱಿ ಪೊದಟ್ಟಿಸು ದಂತಿಯನಾರ್ದು ಖಡ್ಗದಿಂ
ಕಡಿ ಪುಲಿಯಂ ಕರುತ್ತಿಱಿ ವರಾಹನನಿಟ್ಟೆಯೊಳುಗ್ರಸಿಂಹಮಂ
ಪೊಡೆ ಬಿಡದಣ್ಮಿ ಕೂರಸಿಯಿನೆಂಬ ರವಂ ಪಿರಿದಾಯ್ತರಣ್ಯದೊಳ್ ೫೦

ನಡುಗುವ ಕಾಲ್ಗಳುಬ್ಬರಿಪ ಕಿಬ್ಬರಿ[2]ಗಳ್ ಪೊಡೆವಳ್ಳೆ ಬಾಯ್ಗಳಿಂ
ಕಡೆಗುಗುತಿರ್ಪ ದೂರ್ವೆ ಬೆದರ್ದೀಕ್ಷಿಪ ನೀಳ್ದಲರ್ಗಣ್ ಪೊದಟ್ಟಿ ಸುಯ್
ಬಿಡದಿರೆ ನೀಟ್ಟಿ ಕೋಡಲುಗೆ ಬತ್ತಿದ ಬಾಯ್ದೆರಸಲ್ಲಿ ಭೀತಿ ಕೆ
ಯ್ಗುಡೆ ಕಡುವೇಗದಿಂದೆ ಕೊಣಕಿಟ್ಟುದು ವನ್ಯಮೃಗೀಕದಂಬಕಂ ೫೧

ಕರಡಿಯು ಕಣ್ಣರಳಿಸಿ ನೋಡಿತು. ಸಿಂಹವು ರೋಷದಿಂದ ಮೈಮುರಿಯಿತು. ಆನೆಯು ಶಬ್ದವನ್ನು ಕಿವಿಗೊಟ್ಟಾಲಿಸಿತು. ಗುಂಪುಗೂಡಿಕೊಂಡು ಪಕ್ಷಿಗಳು ಹಾರಿದುವು. ವಚನ : ಮತ್ತೆ ಆಗ ೪೯. "ನಡಿ," "ಪಕ್ಕಕ್ಕೆ ಹೋಗು," "ಮುಂದೆಹೋಗು," "ಬಲೆಯನ್ನು ಕಟ್ಟು", "ಪೊದೆಗಳಲ್ಲಿ ಹುಡುಕು", "ಬಾಣಬಿಡು," "ನೀರು ಇರುವ ಕಡೆ ನಿಲ್ಲು," "ಬಲೆಯನ್ನು ಹರಡು," "ಹೆಜ್ಜೆಗಳನ್ನು ನೋಡು", "ದೊಡ್ಡಹೆಜ್ಜೆಯಿಕ್ಕುತ್ತಾ ಕೈಸನ್ನೆಮಾಡು," "ನಿಂತುಹೊಡಿ," "ಮುಂದಿನಿಂದ ಕೇಳಿಸುವ ಧ್ವನಿಯನ್ನು ಎಚ್ಚರದಿಂದ ಗುರುತಿಸು," "ದೊಡ್ಡವೃಕ್ಷವನ್ನು ಜಾಗರೂಕತೆಯಿಂದ ಹತ್ತು," "ದಾರಿಗೆ ಅಡ್ಡಕಟ್ಟು" ಎನ್ನುವ ಮಾತಿನ ಆರ್ಭಟವೇ ಎಲ್ಲೆಲ್ಲೂ ತುಂಬಿತು. ವಚನ: ಅಲ್ಲದೆ ೫೦. "ಉಡುಪನ್ನುಬಡಿ," "ದೊಡ್ಡ ಮೊಲವನ್ನು,ಹತ್ತಿರ ಹೋಗದೆ, ಹೊಡಿ," "ಬಲೆಬೀಸಿ, ಹುಲ್ಲೆಯನ್ನು ಕೆಡವು," "ಕಾಡುಕೋಣವನ್ನು ಕತ್ತರಿಸಿ ಹಾಕು," "ಆನೆಯನ್ನು ಆಚೆಗೆ ಹೊರಡಿಸಿ, ಕೊಲ್ಲು," "ಮೇಲೆ ಬಿದ್ದು ಹುಲಿಯನ್ನು ಕತ್ತರಿಸು," "ಹಂದಿಯನ್ನು ಈಟಿಯಿಂದ ತಿವಿ," "ಉಗ್ರಸಿಂಹವನ್ನು ಮುತ್ತಿಕೊಂಡು ಹರಿತವಾದ ಖಡ್ಗದಿಂದ ಹೊಡೆ," ಎಂಬ ಬೇಡರ ಮಾತುಗಳು ಎಲ್ಲೆಲ್ಲೂ ಹರಡಿತು. ೫೧. ಕಾಡಿನ ಹೆಣ್ಣುಜಿಂಕೆಗಳ ಗುಂಪುಗಳು ನೆಗೆದೋಡುತ್ತಿದ್ದುವು. ಅವುಗಳ ಕಾಲುಗಳು ನಡುಗುತ್ತಿದ್ದುವು. ಕೆಳಹೊಟ್ಟೆಗಳು ಉಬ್ಬರಿಸುತ್ತಿದ್ದುವು. ಪಾರ್ಶ್ವಗಳು ಬಡಿದುಕೊಳ್ಳುತ್ತಿದ್ದುವು. ಬಾಯಲ್ಲಿದ್ದ ಹುಲ್ಲು ಈಚೆಗೆ ಬೀಳುತ್ತಿದ್ದಿತು. ವಿಶಾಲವಾದ ಹೂವಿನಂತಹ ಕಣ್ಣುಗಳು

---

೧ ತೊಡಂಕುತಿಡು (ಕ) ೨ ಕಿಬ್ಬರಿ (ಯ)

ಉತ್ಪಲ ನೀಡಡಿಗೊಂಡು ನಿಂದು ಡೊಣೆಯಿಂ ಕಣೆಯಂ ತೆಗೆದಾರ್ದು೦ ಬಿಲ್ಗದಂ
ಪೂಡಿ ಪೊಡರ್ಪುವೆತ್ತು ಕಟಕಾಮುಖದಿಂ ಸೆಳೆದುರ್ವಿ ಲಕ್ಷ್ಯಮಂ
ನೋಡಿ ಕಟಾಕ್ಷವಂಬುದುದಿಯೊಂದಿರೆ ತೆಳ್ನಡು ಬಳ್ಕೆ ಗಾಡಿ ಕೆ
ಯ್ಗೂಡಿರೆ ತೊಟ್ಟನೆಚ್ಚು ಮೃಗವ್ಯಂವವನಿಕ್ಕಿದರಲ್ಲಿ ಭಿಲ್ಲಿಯರ್ ೫೨

ಚಂಪಕ ಪಸರಿಸಿ ಪತ್ತಿ ಧಾತ್ರಿಗೆ ಕುನುಂಗಿ ವಿಲಂಘಿಪ ಮಾನವಂ ಪರೀ
ಕ್ಷಿಸಿ ತೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ಪಿಂಗಳಾಕ್ಷಿ ಸುಯ್
ಮಿಸುಕದ ಮೂಗು ಸುರ್ಕುಗಿವಿ ಭೂಮಿಯೊಳಾಡಿಪ ಬಾಲವೊಪ್ಪೆ ಗ
ರ್ಜಿಸಿ ಮಿಗೆ ಪಾಱೆ ಮೇಲ್ವರಿವ ಬಗ್ಗಮನಿಕ್ಕಿದನುಗ್ರಲುಬ್ಧಕಂ ೫೩

ಒದೆದಿಳೆಯಂ ಪುಟಂ ನೆಗೆದು ಗರ್ಜಿಸಿ ಮುಂದಣ ಕಾಲ್ಗಳಿಂದೆ ಕಾ
ಯ್ದೊದವೆ ಭುಜಾಗ್ರದೊಳ್ ನಡೆ ನಖಂ ಪೊಡೆದುಗ್ರತೆಯಿಂ ಸಿರಕ್ಕೆ ಪ
ಲ್ದುದಿಯನಮರ್ಚುತವ್ವಳಿಪ ಬಗ್ಗದ ಗಂಡಿಕೆಗಿಂಡು ನೆತ್ತಿಯ
ಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂದಿರದಿಕ್ಕಿದನಾ ವನೇಚರಂ ೫೪

ಬೆದರಿ ನೋಡುತ್ತಿದ್ದುವು. ಉಸಿರು ಸಿಕ್ಕಿಕೊಳ್ಳುತಿತ್ತು. ಎತ್ತರವಾಗಿದ್ದ ಕೊಂಬುಗಳು ಅಲುಗುತ್ತಿದ್ದುವು. ಬಾಯಿಗಳು ಒಣಗಿಹೋಗಿದ್ದುವು. ಭೀತಿಯಾವರಿಸಿ ಅವು ಅತಿ ಶೀಘ್ರವಾಗಿ ನೆಗೆದೋಡುತ್ತಿದ್ದುವು. ೫೨. ಬೇಡತಿಯರು ಅವರ ತೆಳುವಾದ ನಡುಗಳು ಬಳುಕುತ್ತಿರಲು, ವಿಲಾಸದ ರೀತಿಯಿಂದ ಜಿಂಕೆಗಳನ್ನು ಹೊಡೆದರು. ಒಂದಕ್ಕೊಂದು ದೂರವಾಗುವಂತೆ ಕಾಲುಗಳನ್ನು ಇಟ್ಟು, ಬತ್ತಳಿಕೆಯಿಂದ ಬಾಣವನ್ನು ತೆಗೆದು ಅಬ್ಬರಿಸುತ್ತಾ, ಅದನ್ನು ಬಿಲ್ಲಿಗೆ ಹೂಡಿ, ಪರಾಕ್ರಮದಿಂದ ಹೆಬ್ಬೆರಳು, ತೋರುಬೆರಳು ಗಳಿಂದ ಬಾಣವನ್ನು ಹಿಡಿದು, ಹೆದೆಯನ್ನು ಹಿಂದಕ್ಕೆ ಸೆಳೆದು, ಗುರಿಯೂ ನೋಟವೂ ಬಾಣದ ತುದಿಯೂ ಒಂದೇ ನೇರದಲ್ಲಿರಲು, ಬಾಣಗಳನ್ನು ಬಿಟ್ಟು ಮೃಗಗಳನ್ನು ಉರುಳಿಸಿದರು. ೫೩. ಮೈಯನ್ನು ಚಾಚಿ, ನೆಲಕ್ಕೆ ಅತುಕೊಂಡು, ಮೈಯನ್ನು ಕುಗ್ಗಿಸಿ ಹಾರಬೇಕಾದ ದೂರದ ಅಳತೆಯನ್ನು ತನ್ನ ದೃಷ್ಟಿಯಿಂದ ತಿಳಿದು, ಸುತ್ತಲೂ ನೋಡುತ್ತಾ, ಬಾಯನ್ನು ತೆರೆದುಕೊಂಡು, ಕೊರಳನ್ನೆತ್ತಿ ನೆಟ್ಟಗೆ ಮಾಡಿಕೊಂಡು, ರೆಪ್ಪೆ ಹೊಡೆಯದೆ ಪಿಂಗಳವರ್ಣದ ಕಣ್ಣುಗಳಿಂದ ನೋಡಿ, ಉಸಿರಾಟದಿಂದ ಚಲಿಸದಿರುವ ಮೂಗು, ಬಾಗಿದ ಕಿವಿ, ನೆಲವನ್ನು ಬಡಿಯುತ್ತಲಿದ್ದ ಬಾಲದಿಂದ ಕೂಡಿದ್ದ ಹುಲಿಯು ಗರ್ಜಿಸುತ್ತಾ ಮೇಲೆ ನೆಗೆಯಿತು. ಅದನ್ನು ಭಯಂಕರನಾಗಿದ್ದ ಬೇಡನೊಬ್ಬನು ಹೊಡೆದನು. ೫೪. ನೆಲವನ್ನು ಒದೆದು, ಮೇಲಕ್ಕೆ ನೆಗೆದು, ಗರ್ಜಿಸುತ್ತಾ, ಮಹಾ ಕೋಪಗೊಂಡು, ಭುಜಗಳ ಮೇಲೆ ಉಗುರುಗಳು ನಾಟುವಂತೆ ಅಪ್ಪಳಿಸಿ ಹೊಡೆದು, ಕ್ರೂರವಾಗಿ ತಲೆಗೆ ಹಲ್ಲುಗಳನ್ನು ಊರಿ, ಅಪ್ಪಳಿಸುತಿದ್ದ ಹುಲಿಯ ಪರಾಕ್ರಮವನ್ನು ಕಂಡು ಬೇಡನು ತನ್ನ ಕೈಗತ್ತಿಯ ತುದಿಯನ್ನು ಹುಲಿಯ ನೆತ್ತಿಯಲ್ಲಿ ತಿವಿದು ಕೊಂದನು.

---

೧ ಕಾರ್ಮುಕ (ಕ)

ಮತ್ತೇಭ ನೆಲನಂ ಪೊಯ್ದು ಬೆರಂಟುತಗ್ರಪದದಿಂ ಕೆಂಗಣ್ಣಳಿಂ ನೋಡುತುಂ
ಮಲೆಯುತ್ತುಂ ಮದವೇಱಿ ವಾಮಸಕದಿಂದಂ ೧ವೋಱೆಯಿಂ ಬಾಗಿ೧ ಮೂ
ಗಲರುತ್ತುಂ ಸುಱುಕಿಟ್ಟು ಸೂಸೆ ನೊರೆ ಬಾಯಿಂ ಬಾಲಮೆತ್ತುತ್ತೆ ಕೋ
ಡಲುಗುತ್ತುಂ ಪುಟವೆಟ್ಟು ಪಾಯ್ದುದಿದಿರೊಳ್ ಶೈಲಪ್ರಭಂ ಸೈರಿಭಂ ೫೫

ಅದಿರದದಿರಾಂತು ರೊಂಕಿ
ಟ್ಟೊದಱುತ್ತುಂ ಬರ್ಪ ಕಾಡಕೋಣನ ಗೋಣಂ
ಮದಯುತನೊರ್ವಂ ತಱಿದಿ
ಕ್ಕಿದನಾರ್ಪಿಂ ನಿಶಿತಖಡ್ಗದಿಂದೆ ಪುಳಿಂದಂ ೫೬

ವಚನ ಮತ್ತಮೊರ್ವಂ

ಮತ್ತೇಭ ಮರಗೊಂಬಂ ಮುಱಿದಾಂತು ನೀಳ್ದ ಕರದಿಂ ಕಾಯ್ಪೇಱುತುಂ ಸೋರ್ವ ದಾ
ನರಸಾಸಾರದೆ ಸೀಯೆ ಮಾರ್ಗದ ತೃಣಂ ಕೆಂಗಣ್ಣಳಿಂ ನೋಡಿ ನಿ
ರ್ಭರದಿಂ ಗರ್ಜಿಸಿ ಕೋಡೊಳೀಡಿಱಿಯಲಾರ್ಪಿಂ ಬರ್ಪ ಸಂದ್ಯಪ್ತಸಿಂ
ಧುರಮಂ ಪಾಯ್ದು ಪಳಂಚಿ ಪೊಯ್ದನಸಿಯಿಂ ಧೀರೋತ್ತಮಂ ಧೀವರಂ ೫೭

೫೫. ಮುಂಗಾಲುಗಳಿಂದ ನೆಲವನ್ನು ಕುಟ್ಟುತ್ತಾ, ಗೊರಸುಗಳಿಂದ ನೆಲವನ್ನು ತೋಡುತ್ತಾ, ಕೆಂಪಾದ ಕಣ್ಣುಗಳಿಂದ ದಿಟ್ಟಿಸುತ್ತಾ, ಎದುರುಬೀಳುತ್ತಲೂ, ಮತ್ತೇರಿ ಕೋಪದಿಂದ ತಲೆಯನ್ನು ತಗ್ಗಿಸಿ, ಮೂಗಿನ ಹೊಳ್ಳೆಗಳನ್ನರಳಿಸುತ್ತಾ, ಸುರ್‍ರೆಂದು ಶಬ್ದ ಮಾಡುತ್ತಾ, ಬಾಯಲ್ಲಿ ನೊರೆಯು ಚೆಲ್ಲುತ್ತಿರಲು, ಬಾಲವನ್ನೆತ್ತಿ, ಕೊಂಬುಗಳನ್ನು ಅಲ್ಲಾಡಿಸುತ್ತಾ, ಪುಟನೆಗೆಯುತ್ತಾ ಬೆಟ್ಟದಂತಿದ್ದ ಕಾಡುಕೋಣವು ಇದಿರಿನಲ್ಲಿ ಹಾಯಲು ಬಂದಿತು. ೫೬. ಅದನ್ನು ಕಂಡು ಹೆದರದೆ, ಎದುರಾಗಿ ನುಗ್ಗಿ, ಗುರುಗುಟ್ಟಿ ಆರ್ಭಟಿಸುತ್ತ ಬಂದ ಕಾಡುಕೋಣದ ಕತ್ತನ್ನು ಸಾಹಸೋನ್ಮತ್ತನಾದ ಬೇಡನು ಹರಿತವಾದ ಖಡ್ಗದಿಂದ ಕತ್ತರಿಸಿಹಾಕಿದನು. ವಚನ : ಮತ್ತೊಬ್ಬನು ೫೭. ಉದ್ದವಾದ ಸೊಂಡಿಲಿನಿಂದ ಮರದ ಕೊಂಬೆಯನ್ನು ಮುರಿದು, ಅದನ್ನು ಹಿಡಿದುಕೊಂಡು, ರೋಷವೇರಿ, ಮದೋದಕವು ಮಳೆಯಂತೆ ಸುರಿಯುತ್ತಿರಲು, ದಾರಿಯಲ್ಲಿನ ಹುಲ್ಲು ಸೀದು ಕಪ್ಪಾಗಲು, ಕೆಂಗಣ್ಣು ಗಳಿಂದ ನೋಡುತ್ತಾ, ನಿರ್ಭೀತಿಯಿಂದ ಘೀಂಕರಿಸುತ್ತಾ, ದಂತಗಳನ್ನು ಚುಚ್ಚಿ ತಿವಿಯಲು ನುಗ್ಗಿ ಬರುವ ಗರ್ವದಿಂದ ಕೊಬ್ಬಿದ ಆನೆಯನ್ನು ಮಹಾಪ್ರತಾಪಶಾಲಿ

---

೧–೧ ಮೋರೆಯಿಂಬಾಗಿ (ಗ, ತ)

ನೀಡಿದ ಭರಿಕೆಯ್ಗಿಲದೊಳ್
ಕಾಡೊಡೆಯಂ ಪೊಡೆದ ಬಾಣವಿಭಮಸ್ತಕದೊಳ್
ಮೂಡಿದುದು ನೆತ್ತಿ ಮುತ್ತೊಡ
ಗೂಡಿರೆ ಸುಗಿದಗಿದು ಬಿಟ್ಟುದಾ ಗಜವಿಳೆಯೊಳ್ ೫೮

ವಚನ ಪೆಱತೊಂದು ತಾಣದೊಳ್

ವನಚರನೆಚ್ಚಂ ಕರಮಂ೧
ವಿನುತರದದ್ವಯಮನೊಡನೆ ಪಡಲಿಡೆ ಕರಿ ತಾ
ನೆನಸುಂ ಪೋಲ್ತುದು ಸುರಿವರೆ೨
ಘನರುಧಿರಂ ರುಧಿರವೃಷ್ಟಿಗಱೆವಂಬುದಮಂ ೫೯

ಕರಿಯ ಗುರುಕುಂಭಮಂ ತ
ನ್ನರಸಿಯ ಕುಚಕುಂಭಮೆಂದು ಪರಿಕಿಪ ಶಬರಂ
ಶರದಿಂದೆಚ್ಚಂ ಹರಿಯುದ
ಕಿರದೆಱಗೆ ತದೀಯಮಸ್ತಕಂ ಪಱಿವಿನೆಗಂ ೬೦

ಮತ್ತೇಭ ನಡೆಗಲ್ತಂಜನಶೈಲದಂತೆ ಪದೆದೇಟ್ಟಿರ್ಪಾನೆಯಂ ಕಂಡು ಬಲ್
ಸಿಡಿಲೆಂತಂತಿರೆ ಗರ್ಜಿಸುತ್ತಸರ್ದದಂ ತತ್ಕುಂಭಮಂ ಸೀಳ್ದು ಕಾ
ಯ್ದಿಡಿದುದ್ಯದ್ವಿಪವೈರಿಯುಗ್ರಗಳ ಸಿರಂ ಬೀಟ್ವಂತಿರೆಚ್ಚಂ ಜವಂ
ಗೆಡದರ್ಧೇಂದುಮುಖಾಸ್ತ್ರದಿಂ ರುಧಿರಮೆತ್ತಂ ಪಾಯ್ವಿನಂ ಧೀವರಂ ೬೧

ಯಾದ ಇನ್ನೊಬ್ಬ ಬೇಡನು ಮೇಲೆಬಿದ್ದು ಕತ್ತಿಯಿಂದ ಹೊಡೆದನು. ೫೮. ಕಾಡಿನ ಒಡೆಯನಾದ ಬೇಡನು ಬಿಟ್ಟ ಬಾಣವು ಸೊಂಡಿಲ ತೂತಿನಲ್ಲಿ ತೂರಿ, ಆನೆಯ ತಲೆಯಲ್ಲಿ ಕಾಣಿಸಿಕೊಂಡಿತು. ನೆತ್ತಿಯಲ್ಲಿದ್ದ ಮುತ್ತುಗಳು ಕಳಚಿಬಿದ್ದುವು. ಆನೆಯು ಹೆದರಿ, ಬಿದ್ದುರುಳಿತು. ವಚನ : ಇನ್ನೊಂದು ಕಡೆಯಲ್ಲಿ ೫೯. ಬೇಡನು ಆನೆಯ ಸೊಂಡಿಲನ್ನೂ, ದಂತಗಳೆರಡನ್ನೂ ಕತ್ತರಿಸಿದಾಗ, ಆನೆಯು ಉರುಳಿ ಬಿದ್ದಿತು. ಆಗ ರಕ್ತವು ಧಾರೆಯಾಗಿ ಹರಿಯಿತು. ಅದು ಮೇಘವು ರಕ್ತವೃಷ್ಟಿಯನ್ನು ಸುರಿಸುತ್ತಿದ್ದಂತೆ ಕಾಣಿಸುತ್ತಿದ್ದಿತು. ೬೦. ಆನೆಯ ಕುಂಭಸ್ಥಳವನ್ನು, ಇದು ತನ್ನ ಪ್ರೇಯಸಿಯ ಕುಚಕುಂಭವೋ ಎಂದು ಒಬ್ಬ ಬೇಡನು ಪರೀಕ್ಷಿಸುತ್ತಿದ್ದನು. ! ಆಗ ಆನೆಯ ಕುಂಭಸ್ಥಳದ ಮೇಲೆ ಸಿಂಹವು ನೆಗೆಯಲು, ಸಿಂಹದ ತಲೆಯನ್ನು ಬಾಣ ಪ್ರಯೋಗದಿಂದ ಕತ್ತರಿಸಿದನು ! ೬೧. ನಡೆಯನ್ನು ಕಲಿತ ಅಂಜನಗಿರಿಯಂತೆ ಲೀಲೆಯಿಂದ ಬರುತ್ತಿದ್ದ ಆನೆಯನ್ನು ಕಂಡ ಸಿಂಹವು ಆರ್ಭಟಿಸುತ್ತಾ, ಸಿಡಿಲಿನಂತೆ ಮೇಲೆ ಬಿದ್ದು, ಅದರ ಕುಂಭಸ್ಥಳವನ್ನು ಸೀಳಿತು. ರೋಷಾವಿಷ್ಟವಾದ ಭಯಂಕರ ಸಿಂಹದ

---

೧ ಕರಿಯಂ (ಜ); ಶರಮಂ (ಯ) ೨ ತರೆ (ಯ)

ಮಹಾಸ್ರಗ್ಧರೆ
ಕುಡಿವಾಲುಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯೆ ಕೂರ್ದಾಡೆ ಕೆಂಗಣ್ಗಳಿಂ ಕೆಂ
ಗಿಡಿ ಸುತ್ತಂ ಸೂಸೆ ಪೆರ್ಮೂಗಲರೆ ತೆಱೆದ ಬಾಯ್ ಭೀತಿಯಂ ಬೀಱೆ ಕಾಯ್ಪಂ
ಪಡೆದಾರ್ಪಿಂ ಗರ್ಜಿಸುತ್ತುಂ ಕೆಳರ್ದು ಕೆದಱುತುಂ ಕೇಸರವ್ರಾತಮಂ ಮುಂ
ಗಡೆಯೊಳ್ ಪಾಯ್ತಂಮಹೋದ್ವೃತ್ತಪದನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ ೬೨

ಅತಿರೌದ್ರಾಕಾರದಿಂದುತ್ಕಟಿಸಿ ಮುಳಿದು ತಿಂಬಂದದಿಂ ನೋಡಿ ಶೌರ್ಯೋ
ನ್ನತಿಯಿಂ ಮುಂಗಾಲ್ಗಳಂ ಮುನ್ನೆಗೆಪುತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋ
ದ್ಧತಗರ್ಜತ್ಸಿಂಹಮಂ ಬೀೞೆನುತೊಗೆದಡಟಿಂ ಖಡ್ಗದಿಂ ಪೊಯ್ದನತ್ಯ
ದ್ಭುತಸತ್ತ್ವಂ ಧಾತ್ರಿಯೊಳ್ ತಚ್ಛಿರಮುರುಳೆ ಕನಲ್ದೊರ್ವನುದ್ವೃತ್ತಕಿರಾತಂ ೬೩

ವಚನ
ಇಂತು ಕಾಂತಾರಾಂತರಾಳದೊಳ್ ಪುಳಿಂದನಿಳಿಂಪರ್ ಪಲವೇಂಟೆಯಾಡುತ್ತುಮಿರೆಯಿರೆ

ಮಹಾಸ್ರಗ್ಧರೆ
ವಿಳಸನ್ಮಂದಾರಭೂಜಾತದ ಬಟ್ಟೆನೆೞಲೊಳ್ ನಿಂದು ಚಂದ್ರಾಶ್ಮಪೀಠ
ಸ್ಥಳದೊಳ್ ಪೂಗೊಂಚಲೊಂದಂ ಪಿಡಿದಡಿಗಡಿಗಾಘ್ರಾಣಿಸುತ್ತೊಲ್ಮೆಯಿಂ ಚೆಂ
ದಳಿರುದ್ಯತ್ತಾಲವೃಂತಂಬಿಡಿದು ಪದೆಪಿಂ ಬೀಸೆ ಕಲ್ಯಾಣಿ ತಾಂ ಕಣ್
ಗೊಳಿಸಿರ್ದಂ ನೋಡುತುಂ ಬೇಂಟೆಯ ಪೊಸಪರಿಯಂ ಲೀಲೆಯಿಂ ಭಾಳನೇತ್ರಂ ೬೪

ಬಲಿಷ್ಠವಾದ ತಲೆಯು ಉರುಳುವಂತೆ ಬೇಡನು ಅರ್ಧಚಂದ್ರಾಕೃತಿಯ ಬಾಣವನ್ನು ಧೈರ್ಯಗೆಡದೆ ಪ್ರಯೋಗಿಸಿದನು. ಆಗ ಸಿಂಹದ ತಲೆಯುರುಳಿ, ನೆತ್ತರು ಎಲ್ಲೆಡೆಯೂ ಹಾರಿತು. ೬೨. ಬಾಣದ ತುದಿಯು ನೆತ್ತಿಯನ್ನು ಚುಚ್ಚುತ್ತಿರಲು, ಕ್ರೂರವಾದ ಕೋರೆದಾಡೆಗಳು ಥಳಥಳಿಸುತ್ತಿರಲು, ಕಿಡಿಗೆದರುವಂತೆ ಕಣ್ಣನ್ನು ಕೆಂಪಗೆ ಮಾಡಿಕೊಂಡು ಮೂಗಿನ ಹೊಳ್ಳೆಗಳು ಹಿಗ್ಗುತ್ತಿರಲು, ಭಯಂಕರವಾಗಿ ಬಾಯನ್ನು ತೆರೆದುಕೊಂಡು, ಕೋಪದಿಂದಲೂ ಪರಾಕ್ರಮದಿಂದಲೂ ಗರ್ಜನೆಯನ್ನು ಮಾಡುತ್ತಾ, ಕೊರಳ ಕೂದಲನ್ನು ಕೆದರಿಕೊಂಡು, ದೊಡ್ಡಕಾಲುಗುರುಗಳಿಂದ ಆನೆಗಳನ್ನು ಸೀಳಿದ್ದ ಸಿಂಹವು ಅತ್ತಕಡೆ ಓಡಿಬಂದಿತು. ೬೩. ಬಹಳ ಕ್ರೂರವಾದ ರೂಪದಿಂದ ಉಬ್ಬಿಹೋಗಿ, ಕೋಪದಿಂದ ನುಂಗುವಂತೆ ನೋಡುತ್ತಾ, ಪ್ರವೃದ್ಧವಾದ ಪರಾಕ್ರಮದಿಂದ ಕೂಡಿ, ಮುಂಗಾಲ್ಗಳನ್ನು ಮುಂದಕ್ಕೆ ಚಾಚಿ, ನಖಗಳಿಂದ ಅಪ್ಪಳಿಸಿ, ಗರ್ವದಿಂದ ಭಯಂಕರವಾಗಿ ಗರ್ಜಿಸುತ್ತಾ, ಮೇಲೇರಿಬಂದ ಸಿಂಹವನ್ನು "ಬೀಳ್" ಎನ್ನುತ್ತಾ ಮಹಾದ್ಭುತ ಪರಾಕ್ರಮಿಯಾದ ಒಬ್ಬ ಹಿರಿಯ ಬೇಡನು ಕೋಪಗೊಂಡು ಸಿಂಹದ ತಲೆಯು ನೆಲದಲ್ಲಿ ಬೀಳುವಹಾಗೆ ಖಡ್ಗದಿಂದ ಹೊಡೆದನು. ವಚನ : ಈ ರೀತಿಯಲ್ಲಿ ಇಂದ್ರಕೀಲ ಪರ್ವತ ವನಪ್ರಾಂತದಲ್ಲಿ ಕಿರಾತದೇವತೆಗಳು ಹಲವು ಬಗೆಯ ಬೇಟೆಗಳನ್ನಾಡುತ್ತಿರಲು ೬೪. ಫಾಲನೇತ್ರನಾದ ಶಿವನು ಸುಂದರವಾಗಿದ್ದ ಪಾರಿಜಾತವೃಕ್ಷದ ಪರಿಸರದ ನೆರಳಿನಲ್ಲಿ ನಿಂತು, ಚಂದ್ರಕಾಂತಶಿಲೆಯ ಗದ್ದುಗೆಯ ತಾವಿನಲ್ಲಿ ಹೂಗೊಂಚಲೊಂದನ್ನು ಹಿಡಿದು ಪದೇ ಪದೇ ಮೂಸುತ್ತಿದ್ದನು. ಶುಭಂಕರಿಯಾದ ಶಬರಿಯ ವೇಷವನ್ನು ಧರಿಸಿದ್ದ ಪಾರ್ವತಿಯು ಕೆಂಪುಚಿಗುರಿನ ದೊಡ್ಡ ಬೀಸಣಿಗೆಯನ್ನು ಹಿಡಿದು, ಪ್ರೀತಿಯಿಂದ ಗಾಳಿಯನ್ನು ಬೀಸುತ್ತಿದ್ದಳು. ಬೇಟೆಯ ಹೊಸ ಬಗೆಯ ವಿನೋದವನ್ನು ವೀಕ್ಷಿಸುತ್ತಾ ಶಿವನು ಕಣ್ಗೊಳಿಸಿದನು.

ಗದ್ಯ ಇದು ನಿಖಿಲ[೧] ಭುವನೈಕವಲ್ಲಭ ಸುರಾಸುರೇಂದ್ರವರದ ಕರುಣಾವರಣ ಪರಮ ಶಿವಲಿಂಗ ತರುಣಪತಂಗಸಂಗತ ಮಂಗಳಹೃದಯಾರವಿಂದಬಂಧುರ ಸರಸಜ್ಞನ[೨]ಮಾನಿತೋಭಯ ಕವಿತಾ ವಿಚಕ್ಷಣ[೩] ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳ ಪ್ರಬಂಧದೊಳ್ ಆರಣ್ಯ ಮೃಗಯಾವರ್ಣನಂ ತೃತೀಯಾಶ್ವಾಸಂ ಪರಿಸಮಾಪ್ತಂ.

ಗದ್ಯ : ಈ ಗದ್ಯ ಪದ್ಯಾತ್ಮಕವಾದ ಚಂಪೂಪ್ರಬಂಧವು ಸಮಸ್ತಲೋಕಗಳಿಗೂ ಏಕ ಮಾತ್ರ ಪ್ರಭುವೂ, ದೇವ ದಾನವೇಂದ್ರರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸುವವನೂ, ದಯಾಕವಚನೂ, ಶ್ರೇಷ್ಠನೂ, ಶುಭ ಚಿನ್ಹನಾದ ಮಹಾದೇವನೆಂಬ ತರುಣಭಾಸ್ಕರ ನೊಡಗೂಡಿದ ನಿರ್ಮಲಚಿತ್ತವೆಂಬ ತಾವರೆಯಿಂದ ಶೋಭಿತನೂ, ರಸಜ್ಞರಾದ ವಿದ್ವಾಂಸರಿಂದ ಪುರಸ್ಕೃತನೂ, ಕನ್ನಡ ಸಂಸ್ಕೃತಭಾಷೆಗಳೆರಡರಲ್ಲೂ ಕವಿತಾಕೌಶಲ ವುಳ್ಳವನೂ ಆದ ಶ್ರೀ ಷಡಕ್ಷರದೇವನೆಂಬ ಕವಿಯಿಂದ ವಿರಚಿತವಾದ ಕಿರಾತರುದ್ರ ಲೀಲಾ ಕಥನ ಮಹಾಕೃತಿಯಲ್ಲಿ ಅರಣ್ಯಮೃಗಯಾ ವರ್ಣನವೆಂಬ ಮೂರನೆಯ ಆಶ್ವಾಸವು ಸಮಾಪ್ತವಾದುದು.

---

೧ ಸಮಸ್ತ (ಚ, ಜ) ೨ ಸರಸಜನ (ಯ) ೩ ವಿಶಾರದ (ಯ)

# ಚತುರ್ಥಾಶ್ವಾಸಂ

ಶ್ರೀಕಾತ್ಯಾಯನಿಯರಸಂ
ಗೋಕರ್ಣಾಧೀಶಕಟಕನನುಪಮನಭವಂ
ಲೋಕೈಕಪ್ರಭು ಪರಮಕೃ
ಪಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವಚನ ಮತ್ತಮಾಗಳ್

ಚಂಪಕ ಅತಿಬಳ ಮೂಕದಾನವನೆನಿಪ್ಪವನೊರ್ವನಖರ್ವಗರ್ವಸಂ
ಯುತನವನೀಧರೇಂದ್ರದ ನಿತಂಬದಿಱುಂಬಿನೊಳಿರ್ದು ನಿರ್ಜರ
ಪ್ರತತಿಯ ಪರ್ಬಿದಬ್ಬರಮನಾಲಿಸಿ ತಿಂದಪೆನೀ ಸುಪರ್ವಸಂ
ತತಿಯನೆನುತ್ತೆ ತಾಳ್ದು ಪೊಱಮಟ್ಟನುದಗ್ರವರಾಹರೂಪಮಂ ೨

ಇದು ಸಿರದಲ್ಲಿ ಕೋಡೊಗೆಯದಂತಕಸೈರಿಭಮೋ ಬಟಿಕ್ಕಮಿಂ
ತಿದು ಭರಿಕೆಯ್ಯನಾನದ ಮಹಾಗಜದಾನವನೋ ವಿಚಾರಿಪಂ
ತಿದು೧ ನಡೆಗಲ್ತು ಸಂಚರಿಪ ಮೇಚಕಶೈಲಮೊ ಸಾರ್ದು ನೋಟ್ಪೊಡಿಂ
ತಿದು ಪೃಥುಕಾಯಸೂಕರನೊ ಪೇಟೆನೆ ತೋಱಿದುದಾ ವರಾಹಕಂ ೩

೧. ಶ್ರೀ ಕಾತ್ಯಾಯಿನಿಯರಮಣನೂ, ಆದಿಶೇಷನನ್ನು ಕಡಗದಂತೆ ಆಭರಣವಾಗಿ ಧರಿಸಿದವನೂ, ಉಪಮಾತೀತನೂ, ಅಭವನೂ, ಸಕಲ ಲೋಕಗಳಿಗೆ ಏಕಮಾತ್ರ ಪ್ರಭುವೂ, ಪರಮಕರುಣಾನಿಧಿಯೂ, ಮಂಗಳಾತ್ಮಕನೂ ಆದ ಪರಮೇಶ್ವರನು ನಮಗೆ ಸುಖಪ್ರದನಾಗಲಿ. (ಗೋಕರ್ಣ=ಸರ್ಪ) ವಚನ : ಮತ್ತೆ ಆಗ ೨. ಇಂದ್ರಕೀಲ ಪರ್ವತದ ತಪ್ಪಲಿನ ಕೊರಕಲಿನಲ್ಲಿದ್ದ ಮಹಾಪರಾಕ್ರಮಿಯೂ, ಗರ್ವೋದ್ಧತನೂ ಆದ ಮೂಕನೆಂಬ ರಾಕ್ಷಸನು ದೇವಸಮೂಹದ ಆರ್ಭಟವನ್ನು ಕೇಳಿ "ಈ ದೇವತೆಗಳ ಸಮೂಹವನ್ನು ನುಂಗಿಬಿಡುವೆನು" ಎನ್ನುತ್ತಾ, ಒಂದು ಭಯಂಕರವಾದ ಹಂದಿಯ ಆಕಾರವನ್ನು ಕೈಗೊಂಡು, ಹೊರಟುಬಂದನು. ೩. ನುಗ್ಗಿಬರುತ್ತಲಿದ್ದ ಪ್ರಾಣಿಯು, ಇದು ನೆತ್ತಿಯಲ್ಲಿ ಕೊಂಬುಗಳಿಲ್ಲದ ಯಮನ ಕೋಣವೋ ? ಸೊಂಡಿಲಿಲ್ಲದ ಗಜಾಸುರನೆಂಬ ರಾಕ್ಷಸನೋ ? ಅಥವಾ ನೆಡೆದಾಡುವುದನ್ನು ಕಲಿತು ನುಗ್ಗುತ್ತಿರುವ ಕಪ್ಪಾದ ಪರ್ವತವೋ ? ಗಮನಿಸಿ ನೋಡಿದರೆ, ಇದು ದೊಡ್ಡಗಾತ್ರದ ಹಂದಿಯೋ ?

---

೧ ಏದು (ಯ)

ಮತ್ತೇಭ ಬಡಬಜ್ವಾಲೆಯೆ ವಿಸ್ಫುಲಿಂಗತತಿಯೆಂಬಂತಿರ್ಪ ಕಣ್ ಚಕ್ರದಿ
ರ್ಕಡೆಯಂ ಬಾಯೊಳಿಟುಂಕಿದಂತೆ ಪೊಳೆಪಿಂ ಕೊಂಕಿರ್ದ ಕೂರ್ದಾಡೆಗೆ ಬಲ್
ಸಿಡಿಲುದ್ಯದ್ದ್ರವಮಾಳ್ಪ ಭೀಕರಮುಖಂ ಕಲ್ಪಾಬ್ದಮಂ ಪೋಲ್ವ ಕಾ
ರೊಡಲತ್ಯದ್ಭುತಮಾಗೆ ಬಂದುದು ಮಹಾರೋಪಾಕರಂ ಸೂಕರಂ ೪

ಚಂಪಕ ಖರಖುರಘಾತದಿಂದೆ ಪುಡಿಯೇಟಿ ಶಿಲಾತಳವೊತ್ತಿ ಮೆಟ್ಟೆ ಮೆ
ಯ್ಯೊರಸೆ ಬೃಹತ್ಕುಜಪ್ರತತಿ ನುರ್ಗೆ ವಿಜೃಂಭಣಮಾಳ್ಪ ಗರ್ಜಿಸು
ತ್ತುರುತರಪರ್ವತಂ ಪ್ರತಿರವಂಗುಡೆ ಬೆರ್ಚಿಸಿ ತನ್ನಗೇಂದ್ರಕಂ
ದರಮೃಗರಾಜಿಯಂ ಜವದಿನೇೞ್ತರುತಿರ್ದುದು ಸೊರ್ಕಿದೆಕ್ಕಲಂ ೫

ವಚನ ಆ ಕಟಕದೊಳಿಂತು ಬರ್ಪ ಕಿಟಿಯಂ ಕಟ್ಟನೆ ಕಂಡು

ಚಂಪಕ ಎಲೆ ಎಲೆ ಪಂದಿ ಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ
ಬಲಿಗೊಳಲೆಂದು ಮೃತ್ಯು ಕಿಟಿರೂಪಮನಾಳ್ದವೊಲೊತ್ತು ಪತ್ತು ನಿಲ್
ತೊಲಗದಿರಟ್ಟು ಕುಟ್ಟು ತಿವಿ ಕೊಲ್ ತಱಿ ಗೋಣ್ಮುಱಿ ತುತ್ತುಱಿಸೀಳ್ ಪಳಂ
ಚಲಸದೆ ಪ್ರೋಯ್ ಕರುತ್ತಿಱಿಯೆನಿಪ್ಪ ರವಂ ಪಿರಿದಾಯ್ತು ಬೇಡರೊಳ್ ೬

ಎನ್ನುವ ರೀತಿಯಲ್ಲಿ ಕಾಣುತ್ತಿದ್ದಿತು. ೪. ನೋಡುವುದಕ್ಕೆ ಮಹಾಭಯವಾಗುವಂತೆ ಬಹಳ ಕೋಪದಿಂದ ಹಂದಿಯು ನುಗ್ಗಿತು. ಬಡಬಾಗ್ನಿಜ್ವಾಲೆಯ ಕಿಡಿಗಳಂತೆ ಅದರ ಕಣ್ಣುಗಳಿದ್ದುವು. ವಿಷ್ಣುವಿನ ಚಕ್ರಾಯುಧದ ಎರಡು ತುಂಡುಗಳನ್ನು ಬಾಯಲ್ಲಿ ಕಚ್ಚಿ ಹಿಡಿದಂತೆ ಬಾಗಿ ಹೊಳೆಯುತ್ತಿದ್ದ ಅದರ ಕೋರೆದಾಡೆಗಳು, ಬರಸಿಡಿಲಿನಂತೆ ಆರ್ಭಟಿಸುತ್ತಾ ಗುಟುರು ಹಾಕುವ ಭೀಕರವಾದ ಬಾಯಿ, ಪ್ರಳಯ ಮೇಘದಂತಿದ್ದ ಕಪ್ಪಾದ ದೊಡ್ಡ ದೇಹ ಇವುಗಳಿಂದ ಕೂಡಿದ್ದ ಆ ಹಂದಿಯು ಭೀತಿಯುಂಟುಮಾಡುತ್ತಿದ್ದಿತು. ೫. ಹರಿತವಾಗಿದ್ದ ಗೊರಸುಗಳ ತುಳಿತಕ್ಕೆ ಸಿಕ್ಕಿ ಬಂಡೆಗಳು ಚೂರ್ಣವಾಗಿ ಧೂಳೆಗರುತ್ತಿದ್ದಿತು ; ಆ ವರಾಹವು ಮೈಯನ್ನು ತಿಕ್ಕಲು, ದೊಡ್ಡ ದೊಡ್ಡ ವೃಕ್ಷಗಳು ಬುಡ ಮೇಲಾಗಿ ಉರುಳುತ್ತಿದ್ದುವು. ದಿಗ್ಭಿತ್ತಿಗಳನ್ನು ವ್ಯಾಪಿಸುವಂತೆ ಆರ್ಭಟಿಸುತ್ತಿದ್ದ ಹಂದಿಯ ಗುಟುರಿಗೆ ಇಂದ್ರಕೀಲಪರ್ವತವು ಪ್ರತಿಧ್ವನಿಸುತ್ತಿದ್ದಿತು. ಕೊಬ್ಬಿ ಗರ್ವದಿಂದ ನುಗ್ಗುತ್ತಿದ್ದ ಆ ಹಂದಿಗೆ ಮೃಗಗಳು ಹೆದರಿ ಓಡಿಹೋಗುತ್ತಿದ್ದುವು. ವಚನ : ಆ ತಪ್ಪಲಿನಿಂದ ಬರುತ್ತಿದ್ದ ಕಾಡುಹಂದಿಯನ್ನು ಇದ್ದಕ್ಕಿದ್ದಂತೆ ನೋಡಿ ೬. "ಎಲೆ, ಎಲೆ, ಹಂದಿ, ಹಂದಿ, ಬಂತು, ಬಂದೇಬಿಟ್ಟಿತು. ಬೇಡರನ್ನೆಲ್ಲಾ ಬಲಿ ತೆಗೆದುಕೊಳ್ಳುವ ಮೃತ್ಯು ಹಂದಿರೂಪದಲ್ಲಿ ಬರುತ್ತಿದೆ. ಮುಂದೆ ನುಗ್ಗಿ : ಮೇಲೆ ಬೀಳಿ : ಧೈರ್ಯದಿಂದ ಎದುರಾಗಿ ನಿಲ್ಲಿ : ಓಡಿಸಿ ; ಹೊಡೆಯಿರಿ ; ತಿವಿಯಿರಿ ; ಕೊಲ್ಲಿ ; ಕೊರಳನ್ನು ಕತ್ತರಿಸಿ, ಚುಚ್ಚಿರಿ, ಸೀಳಿ, ಬಾರಿಸಿ, ಬಡಿಯಿರಿ, ಗುರಿಯಿಟ್ಟು ತಿವಿ" ಎಂಬ ಬೇಡರ ಮಾತುಗಳ ಬೊಬ್ಬೆಯೇ

---

೧ ಕೋರ್ದಾಡೆ (ಚ) ೨ ಕುತ್ತು (ಯ)

ವಚನ ಎಂದು ಸೌಂರಂಭದಿಂ ಮುಟ್ಟಿ ಮೂದಲಿಸುತ್ತೊಟ್ಟಜೆಯಿಂ ತೊಟ್ಟನಿಟ್ಟಿಗಳಂ ತಾಳ್ದು ಕಟ್ಟುಬ್ಬಟೆಯಿಂ ಕವಿದ ದಿಟ್ಟಬಿಯದರ ಪರ್ಬಿದಬ್ಬರಮನಾಲಿಸಿ ಕನಲ್ಕೆ ಮಿಗೆ ದಾಡೆಯಂ ಮಸೆದಂಡುಗೊಂಡು ತೃಣವಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಪಟುತರಶೌರ್ಯದಿಂ ಪುಳಿಂದ ನಿಳಿಂಪರ್ಗಭಿಮುಖಮಾಗಿ ನಿಂದು

ಚಂಪಕ ನಡುಗೆ ಧರಿತ್ರಿ ದಿಕ್ಕರಿಗಳಳ್ಕೆ ಭಯಂಗೊಳೆ ಸತ್ತ್ವಸಂಕುಳಂ
ಪಡಲಿಡೆ ಶೈಲಶೃಂಗತತಿ ತುಳ್ಕೆ ಮಹಾಬ್ಧಿ ಕರಾಳಘೋಷದಿಂ
ಘುಡುಘುಡಿಸುತ್ತೆ ದಾಡೆಗಡಿದುರ್ಬಿ ಕಡಂಗುತೆ ಕಾಯ್ಪುವೆತ್ತು ಕಣ್
ಗಡೆ ಕಿಡಿಸೂಸೆ ನೋಡಿದುದು ನಿಂದು ಪುಳಿಂದರನುಗ್ರಸೂಕರಂ ೭

ಪೊಗೆ ಪೊಜಸೂಸೆ ಘೂರ್ಮಿಸುವ ಮೂಗಿನೊಳೀಕ್ಷಿಪ ಲೋಹಿತಾಕ್ಷಿಯಿಂ
ಭುಗಿಲೆನೆ ಪೊಣ್ಮೆ ದಳ್ಳುರಿ ಕರಂ ಮಸೆದಗ್ಗದ ದಾಡೆಯುಗ್ರದಿಂ
ದುಗುತಿರೆ ತೋರಕೆಂಗಿಡಿಗಳುಗ್ರತೆಯಿಂ ತಳೆದುರ್ಕೆ ಸೊರ್ಕಿನಿಂ
ದಗಲದೆ ನುಂಗಲಪ್ಪಳಿಸಿದತ್ತು ವರಾಹಕನಾ ಕಿರಾತರಂ ೮

ಹೆಚ್ಚಾಗಿದ್ದಿತು. ವಚನ : ಹೀಗೆಂದು ಬೇಡರು ಸಡಗರದಿಂದ ಒಬ್ಬರನ್ನೊಬ್ಬರು ಹುರಿದುಂಬಿಸುತ್ತಲೂ, ಹೀಯಾಳಿಸುತ್ತಲೂ, ಗುಂಪುಗೂಡಿ ಬೇಗನೆ ಈಟಿಗಳನ್ನು ಹಿಡಿದು, ಧೈರ್ಯದಿಂದಲೂ, ಪರಾಕ್ರಮದಿಂದಲೂ ಮುಂದೆ ನುಗ್ಗಿದರು. ಅವರ ಅಬ್ಬರವನ್ನು ಕೇಳಿ ಹಂದಿಯು ಕೋಪದಿಂದ ಹಲ್ಲುಗಳನ್ನು ಕಡಿಯುತ್ತಾ, ಹುಲ್ಲನ್ನು ಕಚ್ಚಿ ತುಂಡು ಮಾಡುತ್ತಾ, ಬಾಲವನ್ನು ನೆಟ್ಟಗೆ ಮಾಡಿ ಮೇಲಕ್ಕೆತ್ತಿಕೊಂಡು, ಕಾಲುಗಳನ್ನು ಹಿಂದಕ್ಕೂ ಮುಂದಕ್ಕೂ ಆಡಿಸುತ್ತಾ, ಮಹಾ ಪರಾಕ್ರಮದಿಂದ ಬೇಡರ ರೂಪದಲ್ಲಿದ್ದ ದೇವತೆಗಳಿಗೆ ಎದುರಾಗಿ ನಿಂತಿತು. ೭. ಭಯಂಕರವಾಗಿ ಆರ್ಭಟಿಸಿ ಗುಟುರಿಕ್ಕುತ್ತಾ, ಕೋರೆಹಲ್ಲುಗಳನ್ನು ಮಸೆಯುತ್ತಾ, ಮೈಯನ್ನು ಉಬ್ಬಿಸಿ, ಸಡಗರದಿಂದಲೂ, ಕೋಪ ದಿಂದಲೂ ಕಾವೇರಿ ಕಣ್ಣುಗಳಲ್ಲಿ ಕಿಡಿಯು ಚೆಲ್ಲುತ್ತಿರಲು, ಭೀಕರವಾಗಿದ್ದ ಆ ಹಂದಿಯು ಬೇಡರನ್ನು ದುರುಗುಟ್ಟಿ ನೋಡಿತು. ಆಗ ಭೂಮಿಯು ನಡುಗಿತು. ದಿಗ್ಗಜಗಳು ಹೆದರಿದುವು. ಅರಣ್ಯದಲ್ಲಿದ್ದ ಪ್ರಾಣಿಗಳು ಭಯಗೊಂಡವು. ಬೆಟ್ಟದ ತುದಿಯಿಂದ ಬಂಡೆಗಳುರುಳಿದುವು. ಮಹಾಸಾಗರವು ಉಕ್ಕೇರಿ ತುಳುಕಾಡಿತು. ೮. ಹೂಂಕರಿಸು ವುದರಿಂದ ಆ ಹಂದಿಯ ಮೂಗಿನ ಹೊಳ್ಳೆಗಳು ಅದುರುತ್ತಿದ್ದುವು. ಅದರಿಂದ ಹೊಗೆಯು ನುಗ್ಗಿಬರುತ್ತಿದ್ದಿತು. ದಿಟ್ಟಿಸುತ್ತಿದ್ದ ಕೆಂಗಣ್ಣುಗಳಿಂದ ಭಗ್ಗೆಂದು ದೊಡ್ಡ ಜ್ವಾಲೆಯೇಳುತ್ತಿದ್ದಿತು. ಚೆನ್ನಾಗಿ ಮಸೆಯುತ್ತಿದ್ದ ದವಡೆಹಲ್ಲುಗಳಿಂದ ದೊಡ್ಡ ಬೆಂಕಿಯ ಕಿಡಿಗಳು ಚಿಮ್ಮುತ್ತಿದ್ದುವು. ಮಹಾಕ್ರೌರ್ಯದಿಂದಲೂ, ದರ್ಪದಿಂದಲೂ, ಕೂಡಿ, ನಿಂತಲ್ಲಿಂದ ಕದಲದೆ, ಬೇಡರನ್ನು ಬೆದರಿಸಿ ನುಂಗಲು ಸನ್ನಾಹ ಮಾಡಿತ್ತು.

---

೧ ಸಂ (ಯ) ೨ ತರೆ (ಯ)

ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಯ ರೋಮಮಾ
ರ್ಪೆಸೆವ ಮಸಂ ಮರಲ್ದ ಕಿವಿ ಮಿಳ್ಳಿಱಿದಾಡುವ ಬಾಲಮುರ್ವಿ ಪಾ೧
ಯುಪ್ಪಿಸಿರೊಡನೆಟ್ಟಿರ್ದ ಬೆನ್ ಬಲಿದ ಗೋಣ್ ಕಿಡಿಪಾಱುವ ದಾಡೆ ೨ತಳ್ತಗ್ಗು
ರ್ವಿಸೆ೨ ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ ೯

ಟೊಣೆದವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ
ಕ್ಷಣದೊಳಿದಿರ್ಚಿ ತುಂಡಿಸಿ ಕುರುತ್ತಿಱಿವಿಟ್ಟಿಯು೩ನಂಡುಗೊಂಡು ಬಿ
ನ್ನಣದೆ ಬಿದಿರ್ಚಿ ನಿರ್ಭರದೆ ಪೆರ್ಬಲೆಯುಂ ಪಱಿದಿಕ್ಕಿ ಕೇಣದಿಂ
ಕೆಣಕಿದ ಧೀವರಾಮರರನೆಕ್ಕಲನುರ್ಬುತೆ ಸೀಳ್ದುದಾರ್ಪಿನಿಂ ೧೦

ವಚನ ಮತ್ತಂ

ಚಂಪಕ ನೆರೆದಿದಿರಾದೊಡಟ್ಟುವ ಪೊದಟ್ಟಿರೆಯಟ್ಟಿದೊಡಂಡುಗೊಳ್ವ ಪಾ
ಯ್ತರೆ ಮುಸುಡೆತ್ತಿ ಗರ್ಜಿಪ ಕೆಲಂದೊಲಗುತ್ತಿರೆ ದಾಡೆಗುಟ್ಟಿ ನಿ
ರ್ಭರದೆ ಪಳಂಚಲಪ್ಪಳಿಪ ಬೊಬ್ಬಿಱಿಯುತ್ತಿರೆ ಮೆಯ್ಯ ರೋಮಮು
ಬ್ಬರಿಸೆ೪ ಕಡಂಗಿ ನಿಲ್ವ ಬಗೆ ಮೊಕ್ಕಳಮಾದುದು ಸೂಕರೇಂದ್ರನಾ ೧೧

೯. ತಲೆಯನ್ನು ತಗ್ಗಿಸಿಕೊಂಡು, ಬಲವಾದ ಮೂತಿಯನ್ನು ಪಕ್ಕಕ್ಕೆ ಬಾಗಿಸಿ, ಮೈಯಲ್ಲಿನ ಕೂದಲು ನೆಟ್ಟಗಾಗಿರಲು, ಸ್ವಸಾಮರ್ಥ್ಯವನ್ನು ನೆಚ್ಚಿದ್ದ ಮನಸ್ಸಿನಿಂದಲೂ, ನಿಮಿರಿ ನೆಟ್ಟಗಾದ ಕಿವಿಗಳಿಂದಲೂ, ಬಡಿದು ಬೀಸುತ್ತಲಿದ್ದ ಬಾಲದಿಂದಲೂ, ಉಸಿರಿನಾಟದಿಂದ ಹಿಗ್ಗುತ್ತಿದ್ದ ಮೂಗಿನಿಂದಲೂ, ಬೆನ್ನನ್ನು ಮೇಲೆತ್ತಿ ಗಾತ್ರವಾಗಿದ್ದ ಕೊರಳು, ಕಿಡಿಗಳು ಸಿಡಿಯುತ್ತಿದ್ದ ದವಡೆಹಲ್ಲುಗಳು ನೋಡಿದರೆ ಭಯವನ್ನುಂಟುಮಾಡುತ್ತಿರಲು, ಕೋಪದಿಂದ (ಬೇಡರ) ಮೇಲೆ ಬೀಳಲು (ಹಂದಿಯು) ಓಡಿಬಂದಿತು. ೧೦. ಬೇಡರು ಹಂದಿಯನ್ನು ಕೆಣಕುತ್ತಾ, ಹರಿತವಾದ ಬಾಣಗಳನ್ನು ಪ್ರಯೋಗಿಸಿದರು. ಬೇಟೆಯ ನಾಯಿಗಳು ಮುತ್ತಿದುವು. ಹಂದಿಯು ಅವುಗಳನ್ನು ಎದುರಿಸಿ ನಿಮಿಷದಲ್ಲಿಯೇ ಕತ್ತರಿಸಿ ತುಂಡು ಮಾಡಿತು. ಗುರಿಯಿಟ್ಟು ಈಟಿಗಳಿಂದ ತಿವಿಯಲು, ಅವನ್ನು ಜಾಣ್ಮೆಯಿಂದ ಝಾಡಿಸಿ ಬಿಟ್ಟಿತು. ದೊಡ್ಡ ಬಲೆಗಳನ್ನೊಡ್ಡಲು, ಅದನ್ನು ಹರಿದುಬಿಟ್ಟಿತು. ಧೈರ್ಯದಿಂದಲೂ ಪ್ರತಾಪದಿಂದಲೂ ಕೆಣಕಿದ ಕಿರಾತರೂಪಿನ ದೇವತೆಗಳನ್ನು ಪರಾಕ್ರಮದಿಂದ ಉದ್ಧತವಾಗಿದ್ದ ಆ ಕಾಡುಹಂದಿಯು ಸೀಳಿಹಾಕಿತು. ವಚನ: ಅಲ್ಲದೆ ೧೧. ಗುಂಪಾಗಿ ನುಗ್ಗಿಬಂದ ಬೇಡರನ್ನು ಹಂದಿಯು ಓಡಿಸಿಕೊಂಡು ಹೋಯಿತು. ಮಧ್ಯಮಾರ್ಗದಲ್ಲಿ ಇದಿರುಬಿದ್ದರೆ, ಅಲ್ಲಿಂದ ಕದಲದೆ ಕೂತುಬಿಟ್ಟಿತು. ಮೇಲೆಬಿದ್ದರೆ ಮುಸುಡನ್ನೆತ್ತಿ ಗರ್ಜಿಸುತ್ತಿದ್ದಿತು. ಬೇಡರು ಪಕ್ಕಕ್ಕೆ ಸರಿಯಲು, ಕೋರೆದಾಡೆಗಳನ್ನು ಮಸೆಯುತ್ತಾ ಅವರನ್ನು ಅಪ್ಪಳಿಸಲು ಧೈರ್ಯದಿಂದ ಮುನ್ನುಗ್ಗುತ್ತಿದ್ದಿತು. ಕಿರಾತರು ಬೊಬ್ಬೆಯಿಟ್ಟು

---

೧ ಪೊ (ಗ, ಚ, ಜ) ೨–೨ ತಳ್ತು ಗೂ! ರ್ವಿಸೆ (ಕ, ಗ, ಜ) ೩ ದಿಟ್ಟೆಯ (ಕ) ೪ ರಿಸಿ (ತ, ಯ)

ಮಲೆವ ಮರಲ್ವಱೊಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ೧ ಕೆಂ
ಗಲಿಪ ಕಟಾಕ್ಷದಿಂದದಱೆ ನೋಡುವ ಕಾಡುವ ದಾಡೆಗುಟ್ಟುವ
ಗ್ಗಲಿಸಿ ತೊಡಂಕುವಬ್ಬರಿಸಿ ಪತ್ತುವ ಸುತ್ತುವ ಘೂರ್ಮಿಸುತ್ತೆ ಸಂ
ಚಲಿಪ ಧರಿತ್ರಿಯುಂ ಟೊಣೆವ ಸೂಕರನಾಟಮದೇನಳುಂಬಮೋ ೧೨

ತಿರುಗುತ್ತೊಂದೆರಡಡಿಯುಂ
ಭರದಿಂ ನೋಡುತ್ತೆ ನಿಲುತೆ ಘೂರ್ಮಿಸುತುಂ ಕೊ
ಕ್ಕರಿಸುತಿದಿರಾಂತು ವಿಸಟಂ
ಬರಿದುದು ಸುರರಿದಿರೊಳರರೆ ಘೋರವರಾಹಂ ೧೩

ಮುತ್ತಿದರಮರ್ತ್ಯಲುಬ್ಧಕ
ರೆತ್ತಂ ಘಡಘಡಯೆನುತ್ತೆ ಕೂರ್ಗಣೆವಱೆಯುಂ
ಸುತ್ತಿಱಿದು ಕಱಿದರಾರ್ದೊದ
ರುತ್ತಸಿಱಿಯುಂ ಜಡಿದು ಝುಂಕಿಸುತ್ತಿದಿರಾದರ್ ೧೪

ಇಱಿ ಬರಿಸಿಯುಂ ತರಿ ಕೂರಲಂ
ಮುಱಿ ಮೂಳೆಯನಡಗನುಗಿಯೆನುತ್ತಸವಸದಿಂ
ನೆಱೆ ಸುತ್ತಿದರಿರದೊತ್ತಿದ
ರುಱೆ ಮುತ್ತಿದರಮರಲುಬ್ಧಕರ್ ಪಟುಕಿಟಿಯುಂ ೧೫

ಗದ್ದಲಮಾಡಿದರೆ ಮೈಕೂದಲನ್ನು ನೆಟ್ಟಗೆ ಮಾಡಿಕೊಂಡು ಸಿದ್ಧವಾಗಿ ನಿಲ್ಲುತ್ತಿದ್ದಿತು. ಹಂದಿಯ ಈ ರೀತಿಯ ವರ್ತನೆ ವಿಚಿತ್ರವಾಗಿದ್ದಿತು. ೧೨. ಮೇಲೆ ಬೀಳುವ, ಹಿಂದಕ್ಕೆ ಸರಿಯುವ, ಒಡಿಯುವ, ಮಲಗುವ, ಉಬ್ಬುವ, ಛಂಗನೆ ಹಾರಿ ಬರುವ, ಕೆಂಗಣ್ಣುಗಳಿಂದ ದುರುಗುಟ್ಟಿ ನೋಡುವ, ಪೀಡಿಸುವ, ಕಾಡಿಸುವ, ಬೊಬ್ಬಿರಿದು ಮೇಲೆ ಹಾರುವ, ಸುತ್ತಲೂ ತಿರುಗುವ, ಮೈಯನ್ನು ತೂಗುತ್ತಾ ಅಲೆದಾಡುವ, ನೆಲವನ್ನು ಕೆರೆಯುವ ಹಂದಿಯ ಚೇಷ್ಟೆಯು ಅತಿಶಯವಾಗಿದ್ದಿತು. ೧೩. ಆ ಭೀಕರವಾದ ಹಂದಿಯು ಒಂದೆರಡು ಹೆಜ್ಜೆ ಹಿಂದಿಕ್ಕುವುದು. ಮತ್ತೆ ಸರ್ರನೆ ಓಡಿ ನುಗ್ಗುವುದು, ನಿಲ್ಲುವುದು. ಸಡಗರದಿಂದ ಬಂದು ಕೆಣಕುವ ದೇವತೆಗಳನ್ನು ಎದುರಿಸಿ, ಆಶ್ಚರ್ಯವಾಗುವಂತೆ ಓಡಾಡುತ್ತಿದ್ದಿತು. ೧೪. ದೇವಕಿರಾತರು ಹಂದಿಯನ್ನು ಎಲ್ಲಾ ಕಡೆಗಳಿಂದಲೂ ಮುತ್ತಿ, "ಘಘಾ", "ಘಡ",, ಎನ್ನುತ್ತಾ ಆರ್ಭಟಿಸಿ ಚುಚ್ಚಿದರು. ನಿಶಿತವಾದ ಬಾಣಗಳ ಮಳೆಯನ್ನು ಸುರಿಸಿದರು. ಅಬ್ಬರವನ್ನು ಮಾಡುತ್ತಾ, ಕತ್ತಿಗಳನ್ನು ಝುಳಪಿಸುತ್ತಾ, ಬೆದರಿಸುತ್ತಾ ಎದುರಿಸಿದರು. ೧೫. ವ್ಯಾಧವೇಷದಲ್ಲಿದ್ದ ದೇವತೆಗಳು ಬಲಿಷ್ಠವಾದ ಹಂದಿಯನ್ನು, "ಮಗ್ಗುಲನ್ನು ತಿವಿಯಿರಿ", "ಕತ್ತನ್ನು ಕತ್ತರಿಸಿ", "ಮೂಳೆಗಳನ್ನು ಮುರಿಯಿರಿ", "ಮಾಂಸವನ್ನು ಬಗೆಯಿರಿ" ಎಂದು ಆರ್ಭಟಿಸುತ್ತಾ, ಸುತ್ತುಗಟ್ಟಿದರು.

---

೧ ಪಾಯ್ದು (ಚ) ೨ ರುತ್ತರಿ (ಯ) ೩ ಬದಿ (ಕ, ಗ)

ವಚನ ಆಗಳವರ ಸುರಂಭಮುಂ ಕಂಡು ರೋಷಾವೇಶಮುಂ ಕೆಯ್ಕೊಂಡು ದಾಡೆಗಡಿದು ಮಾರ್ಮಲೆತು ಮಾಮಸಕಂ ಮಸಗಿ

ಚಂಪಕ ಒದೆದು ಧರಿತ್ರಿಯುಂ ನೆಱಿ ಪುಟಂ ನೆಗೆದವ್ವಳಿಸುತ್ತೆ ತುಂಡಮುಂ
ಬಿದಿರ್ದು ಕಡುಂಗಿ ಗರ್ಜಿಸಿ ಘನಾಘನನಿಸ್ವನದಿಂ ತುಡುಂಕಿ ಪೊ
ಯ್ದುದು ಕುಡುದಾಡೆಯಿಂದಿಱಿದುದೆತ್ತಿದುದಿರ್ಬಗಿಯಾಗಿ ಕಾಯಮೊ
ಟ್ಟಿದುದುವರಟ್ಟಿಯುಂ ಕೊಱೆದು ತಿಂದಃದು ತೇಗಿದುದುಗ್ರಸೂಕರಂ ೧೬

ಎಚ್ಚಂಬುಗಳವು ರೋಮಮ
ನುಚ್ಚಳಿಸಲ್ಕಾಱದಲ್ಲಿ ತೊಡರ್ದಿರೆ ಕೊಡಪು
ತ್ತಚ್ಚರಿಯ ಮುಳ್ಳಪಂದಿವೊ
ಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರಂ ೧೭

ವಚನ ಆಗಳೆಚ್ಚಂಬುಂ ಬಗೆಗೊಳದೆ, ಕನಲ್ಕೆಯಿಂ ಬಱಿಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ, ಮಿಡಿಯಿಂ ಸಿರಂಬರಮೆತ್ತಿ ಸೀಳ್ದು ಸದೆವ ಸಮದ ಸೂಕರ ನಸಮಸಮರಾಟೋಪಮಂ ಸೈರಿಸಲಾರದೆ ಕಣ್ಗೆಟ್ಟು ಬೆನ್ಗೊಟ್ಟೋಡಿ ಬರ್ಪಮರವ್ಯಾಧಸಂಘದಭಿಪಂ

ಬೇಗನೆ ಮೇಲೆ ಬಿದ್ದರು, ಒಡಿದರು. ವಚನ : ಆಗ ಬೇಡರ ಅಬ್ಬರವನ್ನು ನೋಡಿ, ಕೋಪದಿಂದ ಕುದಿದ ಹಂದಿಯು ಹಲ್ಲುಗಳನ್ನು ಕಡಿಯುತ್ತಾ, ಕ್ಷಣಕ್ಷಣಕ್ಕೂ ಕೋಪ ವುಕ್ಕುತ್ತಿರಲು ಎದುರುಬಿದ್ದಿತು. ೧೬. ಕ್ರೂರವಾದ ಹಂದಿಯು ಭೂಮಿಯನ್ನು ಮೆಟ್ಟಿ ತುಳಿಯುತ್ತಾ, ಮೇಲಕ್ಕೆ ನೆಗೆಯುತ್ತಾ, ಮುಂದೆ ನುಗ್ಗುತ್ತಾ, ಮೂತಿಯನ್ನು ಅಗಲವಾಗಿ ಕೆರೆಯುತ್ತಾ, ಮೇಘಗರ್ಜನೆಯಂತೆ ಗುಟುರು ಹಾಕುತ್ತಾ, ದೇವತೆಗಳನ್ನು ಬೆದರಿಸಿತು ; ಮೇಲೆ ಬಿದ್ದಿತು. ಕೋರೆದಾಡೆಯ ತುದಿಯಿಂದ ಅವರ ದೇಹವನ್ನು ತಿವಿದು, ಎರಡು ಹೋಳಾಗುವಂತೆ ಸೀಳಿ ಮೇಲಕ್ಕೆ ಎತ್ತಿತು. ಬೇಡರ ಹೆಣಗಳನ್ನು ಗುಡ್ಡೆಹಾಕಿತು ; ಬಗೆದು ತಿಂದಿತು ; ತಿಂದು ತೇಗಿತು. ೧೭. ಬೇಡರು ಬಿಟ್ಟ ಬಾಣಗಳು ಹಂದಿಯ ಮೈಯ ರೋಮವನ್ನೂ ಕೆತ್ತಲಾರದೆ, ಆ ಕೂದಲಿನಲ್ಲಿಯೇ ಸಿಕ್ಕಿಹಾಕಿ ಕೊಂಡಿರಲು, ಆಶ್ಚರ್ಯವಾಗುವ ರೀತಿಯಲ್ಲಿ ಮೈಯನ್ನು ಕೊಡವಿ, ಆ ಬಾಣಗಳನ್ನು ಉದುರಿಸುತ್ತಿದ್ದಿತು. ಅದು ಮುಳ್ಳುಹಂದಿಯು ಮೈಯನ್ನು ಝಾಡಿಸಿ, ತನ್ನ ದೇಹದ ಮುಳ್ಳುಗಳನ್ನು ಉದುರಿಸುವಂತಿದ್ದಿತು. ಈ ರೀತಿಯಲ್ಲಿ ಕಿರಾತರೂಪಿನ ದೇವತೆಗಳನ್ನು ಕೆಡವಿತು. ವಚನ : ಬೇಡರು ಕರೆಯುತ್ತಿದ್ದ ಬಾಣಗಳ ಮಳೆಯನ್ನು ಲೆಕ್ಕಿಸದೆ, ಕೋಪದಿಂದ ನುಗ್ಗಿ ಬಂದು, ಸುತ್ತುಗಟ್ಟಿ ಹಿಡಿಯಲೆತ್ನಿಸಿದ ಬೇಟೆನಾಯಿಗಳನ್ನು ಗಣನೆಗೆ ತಾರದೆ ತಿವಿದು, ತಲೆಯವರೆಗೂ ಕೋರೆದಾಡೆಯು ನಾಟುವಂತೆ ಮಾಡಿ ಸೀಳಿಕೊಂದಿತು. ಮದೋದ್ಧತವಾದ ಹಂದಿಯ ಹೋರಾಟದ ಆರ್ಭಟವನ್ನು ತಡೆಯಲಾರದೆ ಬೆನ್ನು ತೋರಿಸಿ ಓಡಿಬರುತ್ತಿದ್ದ ದೇವಕಿರಾತರ ಅಪಜಯವನ್ನು ಶಿವನು ಕಂಡನು. ದೇವತೆಗಳ

ಗಮಂ ಪಿಂಗಡೆಯೊಳಂಗನೆವೆರಸು ಬನದೊಳೊರ್ವನೆ ಬಿನದಿಪ ಕಪರ್ದಿ ಕಂಡು, ಕರುಣಂ ಪುಟ್ಟಿ, ಜವದಿಂದವರ್ಗಂಜದಿರಿವೇಂದಭಯಹಸ್ತಮಂ ನೆಗಪಿ ಮಡಿದವರ್ಗಸುವಿತ್ತು ಸಕ್ಷತಾಂಗರನಗಿಕ್ಷತಾಂಗರ ನಾಕ್ಷಣಂ ನೆಗಟ್ದು೧; ನೆಗಟ್ತಿವೆತ್ತ ನಿಜವಾಮಕರಕಲಿತಪ್ರಚಂಡಕೋದಂಡಕೋಟಿಯೊಳ್ ಮಂಜುಸಿಂಜಿ ನಿಯನಮರ್ಚಿ, ಕೆಯ್ಕೊಂಡು ತನ್ನನಗಲ್ದಲ್ಲಲ್ಲಿ ಸಂಚರಿಪ ಮನ್ನಣೆಯ ಗಣನಿವಹಂ ಕಳಕಳಮಂ ಕೇಳ್ದು ನಡೆತಂದೊಡನೆಯ್ತರೆ, ಮುಂದಣ್ಗೆ ಸಾರ್ದಮರರಂ ಬೆನ್ಗೊಳ್ವ ಸಂವರ್ತಸಮಯ ಯಮಮಹಿಷೋಪ ಮಾನನಾದ ಭೀಕರಾಕಾರ ೨ಮೂಕಾಸುರ೨ನಂ ತೊಟ್ಟನೆ ಕಟ್ಟಿದಿರೊಳ್ ಕಂಡು, ಕಾಯ್ಪುಗೊಂಡು ಚಂಡಧನುರ್ಗುಣಮಂ ನೀವಿ ಜೇವೊಡೆಯಿಯಲೊಡನೆ

ನಡುಗಿದುದಿಳೆ ಗಿರಿಶಿಖರಂ
ಕೆಡೆದುದು ಕದಡೆಟ್ದು ಜಡಧಿ ತುಳ್ಕಿದುದುಡುಗಳ್
ಬಿಡದುಳ್ಕಿದುಳಿವಹಿಪತಿ ಪೆಡೆ
ಯುಡುಗಿದನಿನಬಿಂಬಮದಿರ್ದುದಳ್ಕಿದರಹಿತರ್ ೧೮

ವಚನ ಮತ್ತಮಾಗಳ್

ಗಣತತಿ ಕಿಟಿಯಂ ಸದೆಯಲ್
ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ ನಿಲಿಸು
ತ್ತಣೆಯುರ್ವಭವಂ ತೆಗೆದಂ
ಡೊಣೆಯಿಂ ಪೊಗರುಗುವ ನಿಶಿತತರಮಾರ್ಗಣಮಂ ೧೯

ಈ ಪರಾಭವವನ್ನೂ, ಖಿನ್ನತೆಯನ್ನೂ ಹಿಂದುಗಡೆಯಲ್ಲಿ ಶಾಬರಿಯ ರೂಪಿನ ಗೌರಿ ಯೊಡನೆ ನಿಂತು ನೋಡುತ್ತಿದ್ದ ಶಂಕರನು ದಯೆಯಿಂದ ಕೂಡಿದವನಾಗಿ, ಆ ಕ್ಷಣ ಬೇಡರಿಗೆ "ಅಂಜದಿರಿ" ಎಂದು ಅಭಯವನ್ನಿತ್ತು, ತನ್ನ ಕಟಾಕ್ಷಮಾತ್ರದಿಂದಲೇ ಸತ್ತಿದ್ದ ದೇವತೆಗಳನ್ನು ಸಂಜೀವನಗೊಳಿಸಿ ಗಾಯಗೊಂಡವರನ್ನು ಗುಣಪಡಿಸಿದನು. ತನ್ನ ಕೈಯಲ್ಲಿ ಧರಿಸಿದ್ದ ಪ್ರಖ್ಯಾತವಾದ ಬಿಲ್ಲಿನ ತುದಿಗೆ ಸೊಗಸಾದ ಹೆದೆಯನ್ನು ಸೇರಿಸಿದನು. ಅಲ್ಲಲ್ಲಿ ದೂರದಲ್ಲಿ ಓಡಾಡುತ್ತಿದ್ದ ನೆಚ್ಚಿನ ಪ್ರಮಥರ ಗುಂಪು ಕೋಲಾ ಹಲವನ್ನು ಕೇಳಿ, ಸಮೀಪಿಸಿ ಕಿರಾತರುದ್ರನೊಡನೆ ಕೂಡಿದರು. ಮುಂದೆ ನಡೆದು ದೇವತೆಗಳನ್ನು ಬೆನ್ನಟ್ಟಿ ಪ್ರಳಯಕಾಲದ ಮೃತ್ಯುವಿನ ವಾಹನವಾದ ಕೋಣನಂತೆ, ಭಯಂಕರಸ್ವರೂಪನಾದ ಮೂಕಾಸುರನನ್ನು ಇದಿರಿನಲ್ಲಿಯೇ ಕಂಡು ಕೋಪಿಸಿ, ಬಲವಾದ ಹೆದೆಯನ್ನು ನೇವರಿಸಿ ಟಂಕಾರ ಶಬ್ದದೊಡನೆ ಜೇವಡೆಯಲು, ೧೮. ಭೂಮಿಕಂಪಿಸಿತು. ಇಂದ್ರಕೀಲಪರ್ವತದ ಕೋಡುಗಲ್ಲುಗಳು ಉರುಳಿಬಿದ್ದುವು. ಸಾಗರವು ಕೆಸರಿನಿಂದ ಬಗ್ಗಡ ವಾಗಿ ಉಕ್ಕಿತು. ನಕ್ಷತ್ರಗಳುದುರಿದುವು. ಆದಿಶೇಷನು ಹೆಡೆಗಳನ್ನು ಕುಸಿದನು. ಸೂರ್ಯ ಮಂಡಲವು ನಡುಗಿತು. ವೈರಿಗಳು ಹೆದರಿದರು. ವಚನ : ಮತ್ತೆ ಆಗ ೧೯. ಪ್ರಮಥರ ಗುಂಪು ಹಂದಿಯನ್ನು ಕೊಲ್ಲಲು ಬಾಣವನ್ನು ಬಿಲ್ಲುಗಳಿಗೆ ಜೋಡಿಸಿದರು. ಅದನ್ನು

---

೧–೧ ಕ್ಷತಾಂಗರಂ ನೆಗಳ್ತು (ಯ) ೨–೨ ಮೂಕಸೂಕರ (ಗ, ಚ, ಜ, ತ) ೩ ಜೇವಡೆ (ಯ) ೪ ದುಳ್ಗಿದು (ಯ)

ವಚನ ಅಂತುಮಾಗಿ ಕೂರ್ಗಣೆಯುಂ ಮಾಣದೆ ಬಾಣಾಸನದ ತಿರುವಾಯೊಳ್ ಪೂಡಿ ನೀಡಡಿಗೊಂಡಾಕರ್ಣಾಂತಂ ಸೆಳೆದು ಸುರರಂ ಪಿಂಗದೆ ನುಂಗಲೆೞ್ತರ್ಪ ಮಿೞ್ತುವಿನಂತದಿರದಿದಿರ್ಚಿ ಗರ್ಜಿಸುತ್ತುಂ ಬರ್ಪ ಬಲ್ಪಂದಿ೨ಯನಭೀಕ್ಷಿಸಿ೨

ಉತ್ಪಲ ಪಂದಿಯಿದಂದಿನಗ್ಗದ ಗಜಾಸುರನಿಂ ಮದವತ್ತ್ರರಕ್ಷಸಂ
ಕ್ರಂದನವೈರಿಯಿಂ ಬಲದೊಳುಗ್ರತರಾಕೃತಿಯೊಳ್ ಪೊದಟ್ದು ನಿ
ಷ್ಪಂದಪರಾಕ್ರಮುಸ್ಥಿತಿಯೊಳಿರ್ಮಡಿ ವೆಗ್ಗಳಮಪ್ಪುದಿಂದಿದಂ
ಕೊಂದಪೆನಾನೆ ಮಿಕ್ಕಮರಸಂತತಿಗಿಂತಿದು ವಧ್ಯಮಕ್ಕುಮೇ ೨೦

ವಚನ ಎಂದು ಬಗೆದಂತಕಾಂತಕಂ ಪ್ರತಿಜ್ಞಾರೂಢನಾಗಿ

ಪ್ರಕಟಪಟುರೋಷಬದ್ಧ
ಭ್ರುಕುಟಿ ಕರಾಳಾಸ್ತ್ರದಿಂದೆ ತೆಗೆನೆಱೆದೆಚ್ಚಂ
ಪ್ರಕುಟಿಲದಂಷ್ಟ್ರಾಭೀಷಣ
ವಿಕಟಾಂಗನನಾ ವರಾಹನಂ ಪುರಮಥನಂ ೨೧

ಕಂಡ ಶಿವನು ತನ್ನ ಕಣ್ಣುಸನ್ನೆಯಿಂದಲೇ ಅವರನ್ನು ತಡೆದು ನಿಲ್ಲಿಸಿ, ವಿಶೇಷವಾಗಿ ಪ್ರಕಾಶಮಾನವಾಗಿದ್ದ ಬಾಣವನ್ನು ಬತ್ತಳಿಕೆಯಿಂದ ತೆಗೆದನು. ವಚನ : ಆ ಕ್ರೂರವಾದ ಬಾಣವನ್ನು ತಡಮಾಡದೆ ಬಿಲ್ಲಿನ ಹೆದೆಗೆ ಹೂಡಿ, ಶಿವನು ದೂರಕ್ಕೆ ಹೆಜ್ಜೆಗಳನ್ನೂರಿ ವೀರಮಂಡಿಯಲ್ಲಿ ನಿಂತು, ಕಿವಿಯ ತುದಿಯವರೆಗೂ ಸೆಳೆದು, ಭಯಲೇಶವೂ ಇಲ್ಲದೆ ದೇವತೆಗಳನ್ನು ನಾಶಮಾಡಲು ಮೃತ್ಯುವಿನಂತೆ ಮೇಲೆ ಬೀಳಲು ಆರ್ಭಟಿಸುತ್ತಾ ಬರುತ್ತಿದ್ದ ಹಂದಿಯನ್ನು ಗಮನಿಸಿ ನೋಡಿ, ಧೈರ್ಯವಾಗಿ ಅದರ ಮುಂದೆ ನಿಂತನು. ೨೦. "ಈ ಹಂದಿಯು ಆ ಕಾಲದ ಪ್ರತಾಪಶಾಲಿಯಾದ ಗಜಾಸುರನಿಗಿಂತಲೂ, ಇಂದ್ರ ವೈರಿಯಾದ ಪ್ರಬಲ ವ್ಯಾಘ್ರರಾಕ್ಷಸನಿಗಿಂತಲೂ, ಬಲದಲ್ಲಾಗಲೀ, ಭೀಕರಾಕಾರದಲ್ಲಾಗಲೀ, ದೃಢವೂ, ಅಚಲವೂ ಆದ ಶೌರ್ಯದಲ್ಲಿಯೇ ಆಗಲೀ ಎರಡರಷ್ಟು ಹೆಚ್ಚಾಗಿರುವುದು. ಇತರ ದೇವತೆಗಳಿಗೆ ಈ ಹಂದಿಯನ್ನು ಕೊಲ್ಲಲು ಸಾಧ್ಯವಿಲ್ಲ. ಇದನ್ನು ನಾನೇ ಸಂಹರಿಸುವೆನು" ವಚನ : ಎಂದು ಆಲೋಚಿಸಿ, ಕಾಲಕಾಲನಾದ ಶಿವನು ಪ್ರತಿಜ್ಞಾಪೂರ್ವಕವಾಗಿ ನಿಶ್ಚಯಿಸಿದನು. ೨೧. ತ್ರಿಪುರಾಂತಕನಾದ ಶಿವನು ಕೋಪಗೊಂಡು, ಹುಬ್ಬನ್ನು ಗಂಟಿಕ್ಕಿ, ನಿಶಿತವಾದ ಬಾಣವನ್ನು ಹಿಂದಕ್ಕೆ ಎಳೆದು, ವಕ್ರವಾದ ದಾಡೆಗಳುಳ್ಳ, ಭಯಂಕರವಾದ

---

೧ ಅಂತಾ (ಯ) ೨–೨ ಯಂ ನಿರೀಕ್ಷಿಸಿ (ಚ)

ಎಚ್ಚೊ ಡಿಳಿಯದಿರೆ ಶರವಿರ
ದುಚ್ಚಳಿಸಿದುದೊಡಲನದಱ ಕೆನ್ನೀರ್ ಭರದಿಂ
ಬೆಚ್ಚನೆ ಪಾಯ್ತುರೆ ಕಣ್ಣರೆ
ಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ ೨೨

ವಚನ ಅಂತು ಹಮ್ಮದಂಬೋಗಿ ವಜ್ರಿವಜ್ರನಿರ್ಘಾತದಿಸುರುಳ್ದ ನೀಲಾಚಲದಂತೆ ಪೊಡವಿಯೊಳ್ ಕೆಡೆದನಿಸಾನುಂ ಬೇಗದಿನೆಚ್ಚತ್ತು ಮದಮುಡಿಗಿ ಬೇರ್ವರಿವ ಭೀತಿಯಿಂ ಬೆಂಗೊಟ್ಟು ಪರಿದು

ಮಡು ಗಿಡು ಸರು ದರಿ ಪಳ್ಳಂ
ಸಿಡುಂಬು ಮೆಳೆ ಬಳ್ಳಿ ಪುಲ್ ಪೊದಱ್ ಬೆಟ್ಟುಗಳಿ
ಟ್ಟೆಡೆ ಕುತ್ತುಱು ನಾನಲ್ಗಳೊ
ಳೆಡೆವಿಡದೋಡಿತ್ತು ಪಂದಿ ಜವದಿಂದಾಗಳ್ ೨೩

ಬೆಂಬಱಿವಿಡಿವಟ್ಟುತ್ತುಂ
ತಾಂ ಬರೆವರೆ ಬಿಸದಧಿಜ್ಯಧನು ಶಬರೇಶಂ
ಮುಂಬರಿದರ್ಜುನನಿರ್ದ ಬ
ನಂಬೊಕ್ಕುದು ಪಂದಿ ಸುೞಿದುದಾತನ ಬೞಿಯೊಳ್ ೨೪

ವಚನ ಆಗಳ್ ಬೞಿವಿಡಿದು ಬಳಸಿ ಕವಿದು ಕುಬುಬೆಂದು ಬೊಬ್ಬಿಱಿವ ಸುರಕಿರಾತರಬ್ಬರಮಂ ಕೇಳ್ದಿದೆತ್ತಣದೆಂದು ಯೋಗಿ ಯೋಗವನುಪಶಮಿಸಿ, ಕಣ್ದೆಱೆದು ಮುಂದಿರ್ದ

ವಕ್ರಶರೀರಿಯಾದ ಆ ಹಂದಿಯನ್ನು ಹೊಡೆದನು. ೨೨. ಬಾಣವನ್ನು ಪ್ರಯೋಗಿಸಲು ಭೂಮಿ ಕಂಪಿಸಿತು. ಬಾಣವು ಹಂದಿಯ ದೇಹವನ್ನು ತೂರಿಕೊಂಡು ಹೋಯಿತು. ಗಾಯದಿಂದ ಬಿಸಿರಕ್ತವು ತಟ್ಟನೆ ಕೋಡಿ ಹರಿಯಿತು. ಹಂದಿಯು ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ಜ್ಞಾನತಪ್ಪಿ ಬಿದ್ದಿತು. ವಚನ: ಈ ರೀತಿಯಾಗಿ ಗರ್ವವುಡುಗಿ, ಇಂದ್ರನ ವಜ್ರಾಘಾತದಿಂದ ನೆಲಕ್ಕುರುಳುವ ನೀಲಾಚಲದಂತೆ ನೆಲಕ್ಕೆ ಉರುಳಿ, ಸ್ವಲ್ಪ ಹೊತ್ತಿನಲ್ಲಿಯೇ ಹಂದಿಯು ಚೇತರಿಸಿಕೊಂಡು, ಧೃತಿಗೆಟ್ಟು ಭಯದಿಂದ ಹಿಂತಿರುಗಿ ಓಡಿತು. ೨೩. ನೀರಿನ ಹಳ್ಳದಲ್ಲಿಯೂ, ಗಿಡಗಳಲ್ಲಿಯೂ, ಓಣಿಗಳಲ್ಲಿಯೂ, ಗುಹೆಗಳಲ್ಲಿಯೂ, ಕೊರಕಲುಗಳಲ್ಲಿಯೂ, ದಿನ್ನೆಗಳಲ್ಲಿಯೂ, ಪೊದೆಗಳಲ್ಲಿಯೂ, ಬಳ್ಳಿಗಳಲ್ಲಿಯೂ, ಹುಲ್ಲಿನ ಬಣಬೆಗಳಲ್ಲಿಯೂ, ಸಂದುಗೊಂದಿಗಳಲ್ಲಿಯೂ, ಕಲ್ಲುಮುಳ್ಳುಗಳಲ್ಲಿಯೂ ನುಗ್ಗಿ, ಒಂದೇ ಸಮನಾಗಿ ಓಡಿಹೋಯಿತು. ೨೪. ಹೆದೆಯೇರಿಸಿದ ಬಿಲ್ಲನ್ನು ಹಿಡಿದು ಕಿರಾತರೊಡೆಯನಾದ ಶಂಕರನು ಹಂದಿಯನ್ನು ಹಿಂಬಾಲಿಸಿ ಓಡಿಸುತ್ತಾ ಬರುತ್ತಿರಲು, ಅದು ಓಡುತ್ತಾ ಓಡುತ್ತಾ ಮುಂದೆನುಗ್ಗಿ, ಅರ್ಜುನನಿದ್ದ ವನವನ್ನು ಪ್ರವೇಶಿಸಿ, ಅವನ ಸಮೀಪದಲ್ಲಿ ತಿರುಗಿತು. ವಚನ: ಆಗ ಕಿರಾತರೂಪದಿಂದಿದ್ದ ದೇವತೆಗಳು ಹಿಂಬಾಲಿಸಿ ಬಂದು, ಹಂದಿಯ ಸುತ್ತಲೂ ಮುತ್ತಿಕೊಂಡು "ಕುಬ್,

ಭೀಕರಾಕೃತಿವೆತ್ತ ಮಹಾವರಾಹನಂ ನೋಡಿ, ಬನದ ತಪಸ್ವಿಗಳ್ಗುಪಹತಿಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಮೆಂದು ನಿಜಕ್ಷಾತ್ರಧರ್ಮಮಂ ಬಗೆದು, ಮೂಡಿಗೆಯಿಂ ತೋಡಿಲ್ಲದ ಚಂಡಕಾಂಡ ಮನುಗಿದು, ಗಾಂಡೀವಿ ಗಾಂಡೀವದಿರ್ದೆಸೆಯ ಕೊಪ್ಪನಾರಯ್ದು ಪೆದೆಯಂ ತೊಡರ್ಚಿ ಜೇವೊಡೆದು ಪೂಡಿ ನೀಡಡಿಗೊಂಡು ತೆಗೆನೆಱೆನಿಂದು

ಕಿಡೆ ಕಿಡೆಯೆಂದಾರ್ದೆಚ್ಚಂ
ಘುಡುಘುಡಿಪ ಮಹಾವರಾಹನಂ ಕೂರ್ಗಣೆಯಿಂ
ಕಡುಗಲಿ ಪಾರ್ಥಂ ನೆಲಗಿನಂ
ನಡೆಗೋಣಡಿಗೊಂಡು ಪಂದಿ ಕೆಡೆದತ್ತಾಗಳ್ ೨೫

ತರಳ ಜವದಿನಲ್ಲಿಗೆ ಬಂದು ಶಂಕರನೆಂದನೀ ಕಿಟಿಯೆಮ್ಮದಾಂ
ತವಿಸಿದೆಂ ತೆಗೆಯೆಂದು ಭೂತಗಣಕ್ಕೆ ಪೆಟ್ಟುದುಮಾಲಿಸು
ತ್ತವಿಕಲಂ ಕೆಡೆದತ್ತಿದೆನ್ನಯ ಬಾಣದಿಂ ಕಡೆಸಾರ್ ಬಿಡೆಂ
ದವನನೀಶ್ವರನೆಂದು ಬಲ್ಲನೆ ಪಾರ್ಥನೊತ್ತಿ ಕೆರಳ್ಚಿದಂ ೨೬

ಕುಬ್" ಎಂದು ಅದನ್ನು ಬೆದರಿಸುತ್ತಾ ಅಬ್ಬರಿಸುತ್ತಿದ್ದರು. ಅದನ್ನು ಕೇಳಿ, ಅರ್ಜುನನು ತನ್ನ ತಪಸ್ಸನ್ನು ನಿಲ್ಲಿಸಿ, ಕಣ್ಣುಬಿಟ್ಟು ನೋಡಿ, ಘೋರವಾದ ರೂಪಿನ ದೊಡ್ಡ ಹಂದಿಯು ತನ್ನ ಮುಂದಿರುವುದನ್ನು ಕಂಡು, "ಇದು ತಪೋವನದಲ್ಲಿರುವ ಋಷಿಜನಕ್ಕೆ ತೊಂದರೆಯನ್ನು ಮಾಡುವುದು. ಆ ತೊಂದರೆಯನ್ನು ನಿವಾರಿಸುವುದು ನನ್ನ ಕರ್ತವ್ಯ" ಎಂದು ತನ್ನ ಕ್ಷಾತ್ರಧರ್ಮವನ್ನು ಯೋಚಿಸಿ, ಬತ್ತಳಿಕೆಯಿಂದ ಅಸಮಾನವಾದ ಶಕ್ತಿಯಿಂದ ಕೂಡಿದ ಒಂದು ಕ್ರೂರ ಬಾಣವನ್ನು ತೆಗೆದು, ಗಾಂಡೀವ ಧನುಸ್ಸಿನ ಎರಡು ಕೊನೆಗಳನ್ನು ಸರಿನೋಡಿ, ಹೆದೆಯನ್ನು ಬಿಗಿದು, ಝಂಕಾರವನ್ನು ಮಾಡಿ, ಬಾಣವನ್ನು ಬಿಲ್ಲಿಗೆ ಹೂಡಿ, ತಾನು ದೂರವಾಗಿ ಹೆಜ್ಜೆಗಳನ್ನೂರಿಕೊಂಡು ನಿಂತು, ಹೆದೆಯನ್ನು ಕಿವಿವರೆಗೂ ಸೆಳೆದನು. ೨೫. ಮಹಾಪರಾಕ್ರಮಿಯಾದ ಅರ್ಜುನನು ಅಬ್ಬರಿಸುತ್ತಿದ್ದ ಆ ದೊಡ್ಡ ಹಂದಿಯನ್ನು "ಬಿದ್ದುಹೋಗು, ಬಿದ್ದುಹೋಗು" ಎಂದು ಆರ್ಭಟಿಸುತ್ತಾ, ಬಾಣವು ನೆಲಕ್ಕೆ ನಾಟುವಂತೆ ಬಿಡಲು, ಹಂದಿಯು ಕತ್ತನ್ನು ಕೆಳಗೆ ಹಾಕಿಕೊಂಡು ಬಿದ್ದಿತು. ೨೬. ಜಾಗ್ರತೆಯಾಗಿ ಅಲ್ಲಿಗೆ ಬಂದ ಶಂಕರನು, "ಈ ಹಂದಿಯನ್ನು ನಾನು ಕೊಂದೆ. ಅದನ್ನು ತೆಗೆದುಕೊಳ್ಳಿ", ಎಂದು ಭೂತಗಣಕ್ಕೆ ಹೇಳಿದನು. ಅದನ್ನು ಕೇಳಿ ಅರ್ಜುನನು, "ನಿಜವಾಗಿಯೂ ಇದು ನನ್ನ ಬಾಣದಿಂದ ಬಿದ್ದಿತು. ನೀನು ಪಕ್ಕಕ್ಕೆ ತೊಲಗು ; ಇದನ್ನು ನಾನು ಬಿಡುವುದಿಲ್ಲ", ಎಂದು ಹಠಹಿಡಿದು ಹೇಳಿ, ಶಿವನಿಗೆ ಕೋಪವನ್ನುಂಟುಮಾಡಿದನು. ಪಾಪ, ಅರ್ಜುನನಿಗೇನು ಗೊತ್ತು, ಆ ಕಿರಾತನು ಶಂಕರ

---

೧ ನೆಲ (ತ, ಯ)

ವಚನ ಮತ್ತಮಿಂತೆಂದಂ

ಎಲೆ ಶಬರ ಕಾಡ ಬಡನರಿ
ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋ
ರ್ಬಲಮುಂ ಮೆಱೆಗುಮದಲ್ಲದೆ
ಚಲಗಿದಂಕನೊಳೆನ್ನೊಳೆಂತುಮೇಂ ಮೆಱೆದಪುದೇ ೨೭

ಬೇಡ ನಿನಗೇಕೆ ಸಾಹಸ
ದಾಡಂಬರಮೆನ್ನೊಳಾಹವಕ್ಕನುಗುಣನು೨
ಜೋಡಿಸು ನಿನಗುಳ್ಳೊಡೆಯನ
ನಾಡಲದೇಂ ತೋರ್ಪೆನೆನ್ನ ಸಾಹಸದಿರವಂ ೨೮

ಕರಿ ಕೇಸರಿಯುಂ ಕೆಣಕಿದ
ಪರಿಯಂ ಪರುಟವಿಸಿಸದಿರ್ ಮದಾಂಧತೆಯಿಂದಾಂ೪
ತರಿಬಲಬಲಾಹಕಪ್ರ
ಸ್ಫುರಿತಮಹಾನಿಲನೊಳತುಳಬಳಗಾಂಡಿವಿಯೊಳ್ ೨೯

ಚಂಪಕ ಎನೆ ನಸುನಕ್ಕು ಮಾರರಿಪುವಾತನ ಧೈರ್ಯಮನಾತನೇಟ್ಗೆವೆ
ತ್ತನುಗತಶೌರ್ಯಮಂ ಬಟಿಯೊಳಿರ್ಪಗಜಾತೆಗೆ ಸೂಚಿಸುತ್ತೆ ಪು
ರ್ಬಿನ ಕೊನೆಸನ್ನೆಯಿಂ ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗಮೀ
ಧನುಶ್ಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್ ೩೦

ನೆಂಬುದು ? ವಚನ : ಮುಂದುವರೆದು ಅರ್ಜುನನು ಹೀಗೆಂದನು ; ೨೭. "ಎಲೋ, ಬೇಡರವನೇ, ಕಾಡಿನ ಬಡಪಾಯಿಗಳಿಂದ ನರಿ, ಮೊಲ, ಹುಲ್ಲೆಗಳೊಡನೆ ನಿನ್ನ ಪರಾಕ್ರಮವಾಗಲೀ, ಭುಜಬಲವಾಗಲೀ ನಡೆಯಬಹುದೇ ವಿನಹಾ, ಹಿಡಿದ ಪಟ್ಟನ್ನು ಬಿಡೆನೆಂಬ ನನ್ನೊಡನೆ ಅದು ಶೋಭಿಸುವುದಿಲ್ಲ. ೨೮. ಎಲೈ ಬೇಡನೆ, ನಿನ್ನ ಪ್ರತಾಪ ಅಬ್ಬರ ಏಕೆ ? ನನಗೆ ಸರಿಜೋಡಿಯಾಗಬಲ್ಲ ಒಡೆಯನು ನಿನಗಿದ್ದರೆ, ಅವನನ್ನು ಕೂಡು ಬಾ. ಸುಮ್ಮನೆ ಮಾತಿನಿಂದೇನು ಪ್ರಯೋಜನ ? ನನ್ನ ಪರಾಕ್ರಮವನ್ನು ತೋರಿಸುವೆನು. ೨೯. ಎದುರುಬಿದ್ದ ಶತ್ರುಸೈನ್ಯವೆಂಬ ಮೇಘಮಾಲೆಗೆ ಪ್ರಬಲವಾದ ಝುಂಝಾ ಮಾರುತದಂತಿರುವ ಈ ಗಾಂಡೀವಿಯಾದ ನನ್ನನ್ನು, ಉನ್ಮತ್ತತೆಯಿಂದ ಕುರುಡಾಗಿ ಎದುರಿಸಿ, ಸಿಂಹವನ್ನು ಕೆಣಕಿದ ಆನೆಯುಂತಾಗಬೇಡ" ಎಂದನು. ೩೦. ಶಿವನು ಮೆಲ್ಲಗೆ ನಗುತ್ತಾ, ಹುಬ್ಬಿನ ಸನ್ನೆಯಿಂದ ತನ್ನ ಪಕ್ಕದಲ್ಲಿದ್ದ ಪಾರ್ವತಿಗೆ ಅರ್ಜುನನ ಧೈರ್ಯವನ್ನೂ, ಪ್ರವೃದ್ಧಮಾನವಾದ ಸಹಜ ಪರಾಕ್ರಮವನ್ನೂ ಸೂಚಿಸುತ್ತಾ, "ತಪಸ್ವಿ, ನಿನ್ನ ಪರಾಕ್ರಮದ ಮಾತು ಹಾಗಿರಲಿ. ನಿನ್ನದು ಯಾವ ರೀತಿಯ ತಪಸ್ಸು ? ಕತ್ತಿ, ಬಿಲ್ಲು,

---

೧ ಭಲ (ಕ, ಚ) ೨ ಗುಣವಂ (ಕ, ಗ, ಜ) : ಗುಣವಂ (ಚ) ೩ ಠವಿ (ಯ, ಜ) ೪ ಯಿಂದಂ (ಚ)

ವಚನ ಎಂದೇಳಿದಂಗೆಯ್ದು ನುಡಿದ ಕಪರ್ದಿಯ ಕಟೋಕ್ತಿಯಂ ಕೇಳ್ದು

ವಿಪಿನಚರ ನಿನಗೆ ತಕ್ಕುದು
ಚಪಲಮೃಗವ್ರಜದ ಬೇಂಟೆಯುಜ್ಜುಗಮೆಮ್ಮೀ
ತಪದ ವಿಚಾರಂ ತಕ್ಕುದೆ
ವಿಪರೀತಂ ನಿನ್ನ ನುಡಿಯನೊಲ್ಲರೆ ಬಲ್ಲರ್ ೩೧

ಉತ್ಪಲ ಎಂದವನುಕ್ತಿಯಂ ಗಿರಿಶನಾಲಿಸಿ ತಾಪಸ ಲೇಸನಾಡಿದಯ್
ಕುಂದದೆ ಬೇಂಟೆಯುಜ್ಜುಗಮಿದೆಮ್ಮಯೆ ಕಜ್ಜಮಿದಪ್ಪುದಪ್ಪುದಾ
ವಂದದಿನಿಂತು ನಿನ್ನವೊಲದಾವನೊ ಶಾಂತಿಸಮಗ್ರನುಗ್ರಶೌ
ರ್ಯಂ ದಿಟಮಸ್ತ್ರಶಸ್ತ್ರಧರನಾದ ತಪಸ್ವಿ ಧರಾತಳಾಗ್ರದೊಳ್ ೩೨

ವಚನ ಎಂದು ನುಡಿಯಲೊಡನೆ

ಚಂಪಕ ಕಟಕಿಯಿದೇಂ ಪುಳಿಂದ ಬಿಡು ನಿನ್ನ ದುರುಕ್ತಿಯನೆಮ್ಮ ವೃತ್ತಿಯುಂ
ಪಟುತಪಮಾಂತ ತಾಪಸರೆ ಬಲ್ಲರುದಾರಜಟಾಮೃಗಾಜಿನ
ಸ್ಫುಟಭಸಿತಂಗಳುಂ ಶರಶರಾಸನಖಡ್ಗಮನಾಂತು ತಾಪಸೋ
ತ್ಕಟಮೃಡನರ್ಪಣಾ ಮೃಡನ ಶಿಷ್ಯತೆಯಾಂತೆನಗೇನಿದೊಪ್ಪದೇ ೩೩

ಬಾಣಗಳು ಏಕೆ ಬೇಕು ? ಇದು ಲೋಕದಲ್ಲಿಯೇ ವಿಚಿತ್ರವಾಗಿದೆಯಲ್ಲಾ !" ಎಂದು ಅಪಹಾಸ್ಯ ಮಾಡಿದನು. ವಚನ : ಶಿವನ ನಿಷ್ಠುರವಾದ ಮಾತುಗಳನ್ನು ಕೇಳಿ ಅರ್ಜುನನು, ೩೧. "ಬೇಡನೇ, ಓಡಿಹೋಗುತ್ತಿರುವ ಮೃಗಗಳ ಗುಂಪನ್ನು ಅಟ್ಟಿ, ಬೇಟೆಯಾಡುವುದು ನಿನ್ನ ಉದ್ಯೋಗವೇ ಹೊರತಾಗಿ, ತಪಸ್ಸಿನ ವಿಚಾರ ನಿನಗೇಕೆ ? ಮಾತನ್ನು ತಿಳಿದವರಾರೂ ಒಪ್ಪುವುದಿಲ್ಲ" ಎಂದನು. ೩೨. ಅವನ ಮಾತನ್ನು ಕೇಳಿ ಶಿವನು, "ಮುನಿಯೇ, ನೀನು ಹೇಳಿದ್ದೇನೋ ಸರಿಯೆ. ಬೇಟೆಯಾಡುವುದೇ ನಮ್ಮ ಉದ್ಯೋಗ. ಸರಿ, ಸರಿಯಾಯಿತು. ಶಾಂತಿ ತುಂಬಿದವನೂ, ಮಹಾ ಸಾಹಸಿಯೂ ಆದ ತಪಸ್ವಿಯು ನಿನ್ನ ಹಾಗೆ ಆಯುಧಗಳನ್ನೂ, ಬಾಣಗಳನ್ನೂ ಹಿಡಿದವನು ಯಾರಾದರೂ ಪ್ರಪಂಚದಲ್ಲಿರುವನೇ ?" ಎಂದನು. ವಚನ : ಹೀಗೆ ಹೇಳಿದೊಡನೆ, ೩೩. "ಏನು ಹಾಸ್ಯ ಮಾಡುತ್ತೀಯೋ ? ಎಲೋ ಬೇಡನೆ, ನಿನ್ನ ಕಿಡಿಗೇಡಿ ಮಾತನ್ನು ನಿಲ್ಲಿಸು. ನಮ್ಮ ಆಚರಣೆ ಸರಿ ಎಂಬುವುದನ್ನು ಉಗ್ರ ತಪಸ್ಸನ್ನಾಚರಿಸುವ ಮುನಿಗಳು ಒಪ್ಪುವರು. ದೀರ್ಘವಾದ ಜಟೆಯನ್ನೂ, ಕೃಷ್ಣಾಜಿನವನ್ನೂ, ಚೆನ್ನಾಗಿ ವಿಭೂತಿ ಗಳನ್ನೂ, ಹಾಗೆಯೇ ಬಾಣ, ಬಿಲ್ಲು, ಕತ್ತಿಗಳನ್ನೂ ಧರಿಸಿರುವ ಮಹಾತಪಸ್ವಿ ಶಿವ

ನೀನೆನ್ನೊಳಾಹವಕ್ಕೆ ಸ
ಮಾನನೆ ತೊಲಗಾಂಪ ಧೀರನಂ ಬರಿಸೀಗಳ್
ಕಾನನಚರ ಸಮರದೊಳಭಿ
ಮಾನಮನುೞಿಯೆನೆ ಮಹೇಶ್ವರಂ ಮಗುೞ್ದಿಂದು ೩೪

ಏನಾದೊಡೇನೊ ನಿನ್ನ ತ
ಪೋನೀತಿಯುದಂತದಿರ್ಕೆ ನಿನ್ನ ಧನುರ್ವಿ
ದ್ಯಾನಿಪ್ರಣತೆಯೆಂತೆಂತನು
ಮಾನಮದೇಂ ತೋರ್ಪುದೆನ್ನೊಳಡಗಿನಿಱಸಱಿವೆಂ ೩೫

ಬಱಿದೇಕೆ ಗೞಪಿದಪೆ ನೀಂ
ಪೊಱಮಡು ಸಮರಕ್ಕೆ ನಿನ್ನ ಭುಜಬಲದಿರವಂ
ನೆಱೆ ಕಾಣ್ಬೆನೆನ್ನ ವಾಸಿಯ
ತೆಱನಂ ಕಡೆಗಣ್ಚಿ ಪಿಂಗಿ ಪೆಱಸಾರ್ದಪೆನೇ ೩೬

ವಚನ ಎಂದು ಧೂರ್ಜಟಿ ಗಭೀರಧ್ವನಿಯಿಂ ಗಜರಿ ಗರ್ಜಿಸಿ ನುಡಿಯೆ

ಒಳಸೋರ್ದುದು ಶಾಂತಿರಸಂ
ಮೊಳೆತುದು ಕೋಪಾಗ್ನಿ ಪೊಗೆದುದುಸಿರೊಳ್ ನಿಡುಗ
ಣ್ಗಳ ಕಡೆಯೊಳ್ ಕಿಡಿಗೆದರ್ದುದು
ಬಳಿಕಲರ್ದುದು ಮೊಗದೊಳಚಲರಿಪುನಂದನನಾ ೩೭

ನಿಲ್ಲವೇ ? ಆ ಶಿವನ ಶಿಷ್ಯನಾದ ನನಗೆ ಮಾತ್ರ ಇವು ಒಪ್ಪಲಾರದೇ ? ೩೪. ಎಲೋ ಕಾಡಿನಲ್ಲಿ ಅಲೆಯುವವನೇ ನನ್ನೊಡನೆ ಹೋರಾಡಲು ನೀನು ಸಮರ್ಥನಲ್ಲ. ಸಮರ್ಥನಾದ ಪರಾಕ್ರಮಿಯನ್ನು ಈಗ ಕರೆಸು. ಹೋರಾಡಬಲ್ಲೆನೆಂಬ ಗರ್ವವನ್ನು ಬಿಟ್ಟುಬಿಡು", ಎನ್ನಲು, ಅದಕ್ಕೆ ೩೫. ಪರಮೇಶ್ವರನು "ಏನಾದರೂ ಆಗಲಿ, ನಿನ್ನ ತಪಸ್ಸಿನ ರೀತಿ ಹಾಗಿರಲಿ. ನಿನ್ನ ಧನುರ್ವಿದ್ಯಾನೈಪುಣ್ಯ ಹೇಗಿದೆಯೋ, ಅದರ ವಿಚಾರದಲ್ಲಿ ಅನುಮಾನವೇಕೆ ಬೇಕು ? ನಿನ್ನ ಸಾಮರ್ಥ್ಯವನ್ನು ಸ್ವಲ್ಪ ತೋರಿಸು ನೋಡೋಣ. ೩೬. ಸುಮ್ಮನೆ ಹರಟುವುದರಿಂದ ಪ್ರಯೋಜನವೇನು ? ಹೋರಾಡಲು ಸಿದ್ಧನಾಗು. ನಿನ್ನ ಬಾಹುಪರಾಕ್ರಮವು ಎಷ್ಟೆಂಬುದನ್ನು ನಾನು ಚೆನ್ನಾಗಿ ನೋಡುವೆನು. ನನ್ನ ಪ್ರತಿಜ್ಞೆಯೆಂತಹುದೆಂಬುದನ್ನು ಹಿಂದೆ ತಳ್ಳಿ, ಹೆದರಿ ಹಿಮ್ಮೆಟ್ಟುವವನು ನಾನಲ್ಲ." ವಚನ : ಎಂದು ಶಿವನು ಗಂಭೀರ ಧ್ವನಿಯಿಂದ ಧಿಕ್ಕರಿಸುತ್ತಾ ಆರ್ಭಟಿಸಿದನು. ೩೭. ಅರ್ಜುನನ ಚಿತ್ತಶಾಂತಿಯು ಒಳಗೇ ಬತ್ತಿತು. ಕೋಪವು ಕುಡಿಯಿಟ್ಟಿತು. ಕೋಪವು ಜ್ವಲಿಸಿ, ಉಸಿರಾಟದಲ್ಲಿ ಹೊಗೆಯನ್ನು ಚಿಮ್ಮಿ, ಕಡೆಗಣ್ಣ್ಗಳಲ್ಲಿ ಕಿಡಿಗೆದರಿತು.

---

೧ ತಿರಿ (ಯ) ೨ ಳದನನಿ (ಯ)

ಬಡಬಾಗ್ನಿಯಳುರ್ಕೆಯೊ ಬಱ
ಸಿಡಿಲೇಳ್ಗೆಯೊ ಮುಳಿದ ಸಿಂಹದುಗ್ರತೆಯೊ ಪೊಡ
ರ್ಪಡಿಪ ಲಯಕಾಲಮೃತ್ಯುವಿ
ನಡರ್ಪೊ ಎನೆ ಮಿಸುಪ ಮಸಕಮಂ ತಳೆದನವಂ ೩೮

ಮಹಾಸ್ರಗ್ಧರೆ ಪಟುಕೋಪಾಟೋಪ ಬದ್ಧಭ್ರುಕುಟಿ ವಿಚಳಿತಶ್ಮಶ್ರು ಘರ್ಮಾಂಬುಭಾಸ್ವ
ನ್ನಿಟಿಲಂ ಶೋಣಾಕ್ಷಿಕೋಣಂ ಪೆದೆಯನೆಱ[1]ದು ಗಾಂಡೀವದೊಳ್ ತೊಟ್ಟು[2] ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು ನಿಂದಾರ್ದು ಶಾತಾಸ್ತ್ರಮಂ ಸಂ
ಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತಣ್ಮಿ ಪಾರ್ಥಂ ೩೯

ಮತ್ತೇಭ ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದಿತ್ತಂತದಂ ಪಿಂದುಗೆ
ಯ್ದೊದಱುತ್ತಂ ಪೆಱತೊಂದು ಮಾರ್ಗಣಮಳುಂಬಂ ಪಾಯ್ದುದಂಬೊಂದು ಮೇ
ಣದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬಂ ಬಾಣಮುನ್ನಂ ಬೞಿ
ಕ್ಕದುಮಂ ದಾಂಟಿ ಕಡಂಗಿ ಸೈವರಿದುದೇನೆಂಬೆಂ ತದಾಟೋಪಮಂ ೪೦

ಅವನ ಮುಖವು ಅರಳಿತು. ೩೮. ಅರ್ಜುನನ ಕೋಪವು ಸಿಡಿದೆದ್ದಿತು. ಅದು ಒಡಬಾಗ್ನಿಯಂತೆ ಭುಗಿಲೆಂದಿತು. ಬರಸಿಡಿಲಿನಂತೆ ಅಪ್ಪಳಿಸಿತು. ಪ್ರಬಲವಾದ ಪ್ರಲಯ ಕಾಲದ ರುದ್ರನಂತೆ ದುರ್ನಿವಾರವಾಯಿತು. ೩೯. ಉಕ್ಕುತ್ತಿರುವ ಕೋಪಾವೇಶದಿಂದ ಅರ್ಜುನನ ಹುಬ್ಬುಗಳು ಗಂಟಿಕ್ಕಿದುವು. ಮೀಸೆಗಳು ಕುಣಿದುವು. ಹಣೆಯಲ್ಲಿ ಬೆವರು ಹನಿಗಳು ಕಾಣಿಸಿದುವು. ಕಣ್ಣುಗಳು ಕೆಂಡವಾದುವು. ಗಾಂಡೀವಧನುಸ್ಸನ್ನು ಬಲವಾಗಿ ಹಿಡಿದು, ಹೆದೆಯನ್ನು ನೇವರಿಸಿ, ಠಂಕಾರವನ್ನು ಮಾಡಿ, ಕಪಟ ಕಿರಾತನನ್ನು, "ತಡೆದುಕೋ" ಎಂದು ಎಚ್ಚರಿಸಿ, ಆರ್ಭಟಿಸುತ್ತಾ ಹರಿತವಾದ ಬಾಣವನ್ನು ಹೂಡಿ ಸೆಳೆದುಬಿಟ್ಟನು. ೪೦. ಬಿಟ್ಟಬಾಣವನ್ನು ಹಿಂದಿಕ್ಕಿ ಇನ್ನೊಂದು ಬಾಣವನ್ನು ವೇಗವಾಗಿ ಬಿಟ್ಟನು. ಅನಂತರ ಬಿಟ್ಟ ಬಾಣವು ಅವುಗಳನ್ನೂ ವೇಗದಲ್ಲಿ ಮೀರಿಹಾರಿತು. ಆಮೇಲೆ ಪ್ರಯೋಗಿಸಿದ ಬಾಣದ ಅತಿಶಯವನ್ನು ಹೇಳುವುದೇನು ? ಭರ್ರೆಂದು ಶಬ್ದಮಾಡುತ್ತಾ, ವೇಗವಾಗಿ ಹಾರಿ, ಮುಂದೆ ಹೋಗಿದ್ದ ಬಾಣಗಳನ್ನೂ ತಾಕಿಕೊಂಡು, ಗುರಿಯತ್ತ ಸಾಗಿತು. ಮತ್ತೊಂದು ತೀಕ್ಷ್ಣವಾದ ಬಾಣವು ಅದನ್ನೂ ದಾಟಿಕೊಂಡು ರಭಸದಿಂದ ಮುಂದೆ ನುಗ್ಗಿತು. ಅರ್ಜುನನ ಕೋಪಾಟೋಪವನ್ನಾಗಲೀ, ಪುಂಖಾನುಪುಂಖವಾಗಿ ಬಾಣಪ್ರಯೋಗ ಮಾಡುವ ಕೌಶಲವನ್ನಾಗಲೀ ಎಷ್ಟು ಬಣ್ಣಿಸಿದರೂ ಕಡಿಮೆಯೇ.

---

೧ ನೆಳವಿ (ಯ) ೨ ಕೊಟ್ಟು (ತ)

ಗಿರಿಯಗ್ರದೊಳುಱೆ ಕಱೆವಂ
ಶರವೃಷ್ಟಿಯನಾತ್ಮಜನಕನಿಂದ್ರನೆನುತ್ತುಂ
ಪುರುಡಿಸಿ ಶರವೃಷ್ಟಿಯನಾ
ಗಿರಿಶಾಗ್ರದೊಳೆಯ್ದೆ ಕಱೆದನರ್ಜುನನದಟಂ ೪೧

ಚಂಪಕ ಒದೆದೆಡೆಗೊಂಡ ಬಿಲ್ಲ ತಿರುವಂ ಮೊರೆದೆತ್ತಿರದಿಂ ಪಳಂಚಿ ವೇ
ಗದೊಳಿದಿರಾಂತು ಬಲ್ಗರಿಯ ಗಾಢವೊಡಂಬಡೆ ಮೀಱೆ ಪಾಱೆ ಪುಂ
ಖದ ಪೊಳೆಪುರ್ವೆ ಮುಮ್ಮೊನೆಯ ಕೆಂಗಿಡಿ ಸಾಲಿಡೆ ರೂಢಿಗಿಸುತ್ತೆ ಪಿಂ
ಗದೆ ಪೊಗರಾಂತ ಕೂರ್ಗಣೆಗಳೇ ಪರಿತಂದುವೊ ಪಾಂಡುಪುತ್ರನಾ ೪೨

ವಚನ ಮತ್ತಂ

ಮತ್ತೇಭ ಧರೆಯೆತ್ತಾಗಸಮೆತ್ತ ತಳ್ತ ದೆಸೆಯೆತ್ತೆಂಬಂತೆ ಮತ್ತಂ ಧನು
ರ್ಧರ ಪಾರ್ಥಂ ಬಿಡದೆಚ್ಚ ಮಾರ್ಗಣಕದಂಬಂ ಧಾರೆಯಿಂ೨ ಪೊಣ್ಮೆ ದ
ಳ್ಳುರಿ ವಿದ್ಯುದ್ದ್ಯುತಿವಿಸ್ಫುಲಿಂಗತತಿ ಸುತ್ತಂ ಸೂಸೆ ಪಾಯ್ತಂದು ನಿ
ರ್ಭರದಿಂ೩ ತೀವಿದುದಂಬಿನಂಬುಧಿಯುಳುಂಬಂ ಮುತ್ತಿದತ್ತೇಬಿನಂ ೪೩

೪೧. ತನ್ನ ತಂದೆಯಾದ ಇಂದ್ರನು ಬೆಟ್ಟಗಳ ಮೇಲೆ ಮಳೆಗರೆಯುವನು ಎಂದು ತಾನೂ ಸಹ ಅವನೊಡನೆ ಸ್ಪರ್ಧಿಸುವಂತೆ, ಅರ್ಜುನನು ಗಿರಿವಾಸಿಯಾದ ಶಿವನ ಮೇಲೆ ಬಲವಾಗಿ ಬಾಣಗಳ ಮಳೆಯನ್ನೇ ಕರೆದನು. ೪೨. ಹೆದೆಗೆ ಜೋಡಿಸಿದ್ದ ಬಾಣವು ಹೆದೆಯನ್ನು ಹಿಂದಕ್ಕೆ ತಳ್ಳಿ, ಗಾಳಿಯಲ್ಲಿ ಸುಯ್ಯೆಂದು ಶಬ್ದ ಮಾಡುತ್ತಾ, ತುದಿಯಲ್ಲಿ ಕಿಡಿಗೆದರುತ್ತಾ ಹಾರಿತು. ಮತ್ತೊಂದು ಬಾಣವೂ ಹಾಗೆಯೇ ಕಿಡಿಗೆದರುತ್ತಾ ವೇಗವಾಗಿ ನೆಗೆದು ಮುಂದೆ ಬಿಟ್ಟ ಬಾಣದ ಹಿಂದಿನ ತುದಿಯನ್ನು ಸೇರಿತು. ಈ ರೀತಿಯಲ್ಲಿ ಅರ್ಜುನನು ಪ್ರಯೋಗಿಸಿದ ಕ್ರೂರವಾದ ಬಾಣಗಳು, ತುದಿಯಲ್ಲಿ ಕಿಡಿಗೆದರುತ್ತಾ ಒಂದನ್ನೊಂದು ಒತ್ತಿಕೊಂಡು ಬರುತ್ತಿರಲು, ಅವು ಕಿಡಿಗಳೇ ಸಾಲಿಟ್ಟಂತೆ ಕಂಗೊಳಿಸಿದುವು. ವಚನ: ಮತ್ತೆ ೪೩. ಸಮುದ್ರವು ಮೇರೆಯನ್ನು ಮೀರಿ ನುಗ್ಗಲು, ಹೇಗೆ ಎಲ್ಲೆಲ್ಲೂ ಜಲರಾಶಿಯು ತುಂಬುವುದೋ ಆ ರೀತಿಯಲ್ಲಿಯೇ ಗಾಂಡೀವಿಯಾದ ಅರ್ಜುನನು ಬಾಣರಾಶಿ ಗಳನ್ನೇಪ್ರಯೋಗಿಸಲು, ಭೂಮಿ ಯಾವುದು, ಅಂತರಿಕ್ಷ ಯಾವುದು, ಯಾವುದು ಹಬ್ಬಿರುವ ದಿಕ್ಕುಗಳು ಎಂಬುದೇ ತಿಳಿಯದಂತೆ ಎಲ್ಲೆಲ್ಲೂ ಬಾಣಗಳು ತುಂಬಿದುವು. ಬಾಣದ ಅಲುಗಿನಿಂದ ಸಿಡಿದ ಕಿಡಿಗಳೇ ಮಹಾಜ್ವಾಲೆಯಾಯಿತು. ಬಾಣಗಳ ಹೊಳಪೇ ಮಿಂಚಿನ ಗೊಂಚಲಾಯಿತು. ತಡೆಯಿಲ್ಲದೆ ನಿರಂತರವಾಗಿ ಬಂದೆರಗುತ್ತಲಿದ್ದ ಬಾಣಗಳೇ

---

೧ ಪಾಡಿ (ಯ) ೨ ಧಾತ್ರಿಯಿಂ (ಯ) ೩. ರ್ಜರರಂ (ಯ)

ಉತ್ಪಲ ಮಂಜಿನ ಪುಂಜವೊತ್ತರಿಸಿ ಮುತ್ತಿ೧ ಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ
ತಂ ಜವದಿಂ ಪಳಂಚೆ ಗಿರಿ ಕಂಪಸವಾಂಪುದೆ ೨ಪಾಂಡುಪುತ್ರನಾ
ತಂ೨ ಜಡಿದೊತ್ತೆ ಜಾಱಿ೩ ಪೆಱಸಾರ್ವನೆ ಧೀರಧನಂಜಯಾಂಬಕಂ ೪೪

ಮೊರೆದು ಪರಿತಂದು ಮಶಕೋ
ತ್ಕರಮೆತ್ತಂ ಕವಿಯೆ ಸೆಡೆವುದೇಂ ಮದಗಜಮಾ
ನರನೆಚ್ಚ ಗಱಿಗಣೆಗಳಾ
ವರಿಸಿ ಕರಂ ಮುತ್ತೆ ಮೃತ್ಯುಹರನಂಜುವನೇ ೪೫

ವಚನ ಆಗಳ್

ಚಂಪಕ ಮುಳಿದು ಗಜಾಸ್ಯನಬ್ಬರಿಸಿದಂ ಕೆರಳ್ದಂ ಗುಹನಲ್ಲಿ ರೋಷಮು
ಜ್ಜ್ವಳಿಸಿ ಗಣಾಳಿ ಗರ್ಜಿಸಿದುದಾ ನರನೇಟ್ಗೆಗೆ ಚಿತ್ರಮಿಂತಿದೇಂ
ಕಳಕಳಮೆನ್ನ ಭಕ್ತನಿವನೀತನೊಳಾಂಪ ವಿನೋದಮುಂಟು ನಿ
ಶ್ಚಳತೆಯೊಳಿರ್ಪುದೆಂದವರ್ಗೆ ನೇಮಿಸಿದಂ ಕರುಣಾಬ್ಧಿ ಶಂಕರಂ ೪೬

ಜಲಧಾರೆಯಾಯಿತು. ೪೪. ಪಾಂಡುಪುತ್ರನಾದ ಅರ್ಜುನನು ತನ್ನನ್ನು ಧಿಕ್ಕರಿಸುತ್ತಾ, ನುಗ್ಗಿ ಮೇಲ್ಬಾಯ್ದರೆ ನಿಟಿಲಾಕ್ಷನಾದ ಪರಶಿವನು ಕದಲಿ ಹಿಮ್ಮೆಟ್ಟುವನೇ ? ಇಲ್ಲವಲ್ಲಾ. ಅರ್ಜುನನು ಶಿವನ ಮೇಲೆ ಬಾಣವರ್ಷವನ್ನು ಸುರಿದು ಮುತ್ತಿದುದು, ಮಂಜಿನ ರಾಶಿಯು ಸೂರ್ಯನನ್ನು ಮುಸುಕಿದಂತೆಯೂ. ಮಿಂಚುಹುಳುಗಳ ಗುಂಪು ಕಾಳ್ಗಿಚ್ಚನ್ನು ಮುತ್ತಿದಂತೆಯೂ, ಬಿರುಗಾಳಿಯು ಪರ್ವತವನ್ನು ಆಕ್ರಮಿಸಿದಂತೆಯೂ ಆಯಿತು. ಶಿವನು ಹೆದರಲಿಲ್ಲ, ಬೆದರಲಿಲ್ಲ, ನಿಂತಲ್ಲಿಂದ ಕದಲಲೂ ಇಲ್ಲ ! ೪೫. ಝೊಯ್ಯೆಂದು ಶಬ್ದ ಮಾಡುತ್ತಾ ಸೊಳ್ಳೆಗಳ ಗುಂಪು ಬಂದು ಸುತ್ತಲೂ ಕವಿದರೆ ಮದಿಸಿದ ಆನೆಯು ಹೆದರುವುದೇ ? ಹಾಗೆಯೇ, ಅರ್ಜುನನು ಪ್ರಯೋಗಿಸಿದ ಬಾಣಗಳು ನುಗ್ಗಿ ಬಂದು ತನ್ನನ್ನು ಸುತ್ತಲೂ ಮುತ್ತಿದರೂ ಸಹ ಶಿವನು ಸ್ವಲ್ಪವೂ ಅಂಜಲಿಲ್ಲ. ವಚನ : ಆಗ ೪೬. ಅದನ್ನು ಕಂಡ ಗಣಪತಿಯು ಕೋಪಗೊಂಡು ಅರ್ಜುನನ ಉದ್ಧಟತನಕ್ಕೆ ಅಬ್ಬರಿಸಿದನು, ಷಣ್ಮುಖನು ರೇಗಿದನು, ರೋಷವುಕ್ಕಿ ಪ್ರಥಮ ಗಣಗಳು ಗುಡುಗಿದುವು. "ಏನು ಆಶ್ಚರ್ಯ, ಈ ಗಡಿಬಿಡಿಯೇಕೆ ? ಇವನು ನನ್ನ ಭಕ್ತನೇ. ಇವನೊಡನೆ ಸ್ವಲ್ಪ ವಿನೋದವಾಗಿರೋಣ. ನೀವು ಏನೂ ಯೋಚಿಸಬೇಡಿ"

---

೧ ಮುತ್ತೆ (ಜ) ೨-೨ ಪಾರ್ಥಪುತ್ರಜಂ । ತಂ (ಚ, ಯ) ೩ ಪಾರಿ (ಯ)

ವಚನ ಅನಂತರಮಾ ಶಬರಶಂಕರಂ ಪ್ರಚಂಡಧನುರ್ದಂಡಮಂ ಕೆಯ್ಕೊಂಡು ತಿರುವೊಯ್ದು ಜೇವೊಡೆದುಬಾಣಮಂ ಪೂಡಿ ತೆಗೆನೆಚೆದೆಚ್ಚಾಗಳ್

ನರನೆಚ್ಚ ಕಣೆಗಳಂ೧ ಕ
ತ್ತರಿಸಿದುವವನೊಡಲನಂಟದಿಳೆಗೆಜಗಿದುವೀ
ಶ್ವರನಾಣತಿಯಿಂದಾತನ
ಪೊರೆಯೊಳ್ ಪುರಮಥನನೆಚ್ಚ ಪೊಸಕೂರ್ಗಣೆಗಳ್ ೪೭

ಮಹಾಸ್ರಗ್ಧರೆ ಶರವೃಂದಂ ಮಾಣದೆಲ್ಲಂ ಕಡಿವಡೆ೨ದಿಳೆಯೊಳ್ ಬೀಟೆ ಕರ್ಣಾರಿ ಕೋಪಾ
ತುರಚಿತ್ತಂ ಮತ್ತಮೆಚ್ಚಂ ಕಿವಿವರೆಗೆಸೆಗಿದುದ್ದಂಡಕಾಂಡಂಗಳಂ ಶಂ
ಕರನಾ ಬಾಣಂಗಳಂ ಖಂಡಿಸಿ ಮಗುಳ್ದು ನಿಜಾಸ್ತ್ರಂಗಳಿಂದೆಚ್ಚನಾಗಳ್
ಬೆರಲೆತ್ತುತ್ತೆಯ್ದೆ ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ ೪೮

ಎಲೆ ಶಬರ ನಿನ್ನ ಪೃಥುಭುಜ
ಬಲಮೊಳ್ಳಿತ್ತೆಸುಗೆ ಪೊಸತು ಬಿಲ್ಲಾಳ್ತನದೊಳ್
ಕಲಿ೩ ನೀನಲ್ಲದೆ ಪೆಜರಾರ್
ಚಲದಿಂ ಸಮನೆನಿಸಿ ಕಾದಿದಯ್ ಬಿಡದೆನ್ನೊಳ್ ೪೯

ಎಂದು ಕರುಣಾಳುವಾದ ಶಿವನು ಅವರಿಗೆ ಅಪ್ಪಣೆ ಮಾಡಿದನು. ವಚನ : ಆಮೇಲೆ ಶಬರಶಂಕರನು ಪ್ರಬಲವಾದ ಧನುಸ್ಸನ್ನು ಹಿಡಿದು, ಹೆದೆಯನ್ನು ಕೊಪ್ಪಿಗೆ ಬಿಗಿದು, ಠಂಕಾರವನ್ನು ಮಾಡಿ, ಬಾಣವನ್ನು ಜೋಡಿಸಿ, ಸೆಳೆದು ಬಾಣವನ್ನು ಬಿಟ್ಟನು. ೪೭. ಶಿವನು ಬಿಟ್ಟ ಬಾಣಗಳು ಅರ್ಜುನನ ಬಾಣಗಳನ್ನು ತುಂಡರಿಸಿದುವು. ಆದರೆ ಮಾತ್ರ, ಶಿವನಿಚ್ಛೆಯಂತೆ ಅರ್ಜುನನ ಶರೀರವನ್ನು ನಾಟದೆ ಹೊಸಹರಿತವಾದ ಬಾಣಗಳು ಅವನ ಪಕ್ಕದಲ್ಲಿ ಬಿದ್ದುವು. ೪೮. ತಾನು ಪ್ರಯೋಗಿಸಿದ ಬಾಣರಾಶಿ ಗಳೆಲ್ಲವೂ ತುಂಡರಿಸಿ ನೆಲದಲ್ಲಿ ಬಿದ್ದುದನ್ನು ಕಂಡು ಅರ್ಜುನನು ಕೋಪಗೊಂಡು, ಆತುರಾತುರವಾಗಿ ಪ್ರಬಲವಾದ ಬಾಣಗಳನ್ನು ಹೂಡಿ, ಕಿವಿವರೆಗೆ ಸೆಳೆದು ಪ್ರಯೋಗಿ ಸಿದನು. ಶಿವನು ಆ ಬಾಣಗಳನ್ನು ಕಡಿದು, ಪುನಃ ತಾನು ಬಾಣಪ್ರಯೋಗ ಮಾಡಿದನು. ಅದನ್ನು ಕಂಡು ಅರ್ಜುನನು ಅವನ ಪ್ರಬಲ ಪರಾಕ್ರಮವನ್ನು ಮೆಚ್ಚುತ್ತಾ, ಬೆರಲನ್ನು ಮೇಲಕ್ಕೆತ್ತಿ, ಮನಃಪೂರ್ವಕವಾಗಿ ಹೊಗಳಿದನು. ೪೯. "ಎಲೊ, ಬೇಡನೆ ! ನಿನ್ನ ಭುಜಪರಾಕ್ರಮವು ಶ್ಲಾಘನೀಯವಾದುದು. ನಿನ್ನ ಬಾಣಪ್ರಯೋಗಕೌಶಲವೂ ಹೊಸದಾಗಿದೆ. ಬಿಲ್ಲುಗಾರರಲ್ಲಿ ಪ್ರತಾಪಿಯು ನೀನಲ್ಲದೆ ಮತ್ತಾರಿರುವರು ? ನನ್ನ ಜತೆಯಲ್ಲಿಯೇ ಸಮ ಸಮನಾಗಿ ನಿಂತು ಹಿಂಜರಿಯದೆ, ಪೌರುಷದಿಂದ ಹೋರಾಡಿದೆ

---

೧ ಕಣೆಗಳವ (ಚ) ೨ ಕಡಿಯೊಡೆ (ಚ) ೩ ಬಲ (ಚ)

ಆರರೆ ಭವದೀಯಸಾಹಸ
ದಿರವತಿಶಯಮೆಂದು ಪೊಗೞ್ದು ತೊಟ್ಟೆಚ್ಚಂ ದ
ಳ್ಳುರಿ ಸೂಸುವ ಧಾರೆಯ ಕಿಡಿ
ಸುರಿವ ನಿಶಾತಾಸ್ತ್ರಬೃಂದಮಂ ಕಲಿಪಾರ್ಥಂ ೫೦

ಶರವರ್ಷಮನೇ ಕಱೆವುದು
ಪಿರಿದೆ ಮಹಾಕಾಲಮೇಘಮರ್ಜುನಜಲದಂ
ಭರದಿಂದಿದಿರಾಂತನವಧಿ
ಶರವರ್ಷಮನಲ್ಲಿ ಕಱೆದುದಿದು ಚಿತ್ರತರಂ ೫೧

ಮತ್ತೇಭ ಶಿವನಿಂ ದಿವ್ಯತರಾಸ್ತ್ರಮಂ ಪಡೆಯಲೇೞ್ತಂದಂದು[1] ಪಾರ್ಥಂ ಮಹೋ
ತ್ಸವದಿಂದಂ ತನಗುಳ್ಳ ಸರ್ವಶರಮಂ ದೇವೇಶ ನೋಡೆಂದು ತೋ
ರ್ಪವೊಲೆಚ್ಚಂ ಕಡಿದಾ ಕಳಂಬಮನಿತಂ ನಿನ್ನಿಷ್ಟಮಾದಸ್ತ್ರಮಂ
ತವೆ ನೋಡೆಂದವನಲ್ಲಿ ತೋಱುವವೊಲಾತಂಗೆಚ್ಚನುಗ್ರಾಂಬಕಂ ೫೨

ವಚನ ಅಂತೆಚ್ಚ ಪುಳಿಂದಪುರಾಂತಕನ ಬಿಲ್ಬಿನ್ನಣಕ್ಕೆ ಬೆಱಗುವಟ್ಟು

ಯಲ್ಲಾ ! ೫೦. ಎಲೆ, ಎಲಾ, ಆಶ್ಚರ್ಯವೇ ! ನಿನಗಿರುವ ಪರಾಕ್ರಮವು ಅತಿಶಯವಾದುದೇ ಸರಿ" ಎಂದು ಶಿವನನ್ನು ಮೆಚ್ಚಿ ಹೊಗಳುತ್ತಾ, ಅರ್ಜುನನು ಮತ್ತೆ ಕಿಡಿಗಳನ್ನುಗುಳುತ್ತಿರುವ ಚೂಪಾದ ಬಾಣಗಳ ರಾಶಿಯನ್ನೇ ಶಿವನ ಮೇಲೆ ಸುರಿಸಿದನು. ೫೧. ಬಹಳ ಕಪ್ಪಾಗಿರುವ ಮೋಡಗಳು ಮಳೆಯನ್ನು ಸುರಿಸುವುದು ಹೆಚ್ಚೋ ? ಅಥವಾ ಬಿಳಿಯ ಮೇಘವು ಕೊನೆಯೇ ಇಲ್ಲದಂತೆ ನಿರಂತರವಾಗಿ ಮಳೆಗರೆಯುವುದು ಅತಿಶಯವೊ ? ಎನ್ನುವಂತೆ ಅರ್ಜುನನು ಶಿವನ ಮೇಲೆ ಬಾಣವರ್ಷವನ್ನು ಸುರಿಸಿದನು.[1] ೫೨. ಶಿವನ ಅನುಗ್ರಹದಿಂದ ತನ್ನಲ್ಲಿದ್ದ ದಿವ್ಯಾಸ್ತ್ರಗಳಿಗಿಂತಲೂ ಮಿಗಿಲಾದ ಅಸ್ತ್ರಗಳನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಅರ್ಜುನನು ಮಹೋತ್ಸಾಹದಿಂದ ತನ್ನಲ್ಲಿದ್ದ ಎಲ್ಲಾ ಬಾಣಗಳನ್ನೂ "ಪರಮೇಶ್ವರನೇ, ಇವನ್ನು ನೀನು ನೋಡು", ಎಂದು ತೋರಿಸುವನೋ ಎಂಬಂತೆ ಬಾಣಗಳನ್ನು ಪ್ರಯೋಗಿಸಿದನು. ಶಿವನು ಆ ಬಾಣಗಳನ್ನೆಲ್ಲಾ ಖಂಡಿಸಿ, "ನಿನಗಿಷ್ಟವಾದ ಬಾಣವನ್ನು ಆರಿಸಿಕೋ" ಎಂದು ಅವುಗಳನ್ನು ತೋರುವಂತೆ, ತಾನು ಬಾಣವನ್ನು ಪ್ರಯೋಗಿಸಿದನು. ವಚನ : ಆ ರೀತಿಯಲ್ಲಿ ಬಾಣಗಳನ್ನು ಸುರಿಸಿದ ತ್ರಿಪುರಾಂತಕನ ಬಿಲ್ಲವಿದ್ಯೆಯ ನೈಪುಣ್ಯಕ್ಕೆ ಅರ್ಜುನನು ಆಶ್ಚರ್ಯಚಕಿತನಾಗಿ,

---

೧-೧ ಲೆಂದೇಳ್ತಂದು (ಮ)

[1] ಮಹಾಕಾಲಮೇಘ = ಕಪ್ಪಾದ ಮೋಡ ; ಶಿವನೆಂಬ ಮೋಡ. ಮಹಾಕಾಲ = ಶಿವ. ಅರ್ಜುನ ಜಲದ = ಬಿಳಿಯದಾದ ಶರತ್ಕಾಲದ ಮೋಡ ; ಅರ್ಜುನನೆಂಬ ಮೋಡ. (ರಂ)

ಚಂಪಕ ನರಸುರ೧ದಾನವಾದಿಗಳೊಳೆನ್ನ ಶರಾಪತಿಗೊಡ್ಡಿ ನಿಲ್ವರಿ
ಲ್ಲರಿದರಿದಾರ್ಪುಗುಂದದಿದಿರೊಳ್ ನೆಱೆ ನಿಂದೆ ಕಿರಾತರಲ್ಲಿ ನೀ
ನುರುತರಸಾಹಸಾಂಕನೆನಿಪಯ್ ನಿನಗಾರ್ ಸರಿವರ್ಪರಕ್ಕದೋ
ಸರಿಸದೆ ನಿಲ್ವುದಿನ್ನುಮೆನುತುಂ ಪೊಗೞ್ದಾತನನೊಲ್ದು ಫಲ್ಗುನಂ ೬೩

ಜಗಜಗಿಸುವ ಮೂಡಿಗೆಯಿಂ
ತೆಗೆದುಂ ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ
ಮಗುೞ್ದಿಟ್ಟನಾರ್ಪು ಮಿಗೆ ಪ
ನ್ನಗಧರನಂ ಪಟುಪರಾಕ್ರಮಂ ಪಾಂಡುಸುತಂ ೬೪

ಮಹಾಸ್ರಗ್ಧರೆ ಎನಿತಂ ತಾನೆಚ್ಚನಸ್ತ್ರಪ್ರಕರಮನಭಿಮಂತ್ರಾನ್ವಿತಂಗೆಯ್ದು ಕೂರ್ಪಿಂ
ದನಿತಂ ಕಾಲಾಂತಕಂ ನುಂಗಿದನಸವಸದಿಂದಂತದಂ ಕಂಡುಮೀ ಶ
ಕ್ತಿನಿಯುಕ್ತಂ ವ್ಯಾಧನಲ್ಲಾವನೊ ತಿಳಿವಪೆನೆಂಬೀ ವಿಚಾರಕ್ಕೆ ಪಕ್ಕಾ
ದನೆ ಪಾರ್ಥಂ ಕ್ಷಾತ್ರದುಸ್ತಾಮಸಮಡಸಿದವಂಗಕ್ಕುಮೇ ಸದ್ವಿವೇಕಂ ೬೫

೬೩. "ದೇವ, ದಾನವ, ಮಾನವಾದಿಯಾಗಿ ಯಾರೂ ಸಹ ನನ್ನ ಬಾಣಗಳ ಹೊಡೆತಕ್ಕೆ ಕದಲದೆ, ಎದುರಿಸಿನಿಲ್ಲುವ ವೀರರಿಲ್ಲ. ಹೀಗಿರಲು ಸ್ವಲ್ಪವೂ ಹೆದರದೆ, ಶಕ್ತಿಗುಂದದೆ ನೀನು ಎದುರಿಸಿ ನಿಂತೆ. ಬೇಡರಲ್ಲೆಲ್ಲಾ ನೀನು ಪರಮ ಸಾಹಸಿಯೇ ಸರಿ. ಆಶ್ಚರ್ಯ, ಪರಮಾಶ್ಚರ್ಯವು, ಯಾರು ತಾನೆ ನಿನ್ನ ಸಮಾನರಾಗಬಲ್ಲರು ?" ಎಂದು ಅವನನ್ನು ಹೊಗಳುತ್ತಾ ಅರ್ಜುನನು, "ಈಗ ತಪ್ಪಿಸಿಕೊಂಡು ಜಾರದೆ ನಿಲ್ಲು" ಎಂದು ೬೪. ಬತ್ತಳಿಕೆಯಿಂದ ಉಜ್ಜ್ವಲವಾಗಿ ಬೆಳಗುತ್ತಿದ್ದ ದಿವ್ಯಾಸ್ತ್ರಸಮೂಹವನ್ನು ತೆಗೆದು, ಅವನ್ನು ಮಂತ್ರಿಸಿ, ಬಲಸಮೃದ್ಧವನ್ನಾಗಿ ಮಾಡಿ, ಮಹಾಪರಾಕ್ರಮಿಯಾದ ಅರ್ಜುನನು ಪುನಃ ಸರ್ಪಭೂಷಣನ ಮೇಲೆ ಪ್ರಯೋಗಿಸಿದನು. ೬೫. ಎಷ್ಟೆಷ್ಟು ದಿವ್ಯಾಸ್ತ್ರಜಾಲವನ್ನು ಅಭಿಮಂತ್ರಿಸಿ, ತನ್ನಲ್ಲಿದ್ದ ಶಕ್ತಿಯನ್ನೆಲ್ಲಾ ಬಳಸಿ ಪ್ರಯೋಗಿಸಿದನೋ ಅವನ್ನೆಲ್ಲಾ ಮೃತ್ಯುಂಜಯನಾದ ಶಿವನು ನಿರಾಯಾಸವಾಗಿ ಅಡಗಿಸಿದನು. ಅದನ್ನು ನೋಡಿದ ಮೇಲಾದರೂ, 'ಇಷ್ಟು ಸಾಮರ್ಥ್ಯವುಳ್ಳವನು ಕೇವಲ ಬೇಡನಾಗಿರಲಾರನು. ಈತನು ಯಾರೆಂಬುದನ್ನು ತಿಳಿಯಬೇಕು' ಎಂದು ಪಾರ್ಥನು ವಿವೇಚಿಸಲಿಲ್ಲ. ಕ್ಷತ್ರಿಯೋಚಿತವಾದ ಶೌರ್ಯವೆಂಬ ಮಹಾ ತಮೋಗುಣವು ಆವರಿಸಿದ್ದರೆ, ಅವನಿಗೆ ಹೇಗೆ

---

೧ ಸುರನರ (ಯ)

ಗಿಖಾಂಡವದಹನದೊಳಂದಾಗಿ
ಪಾಂಡವನಂ ಪೊರ್ದಿದಕ್ಷಯಾಸ್ತ್ರಾಂಬುಧಿಯುಂ
ಖಂಡಪರಶುಪ್ರತಾಪಾ
ಖಂಡಿತಬಡಬಾಗ್ನಿ ಪೀರ್ದುದಿನಿಸುಜಿಯದವೊಲ್ ೫೬

ಸವೆದುದು ನಿಷಂಗಶರತತಿ
ಸವೆಯದು ಕೋಪಾಗ್ನಿ ತಿಳಿವು ಮಸುಳ್ದುದು ಸಮರೋ
ತ್ಸವಮತಿ ನಿಸಲೆ ಕಳೆಯೇಱಿದುದಿ
ದವಂಗೆ ಪಶುಪತಿಯ ಮಾಯೆಯಂ ಮೀಱುವರಾರ್ ೫೭

ಉತ್ಪಲ ಶಂಕರನಂಘ್ರಿಪಂಕಜದ ಸೇವೆಗೆ ಕಂಟಕನಾದನೀ ಪುಳಿಂ
ದಂ ಕರಮೀತನುರ್ಕನುಗಿಪೆಂ ಬಿಡೆನೆಂದು ಜಯೋದ್ಯಮಕ್ಕೆ ನಿಃ
ಶಂಕತೆವೆತ್ತು ನಿರ್ಭರದೆ ಗರ್ಜಿಸಿ ಮುಂಬರಿದೆತ್ತಿ ಚಾಪದಿಂ
ದಂ ಕಲಿಪಾರ್ಥನಪ್ಪಳಿಸಿದಂ ಪಟಿ ಪೊರ್ದದ ಚಂದ್ರಮೌಳಿಯಂ ೫೮

ದಂಡೆಗೊಳುತ್ತದಂ ಪೊಳೆದು ಚಿಮ್ಮಿದನೀಶ್ವರನಲ್ಲಿ ಮೇಣದಂ
ಕಂಡು ಕನಲ್ಕೆಯಿಂ ಮುಗುಟ್ದು ಬಳ್ಕಿದನೀ ಹತಿಗೆಂದು ಚಂಡಕೋ

ತಾನೇ ಉತ್ತಮವಾದ ವಿಮರ್ಶಜ್ಞಾನವಿರಲು ಸಾಧ್ಯ ? ೫೬. ಖಾಂಡವವನ ದಹನ ಕಾಲದಲ್ಲಿ ಅಗ್ನಿಯಿಂದ ಅರ್ಜುನನಿಗೆ ಅನುಗ್ರಹೀತವಾದ ಅಕ್ಷಯ ಬಾಣಗಳೆಂಬ ಸಮುದ್ರ ವನ್ನು ಕಿರಾತರುದ್ರನ ಪ್ರತಾಪವೆಂಬ ಬಡಬಾಗ್ನಿಯು ಸಂಪೂರ್ಣವಾಗಿ ಇಂಗಿಸಿಬಿಟ್ಟಿತು ! ೫೭. ಬತ್ತಳಿಕೆಯಲ್ಲಿದ್ದ ಬಾಣಗಳ ರಾಶಿಯೆಲ್ಲವೂ ಕ್ಷೀಣವಾಯಿತು. ಆದರೆ ಅರ್ಜುನನ ಕೋಪಜ್ವಾಲೆಯಂತೂ ತಗ್ಗಲಿಲ್ಲ. ವಿವೇಕವು ಮಲಿನವಾಯಿತು. ಯುದ್ಧಮಾಡ ಬೇಕೆಂಬ ಬುದ್ಧಿಯೇ ಮೇಲ್ಗೈಯಾಯಿತು ; ಹೆಚ್ಚಾಗಿ ವಿಜೃಂಭಿಸಿತು. ಪರಶಿವನ ಮಾಯೆಯನ್ನು ಮೀರಲು ಯಾರಿಗೆ ತಾನೇ ಸಾಧ್ಯವಾಗುವುದು ? ೫೮. 'ಶಿವನ ಪಾದಕಮಲಗಳ ಆರಾಧನೆಗೆ ಈ ಬೇಡನು ಅಡ್ಡಿಯಾದನಲ್ಲಾ, ಇವನ ದರ್ಪವನ್ನು ಚೆನ್ನಾಗಿ ಮುರಿಯದೆ ಬಿಡುವುದಿಲ್ಲ !' ಎಂದುಕೊಂಡು, ಅರ್ಜುನನು ಶಿವನನ್ನು ಗೆಲ್ಲುವ ಹವಣಿಕೆಯಲ್ಲಿ ಯಾವ ಸಂಶಯವನ್ನೂ ಮನಸ್ಸಿಗೆ ತಾರದೆ, ಗಾಂಡೀವಬಿಲ್ಲನ್ನು ಎತ್ತಿ, ಸಿಂಹನಾದ ಮಾಡುತ್ತಾ ದೋಷರಹಿತನಾದ ಶಿವನನ್ನು ಅದರಿಂದ ಅಪ್ಪಳಿಸಿದನು. ೫೯. ಶಿವನು ಆ ಧನುಸ್ಸನ್ನು ತನ್ನ ಕಂಠದಲ್ಲಿ ಪ್ರಕಾಶಿಸುವ ಹಾರದಂತೆ ಸ್ವೀಕರಿಸಿ, ಅನಂತರ ಅದನ್ನು ತೆಗೆದು ಹಿಂದಕ್ಕೆಸೆದನು. ಅದನ್ನು ಕಂಡ ಅರ್ಜುನನು, "ಈ ಏಟನ್ನು ತಪ್ಪಿಸಿಕೊಂಡನಲ್ಲಾ" ಎನ್ನುತ್ತಾ, ಮತ್ತೆ ಆ ಬಿಲ್ಲನ್ನು ಎತ್ತಿಕೊಂಡು, ಶಿವನ

---

೧-೧ ಕೊಂಡಾವದಹನದೊಳಂ (ಚ, ತ) ೨-೨ ಕಳೆಯೇರಿದುದಂ (ಯ); ಮಿಗೆ ಕಳೆಯೇರಿದು (ರ)

ದಂಡಮನೆತ್ತಿ ಪೊಯ್ದನವನೀಶನ ಪೇರುರಮಂ ಕಪರ್ದಿ ಮುಂ
ಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುವಂ ಸೆಳೆದಂ ಕರಾಗ್ರದಿಂ ೫೯

ವಚನ ಅಂತುಮಾ ಗಾಂಡೀವಕೋದಂಡಮನುದ್ದಂಡಚಂಡಿಕಾರಮಣಂ ಸೆಳೆದುಕೊಳ್ವುದುಮತಿ ರೋಷಕಷಾಯಿತಕಟಾಕ್ಷನಾಗಿ

ಚಂಪಕ ತಿಳಿವಣಮಿಲ್ಲದೆಟ್ಟಿರದ ತಾಮಸಂಪಕದೊಳಾಟ್ದಿಡಾಯುಧಂ
ದಳಿದೊಱಿಯಿಂದೆ ಕೀಳ್ತು ಜಡಿದಾರ್ದು ಪಳಂಚಿ ಕಿರಾತ ಬೀಱಿನು
ತ್ತೊಳಱ್ ಕಡಂಗಿ ಪೊಯ್ದನಭವಾಂಗವನರ್ಜುನನಾ ಪುರಾರಿ ಕೆಯ್
ಚಳಕದಿನೀಟ್ಟುಕೊಂಡನದನಾಗಳೆ ಕೆಯ್ ಬಱಿದಾಯ್ತು ಪಾರ್ಥನಾ ೬೦

ಶರತತಿಯೆಲ್ಲಂ ಬಯಲಾ೧ಗಿ
ಯ್ತುರುಧನುವುಂ ಪೋಯ್ತುಡಾಯುಧಂ ಜಗುಟ್ದುದು ಕೋ
ಡಿರ೨ದುದಿರ್ದಿಭದ೨ವೊಲಿರ್ದಂ
ನರನೀಶ್ವರನೊಡನೆ ಸದರಮಪ್ಪುದೆ ಸಮರಂ ೬೧

ಮತ್ತೇಭ ಶರಚಾಪಾಯುಧಮೆಲ್ಲಮುಂ ಜಗುಱ್ದೊಡೇಂ ಬೆನ್ನಿತ್ತನೇ ಸಾಧ್ವಸಾಂ
ಕುರಮುಂ ತಾಳ್ದನೆ ಪಾರ್ಥನಂದಮಮ ಶೌರ್ಯೋದ್ರೇಕದಿಂದುರ್ಬಿ ಪೆ

ವಿಶಾಲವಕ್ಷಸ್ಥಲವನ್ನು ಬಾರಿಸಿದನು. ಶಿವನು ಮುಗುಳುನಗೆಯೊಡನೆ ಮುಂದೆ ನಿಂತುಕೊಂಡು, ಅರ್ಜುನನ ಕೈಯಿಂದ ಆ ಬಿಲ್ಲನ್ನು ಕಸಿದುಕೊಂಡನು. ವಚನ : ಆ ರೀತಿಯಲ್ಲಿ ಆ ಗಾಂಡೀವ ಧನುಸ್ಸನ್ನು ಉಗ್ರಪ್ರತಾಪಿಯಾದ ಉಮಾರಮಣನು ಕಸಿದುಕೊಳ್ಳಲು, ಮಹಾಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ೬೦. ವಿವೇಕವು ಸ್ವಲ್ಪವೂ ಇಲ್ಲದೆ, ಪ್ರವೃದ್ಧಮಾನವಾಗುತ್ತಲಿದ್ದ ತಮೋಗುಣವಿಕಾರವೆಂಬ ಕೆಸರಿನಲ್ಲಿ ಸಿಕ್ಕಿಕೊಂಡು, ಅರ್ಜುನನು ಒರೆಯಿಂದ ಕತ್ತಿಯನ್ನು ಸೆಳೆದು ಝಳಪಿಸಿ, ಅಬ್ಬರಿಸುತ್ತಾ ಮೇಲೆ ಬಿದ್ದು, "ಬೇಡನೇ, ಬಿದ್ದುಹೋಗು" ಎಂದು ಹರಟಿ, ಕೋಪದಿಂದ ಶಿವನ ಶಿರಸ್ಸಿಗೆ ಹೊಡೆದನು. ಶಿವನು ತನ್ನ ಹಸ್ತಲಾಘವದಿಂದ ಆ ಕತ್ತಿಯನ್ನು ಆ ಕ್ಷಣ ಕಸಿದುಕೊಂಡನು. ಅರ್ಜುನನ ಕೈಯು ಮತ್ತೆ ಬರಿದಾಯಿತು ; ೬೧. ಬಾಣಸಮೂಹವೆಲ್ಲವೂ ಬರಿದಾಯಿತು. ಗಾಂಡೀವಧನುಸ್ಸೂ ಹೋಗಿಬಿಟ್ಟಿತು. ಕತ್ತಿಯೂ ಜಾರಿಬಿದ್ದಿತು. ದಂತಗಳು ಮುರಿದುಬಿದ್ದ ಆನೆಯಂತೆ ಅರ್ಜುನನು ನಿಶ್ಶಸ್ತ್ರನಾದನು. ಜಗದೀಶ್ವರನೊಡನೆ ಹೋರಾಟವು ಯಾರಿಗಾದರೂ ಸುಲಭಸಾಧ್ಯವೇ ? ೬೨. ಬಿಲ್ಲು ಹೋಯಿತು ; ಬಾಣಗಳೆಲ್ಲ ಹೋದುವು ; ಇದ್ದ ಖಡ್ಗವೂ ಹೋಯಿತು. ಇನ್ನು ನಿರಾಯುಧನಾದೆನಲ್ಲಾ ಎಂದುಕೊಂಡು ಹೆದರಿ ಅರ್ಜುನನು ಹಿಂಮೆಟ್ಟಲಿಲ್ಲ.

---

೧ ಬರಿದಾ (ಯ) ೨-೨ ಡುಡಿದಿಭದ (ಯ); ಡಿರರ್ದಿಭದ (ರ)

ರ್ಮರಗೋಂಬಂ ಮುಱಿದಿಟ್ಟನಾತ್ಮಕರದಿಂ ಕಿಟ್ಟಿತ್ತಿ ಕಲ್ಗುಂಡ ಬಲ್
ಸರಿಯಂ ಸೂಡಿದನಂತದಂ ಕಡಿದನೊಂದಂಬಿಂದೆ ಮೃತ್ಯುಂಜಯಂ ೬೨

ವಚನ ಅಂತು ಕಡಿದು

ಎಲೆ ಗೊರವ ಚಾಪಬಾಣಾ
ವಲಿಯಂ ಖಡ್ಗಮುಮನಕಟ ನೀಗಿದೆ ನಿನ್ನೀ
ಚಲಮಂ ಬಲಮುಮನಿನ್ನೊಂ
ದಲಗುಳ್ಳೊಡೆ ತಂದು ತಾಳ್ದು ಮೆಱೆ ಬೞಕೆನ್ನೊಳ್[1] ೬೩

ಇಲ್ಲದೊಡಿಲ್ಲೆನ್ನಿತ್ತಪೆ
ನಿಲ್ಲಿಯೆ ನಿಂತಾಯಿಯುಧಂಗಳಂ ಪಿಡಿ ರಣದೊಳ್
ಗೆಲ್ಲಲ್ಕೆ ಸಾರ್ವ ಕಲಿ ನೀ
ನೆಲ್ಲಂದದಿನೆನ್ನೊಳಾಂತು ಗೆಲ್ವುದೆ ಕಜ್ಜಂ ೬೪

ವಚನ ಎನೆ ಧನಂಜಯಂ ದರಸ್ಮಿತಾಸ್ಯನಾಗಿ

ಅತ್ಯಾಶ್ಚರ್ಯವೆನ್ನುವಂತೆ ತನ್ನ ಪ್ರತಾಪೋನ್ನತಿಯಿಂದ ಉಬ್ಬಿ, ಒಂದು ಮರದ ದೊಡ್ಡ ಕೊಂಬೆಯನ್ನು ಮುರಿದುಕೊಂಡು ಅದರಿಂದ ಶಿವನನ್ನು ಹೊಡೆದನು. ತನ್ನ ಕೈಯಿಂದ ಬಂಡೆಗಳನ್ನು ಎತ್ತಿ, ಅದರ ಸುರಿಮಳೆಯನ್ನೇ ಸುರಿಸಿದನು. ಶಿವನಾದರೋ ಆ ಹೆಗ್ಗೊಂಬೆಯನ್ನೂ, ಬಂಡೆಗಳ ಸುರಿಮಳೆಯನ್ನೂ ಒಂದೇ ಬಾಣದಿಂದಲೇ ತುಂಡರಿಸಿದನು. ವಚನ : ಹಾಗೆ ಕತ್ತರಿಸಿ ಹಾಕಿ, ೬೩. "ಅಯ್ಯೊ ಮುನಿಯೇ, ಬಿಲ್ಲನ್ನೂ ಬಾಣಗಳನ್ನೂ ಮತ್ತು ಕತ್ತಿಯನ್ನೂ ಕಳೆದುಕೊಂಡೆ. ಅಯ್ಯೋ ಪಾಪ ! ಇನ್ನೊಂದು ಆಯುಧವೇನಾದರೂ ಇದ್ದರೆ ಅದನ್ನು ಹಿಡಿದು, ಆ ಮೇಲೆ ನಿನ್ನ ಪ್ರತಾಪವನ್ನಾಗಲೀ, ಚಲವನ್ನಾಗಲೀ ನನ್ನ ಹತ್ತಿರ ತೋರಿಸು. ೬೪. ನಿನ್ನ ಬಳಿ ಆಯುಧಗಳಿಲ್ಲದಿದ್ದರೆ, 'ಇಲ್ಲ, ಕೊಡು ಅಂತ ಕೇಳಿಕೋ', ಕೊಡುತ್ತೇನೆ. ಆಯುಧವನ್ನು ಧರಿಸಿ, ಇಲ್ಲಿಯೇ ನಿಂತು, ಅದೇನು ಶೌರ್ಯ, ಪ್ರತಾಪಗಳಿವೆಯೋ ಅಷ್ಟನ್ನೂ ಬಳಸಿ ನನ್ನೊಡನೆ ಕಾದಿ ಗೆಲ್ಲು. ನೋಡೋಣ ! ನೀನು ಹೇಗಾದರೂ ಗೆಲ್ಲಬೇಕೆಂದು ತಾನೇ ಇಚ್ಛಿಸುವೆ !" ಎಂದು ಶಿವನು ಮೂದಲಿಸಿದನು. ವಚನ : ಅದನ್ನು ಕೇಳಿ ಅರ್ಜುನನು, ತಿರಸ್ಕಾರ

---

೧ ಕೆನ್ನೊಳ್ (ಕ, ಯ) ೨ ನಿನ್ನಾ (ಯ)

ಮತ್ತೇಭ ಇನಿತೋಂದುರ್ಭಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ ಮಾಣ್ಗೆ ಶ
ಸ್ತ್ರನಿಶಾತಾಸ್ತ್ರನಿಕಾಯದಿಂ ನೆಗೆಟ್ವ ಯುದ್ಧಂ ಮುಷ್ಟಿಯುದ್ಧಕ್ಕೆ [೧]ನಿಂ
ದನು[೧]ವಾಗೀಗಳೆ ತೋರ್ಪೆನೆನ್ನ ಬಲವದ್ದೋರ್ದಂಡಶೌರ್ಯಪ್ರವ
ರ್ತನಮಂ ನೋಡುಗೆ ನಿನ್ನ ನಚ್ಚಿನ ಕಿರಾತವ್ರಾತಮೆನ್ನಂದಮಂ ೬೫

ವಚನ ಎಂದು ನುಡಿದ ಸಂಕ್ರಂದನನಂದನನ ನಿರರ್ಗಳ ನಿಸ್ಸಹಾಯಪರಾಕ್ರಮೋಕ್ತಿಗೇಳ್ದು ನೆರೆದ ಗಣಸಂದೋಹಮಮಂದಾಶ್ಚರ್ಯಮಂ ತಾಳ್ದು ನಲವೆರ್ಚೆ ಪೊಗಟ್ತುರೆ ಬಟಿನಿಂದಿರ್ದ ಗಿರಿನಂದನೆಯೊಡನೆ ಗಿರೀಶನಿಂತೆಂದಂ

ಚಂಪಕ ಎಲೆ ಗಿರಿಜಾತೆ ನೋಡಿವನ ಸಾಹಸಮಂ ಸಲೆ ನಾಲ್ಕು ತಿಂಗಳುಂ
ವಿಲಸಿತಜೀರ್ಣಪರ್ಣಮನೆ ಮೆಲ್ದುಟಿದೊಪ್ಪುವ ನಾಲ್ಕು ತಿಂಗಳ
ಗ್ಗಲಿಸಿದ ವಾಯುವಂ ಸವಿದು ನಿಗ್ರಹಿಸಿರ್ದ ಶರೀರದಿಂದದೇಂ
ಕಲಿಯೊ ಕಡಂಗಿ ಕಾದಿದನಿವಂ ಸಮದಂಡಿಯೊಳೆನ್ನೊಳರ್ಜುನಂ ೬೬

ಉತ್ಪಲ ಕಾದುವ ಕೆಯ್ದು ಪೋದುದೆನುತಳ್ಕಿದನೇ ಭುಜಶೌರ್ಯಶಕ್ತಿ[೨] ಗೆಂ
ಟಾದುದೆ ಸಾರವೀರರಸಮೇಂ ಬಿಸಿಗುಂದಿದುದೇ ಸಹಾಯಮಂ
ಸಾದರ[೩]ವೊಚ್ಚತಂ ಪಡೆವೆನೆಂಬಭಿಲಾಷೆಯನಾಳ್ದುದೇ ಮನಂ
ಕಾದಲೆ ನೋಟ್ಪುದೀತನ ಸಮಗ್ರಪರಾಕ್ರಮಮುರ್ವಿ ಪೆರ್ಚು[೪]ಗುಂ ೬೭

ದಿಂದ ಮುಗುಳ್ನಗೆಯನ್ನು ಮುಖದಲ್ಲಿ ತೋರುತ್ತಾ, ೬೫. "ಲೋ ಬೇಡರವನೇ, ಇಷ್ಟೊಂದು ಆರ್ಭಟವೇಕೆ ? ಈ ನಿನ್ನ ಗರ್ವವನ್ನು ಬಿಟ್ಟುಬಿಡು. ಆಯುಧಗಳಿಂದಲೂ ಕ್ರೂರವಾದ ಬಾಣಗಳಿಂದಲೂ ಮಾಡುವ ಯುದ್ಧ ಸಾಕಿನ್ನು. ಈಗ ಮುಷ್ಟಿಯುದ್ಧ ನಡೆಯಲಿ ; ಸಿದ್ಧವಾಗಿ ನಿಲ್ಲು. ನನ್ನ ದೀರ್ಘವಾದ ಬಾಹುಪರಾಕ್ರಮದ ಸವಿಯೆಂತೆಂಬುದನ್ನು ನಿನ್ನ ಮೆಚ್ಚಿನ ಈ ಬೇಡಪಡೆಯು ನೋಡಲಿ !" ವಚನ : ಎಂದು ಹೇಳಿದ ಅರ್ಜುನನ ತಡೆಯಿಲ್ಲದ ಅಸಹಾಯ ಪರಾಕ್ರಮದ ಮಾತಿಗೆ ಪ್ರಮಥಗಣಗಳ ಸಮೂಹವು ವಿಸ್ಮಿತವಾಯಿತು. ಆನಂದೋದ್ರೇಕದಿಂದ ಅರ್ಜುನನನ್ನು ಹೊಗಳಿತು. ಶಿವನು ಸಮೀಪದಲ್ಲಿ ನಿಂತಿದ್ದ ಪಾರ್ವತಿಯೊಡನೆ ೬೬. "ಎಲೆ ಗಿರಿಜೆ, ಇವನ ಪರಾಕ್ರಮವನ್ನು ಸ್ವಲ್ಪ ನೋಡು ! ನಾಲ್ಕುತಿಂಗಳ ಕಾಲ ಬರಿ ತರಗೆಲೆಗಳನ್ನು ತಿಂದು, ಮತ್ತೆ ನಾಲ್ಕುತಿಂಗಳು ವಾಯುಸೇವನೆ ಮಾಡಿ ದೇಹವನ್ನು ದಂಡಿಸಿರುವನು. ಇವನು ಎಂತಹ ವೀರ ! ಹಾಗೆ ದೇಹವನ್ನು ದಂಡಿಸಿದ್ದೂ ಸಹ, ನನ್ನೊಡನೆ ಸಮಶೌರ್ಯದಿಂದ ಹೋರಾಡಿರುವನು. ೬೭. "ಹೋರಾಡಲು ಆಯುಧವಿಲ್ಲದೇಹೋಯಿತೆಂದು ಅಂಜಿದನೆ ? ಇವನ ಬಾಹುಪರಾಕ್ರಮವೇನಾದರೂ ಕಡಮೆಯಾಯಿತೆ ? ಉತ್ಕೃಷ್ಟ ವೀರವೃತ್ತಿಯು ಕಾವಾರಿತೆ ? ಇವನು ಮನಸ್ಸಿನಲ್ಲಿ ಯಾರ ನೆರವನ್ನಾಗಲೀ ಅಪೇಕ್ಷಿಸಿದನೆ ? ಇವನ ಅಖಂಡ

---

೧-೧ ನೀ। ನನು (ಯ) ೨ ಶಕ್ತಿಶೌರ್ಯ (ರ) ೩ ಸಾಧನ (ಚ) ೪ ಪರ್ವು (ಯ)

ಕುಲಗಿರಿ ಸಂಚಲಿಗಿಸಿದೊಡು
ಜ್ವಲದೌರ್ವ ತಂಪನಾಳ್ದೊಡಂ ರವಿಬಿಂಬಂ
ಸಲೆ ಕರ್ಗಿ೨ದೊಡಂ ರಣದೊಳ್
ಕಲಿ ಪಾರ್ಥಂ ಭೀತಿವಟ್ಟು ಬೆನ್ಗೊಟ್ಟ೩ಪನೇ ೧೮

ಮಹಾಸ್ರಗ್ಧರೆ ಹರಿಯಂ೪ಶೋಳಿದ್ಭೂತನೀತಂ ಶುಭಗುಣನಿಧಿ ಮತ್ಪಾದಭಕ್ತಂ ಸಪತ್ನೋ
ತ್ಕರಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್ ತಪಸ್ಸಂ
ಚರಣಂಬೆತ್ತಿಲ್ಲಿ ನಿಂದಂ ಕಿಟಿಯ ಕತದೆ ಮದ್ದ್ವೇಷಮಂ ತಾಳ್ದಿದಂ ಸಂ
ಗರಮಂ ಕೆಯ್ಕೊಂಡಿವಂಗಿತ್ತಪೆನಿವನೆಳಸಿರ್ದಸ್ತ್ರಮಂ ಶೈಲಪುತ್ರೀ ೧೯

ಮತ್ತೇಭ ಶರದಭ್ಯರ್ಥನದಿಂ ತಪಃಸ್ಥಿತಿಯೊಳಿರ್ದುಂ೫ ಶಾಂತಿಯಂ ಮಾಣ್ದು ಸೂ
ಕರನಂ ಬಾಣದಿನೆಚ್ಚಿದಂ ಬಯಸುತೆನ್ನೊಳ್ ಕಾಳೆಗಂಗೆಯ್ದನೀ
ನರನೆಂದಾತನ ದೋಷಮಂ ನೆನೆಯದಾದಂ ಕೀರ್ತಿಸುತ್ತಿರ್ದನೀ
ಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗಕ್ಕುಮೇ ೨೦

ಪರಾಕ್ರಮವು ಇನ್ನೂ ಹೋರಾಟವನ್ನು ನಡೆಸಲು ಕೆರಳುತ್ತಲಿದೆ. ೧೮. ಕುಲಗಿರಿಗಳು ಅಲ್ಲಾಡಲಿ, ಪ್ರಜ್ವಲಿಸುವ ಕಾಳ್ಗಿಚ್ಚು ತಂಪಾಗಲಿ, ಸೂರ್ಯಮಂಡಳವು ನಿಸ್ತೇಜವಾಗಲಿ, ಅರ್ಜುನನು ಮಾತ್ರ ಯುದ್ಧರಂಗದಿಂದ ಹೆದರಿ ಹಿಮ್ಮೆಟ್ಟುವವನಲ್ಲ! ೧೯. ಗಿರಿಜೆ, ಅರ್ಜುನನು ನಾರಾಯಣನ ಅಂಶದಿಂದ ಅವತರಿಸಿದನು. ಸದ್ಗುಣಗಳ ಗಣಿ. ನನ್ನಡಿಗಳನ್ನಾಶ್ರಯಿಸಿದ ಮಹಾಭಕ್ತ. ಶತ್ರುಗಳಾದ ದಾಯಾದಿಗಳನ್ನು ಕೊಲ್ಲುವುದಕ್ಕಾಗಿ, ನನ್ನಿಂದ ದಿವ್ಯಾಸ್ತ್ರಗಳನ್ನು ಪಡೆಯುವುದಕ್ಕಾಗಿ ಇಲ್ಲಿ ತಪಸ್ಸನ್ನು ಮಾಡುತ್ತಿರುವನು. ಹಂದಿಯ ನೆಪದಿಂದ ನನ್ನನ್ನು ವಿರೋಧಿಸಿರುವನು. ನನ್ನೊಡನೆ ಕದನವನ್ನೇ ಪರಿಗ್ರಹಿಸಿದ ಅರ್ಜುನನಿಗೆ, ಇವನು ಕೋರುವ ದಿವ್ಯಾಸ್ತ್ರಗಳನ್ನು ದಯಪಾಲಿಸುವೆನು. ೨೦. ದಿವ್ಯಾಸ್ತ್ರಗಳನ್ನು ಬೇಡುವ ಅಪೇಕ್ಷೆಯಿಂದ, ನಿರಾಹಾರ, ಧ್ಯಾನಾದಿ ನಿಯಮಗಳಿಂದ ತಪೋನಿರತನಾಗಿದ್ದರೂ, ಶಾಂತಿಯನ್ನು ತಡೆದು ಹಂದಿಯನ್ನು ಹೊಡೆದನು. ಆ ಜಯವು ತನ್ನದೆಂಬ ನಿಶ್ಚಯದಿಂದ, ಈ ಅರ್ಜುನನು ನನ್ನೊಡನೆ ಹೋರಾಡಿದನು" ಎಂದು ಅವನ ದೋಷವನ್ನು ಉಪೇಕ್ಷಿಸಿ, ಅವನ ಪರಾಕ್ರಮವನ್ನು ಗಮನಿಸಿ, ಶಿವನು ಪಾರ್ವತಿಯೊಡನೆ ಪ್ರಶಂಸಿಸುತ್ತಿದ್ದನೆಂದರೆ, ಈ ಬಗೆಯ ಶರಣಜನಕಾರುಣ್ಯವೆಂಬುದು

---

೧ ಸಂಚರಿ (ಕ, ಗ, ತ, ರ) ೨ ಕರ್ಗಿ (ಚ, ಜ, ರ); ತರ್ಗಿ (ಯ) ೩ ಬೆನ್ನೊಡ್ಡಿ (ಚ)
೪ ವಂಶೋ (ಯ) ೫ ಇರ್ದಂ (ಚ, ಯ)

ವಚನ ಎನಿಸಿ ಭಕ್ತಜನಪ್ರಣಯಲೀಲಾಲಾಲಸಂ ಶೂಲಧರನೊಯ್ಯನೆ ಪೊಗಟ್ಟಿನಂತರಂ ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗೆವಂದೋರೊರ್ವರುದೀರ್ಣರೋಪಾವೇಶಪರುಷ¹ ಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂಗೆಯ್ಯಲೊಡನೆ

ತುಳ್ಕಿದುದಂಬುಧಿ ತಾರೆಗ
ಳುಳ್ಕಿದುವಾಗಸದೆ ನಡುಗಿದತ್ತಿಳೆ ಫಣಿಪಂ
ಬಳ್ಕಿದನಗಶಿಖರಂಗಳ್
ಕಟ್ಕನೆ ಕೆಡೆದುವು ತದೀಯಪಟುನಿಸ್ವನದಿಂ ೭೧

ವಚನ ಅನಂತರಮಿರ್ಬರುಂ² ನಿರ್ಭರದಿಂದುರ್ಬಿ ಬೊಬ್ಬೆಗೊಟ್ಟಬ್ಬರಿಸಿ ಗಜರಿ ಗರ್ಜಿಸಿ ಕಡಂಗಿ ಕೆಯ್ವಿಡಿದು ಪಳಂಚಿ ಪತ್ತಿ

ಚಂಪಕ ಕುಲಗಿರಿಯುಗ್ಮಮಾಳ್ದ ಪುರುಷಾಕೃತಿಯಿಂದೆ ಪಳಂಚುವಂತಿರು
ಜ್ಜ್ವಲಬಡಬಾಬ್ಧಿವಹ್ನಿಯುಗಮಾಂತು ನರಾಂಗಮನಣ್ಮಿ ಕಾದುವಂ
ತಲಘುಮೃಗಾಧಿಪದ್ವಯಮೊಡಂಬಡೆ ಮಾನವವೇಷಮುರ್ಕಿ ಸಂ
ಚಲಿಸದೆ ಪೋರ್ವವೊಲ್ ಪೋಣರ್ದರುರ್ಬಿ ವೃಷಧ್ವಜಮರ್ಕಟಧ್ವಜರ್ ೭೨

ಪರಶಿವನಿಗೆ ಸಾಧ್ಯವೇ ಹೊರತು, ಇತರರಿಗೆ ಸಾಧ್ಯವಾಗಲಾರದು. ವಚನ : ಎಂದು ಲೋಕ ಮೆಚ್ಚಲು, ಭಕ್ತಜನರಲ್ಲಿ ಸ್ನೇಹಾನುಕಂಪವನ್ನು ತೋರುವ ವಿಲಾಸದಲ್ಲಿ ಆಸಕ್ತನಾದ ಶಿವನು ಮೆಲ್ಲನೆ ಹೊಗಳುತ್ತಾ, ಅನಂತರ ಮುಷ್ಟಿಯುದ್ಧವನ್ನು ನಡೆಸಲು ಸಿದ್ಧವಾಗಿ ನಿಂತಿರುವ ಅರ್ಜುನನ ಮುಂದೆ ಬಂದು, ಉಕ್ಕೇರುವ ಕೋಪದಿಂದ ಕಣ್ಣುಗಳು ಕೆಂಪಾಗಿ, ಪ್ರತಾಪವು ವಿಜೃಂಭಿಸಲು, ಒಬ್ಬರನ್ನೊಬ್ಬರು ನೋಡುತ್ತಾ, ತೋಳುಗಳನ್ನು ತಟ್ಟಿಕೊಂಡರು. ಆಗ ೭೧. ಕಡಲುಕ್ಕಿತು. ಅಂತರಿಕ್ಷದಲ್ಲಿ ನಕ್ಷತ್ರಗಳು ಸಿಡಿದುವು. ಭೂಮಿ ಕಂಪಿಸಿತು. ಆದಿಶೇಷನು ನಡುಗಿದನು. ಬೆಟ್ಟದ ಕೋಡುಗಲ್ಲು ತಪತಪನೆ ಬಿದ್ದುವು. ಅವರ ಪ್ರಚಂಡವಾದ ಆರ್ಭಟದಿಂದ ಜಗತ್ತು ಕ್ಷೋಭೆಗೊಂಡಿತು. ವಚನ : ಆ ಮೇಲೆ ಅವರಿಬ್ಬರೂ ಆವೇಶದಿಂದ ಉಬ್ಬುತ್ತಾ, ಅಬ್ಬರಿಸುತ್ತಾ, ಮೂದಲಿಸುತ್ತಾ, ಸಿಂಹನಾದವನ್ನು ಮಾಡುತ್ತಾ, ಕೋಪಗೊಂಡು ಕೈಗಳನ್ನು ಹಿಡಿದುಕೊಂಡು ಎದುರಿಸಿ ಮೇಲೆ ಬಿದ್ದರು. ೭೨. ವೃಕ್ಷಧ್ವಜನಾದ ಶಂಕರನೂ, ಕಪಿಧ್ವಜನಾದ ಅರ್ಜುನನೂ ಹೋರಾಡಿದರು. ಅವರ ಹೋರಾಟವು ಎರಡು ಕುಲಪರ್ವತಗಳು ಗಂಡು ರೂಪವನ್ನು ಧರಿಸಿ ಕಾದುವಂತಿದ್ದಿತು. ಧಗಧಗಿಸುತ್ತಿರುವ ಬಡಬಾಗ್ನಿಗಳೆರಡು ಮನುಷ್ಯ ರೂಪಿನಿಂದ ಪರಾಕ್ರಮದೊಡನೆ ಹೋರಾಡುವಂತಿದ್ದಿತು. ಪ್ರಬಲವಾದ ಸಿಂಹಗಳೆರಡು

---

೧ ಪೌರುಷ (ಕ) ೨ ಮಿರ್ವರುಂ (ಯ)

ಪಿಡಿಯೆ ಕರಾಗ್ರಮಂ ಬಿಡಿಸುತೌಂಕಿ ಬದಿರ್ಚುವ ತಟ್ಕಿಗೆಯ್ಯೆ ಮೆ
ಯ್ಗೊಡಪಿ ತೆರಳ್ವವವ್ವಳಿಸೆ ಸಿಲ್ಕದೆರಿ ಲಂಘಿಪ ಸಂಚಿನಿಂದೆ ಪೊ
ಯ್ದೊಡೆ ಪೊಳೆವಾರ್ಪಿನಿಂದೆಱಗೆ ಚಿಮ್ಮುವ ಬಾಹುಗಳಿಂದೆ ಕಂಠಮಂ
ತೊಡರೆ ಕುಸುಂಗಿಱಿ ಪಯ್ಸರಿಪ ಬಿನ್ನಣವೊಪ್ಪೆ ಕಡಂಗಿ ಕಾದಿದರ್ ೭೩.

ವಚನ ಮತ್ತಂ

ಚಂಪಕ ಪೊಗುವಳಿ ತೊಡಂಕುವೆತ್ತುವ ಬದಿರ್ಚುವದಿರ್ಚುವ ಪಾಯ್ವ ಪೊಯ್ವ ಪಿಂ
ದೆಗೆವ ಮುರಲ್ವ ಮೇಲ್ವರಿವ ಪೊಗುವ ಪಿಂಗುವ ನೂಂಕುವೌಂಕುವಾ
ರ್ದೊಗೆವ ಕನಲ್ವ ಜಾರುವ ಜವಂಗೆಡದೊತ್ತುವ ಪತ್ತುವಣ್ಮಿನಿಂ
ಬಿಗಿವ ತುಡುಂಕುವವ್ವಳಿಪ ಬಿನ್ನಣವೊಪ್ಪೆ ಪಗಿಲ್ತು ಕಾದಿದರ್ ೭೪

ಮತ್ತೇಭ ತಳಹತ್ತಂ ದಣುಶಿವಟ್ಟಿ ಖೊಪ್ಪರಮುರೋಬಂಧಂ ಲತಾಬಂಧಮು
ಜ್ಜ್ವಳಶಾಖಾಚರಬಂಧಮಾಯತಿಕೆಬಂಧಂ ಡೊಕ್ಕರಂ ಪಟ್ಟಿಸಂ

ಮನುಷ್ಯಾಕಾರದಿಂದ ಬಿಟ್ಟೋಡದೆ ಹೋರಾಡುವಂತಿದ್ದಿತು. ೭೩. ನೀಡಿದ ಕೈಯಿನ ಕೊನೆಯನ್ನು ತಪ್ಪಿಸಿಕೊಳ್ಳುತ್ತಲೂ, ಮೇಲೆಬಿದ್ದು ಒತ್ತಿದರೆ ಝಾಡಿಸಿ ನೂಕುತ್ತಲೂ, ಬಿಗಿಯಲು ಮೈಯನ್ನು ಕೊಡವಿಕೊಂಡು ಓರೆಯಾಗುತ್ತಲೂ, ಮೇಲೆ ಎರಗಲು ಹಾರಿ ಪಕ್ಕಕ್ಕೆ ಸರಿಯುತ್ತಲೂ, ಆಯವನ್ನು ನೋಡಿ ಹೊಡೆಯಲು ಶೌರ್ಯದಿಂದ ಉಬ್ಬುತ್ತಲೂ, ಬಲವಾಗಿ ಮೇಲೆ ಬೀಳಲು ನೆಗೆದುಹೋಗುತ್ತಲೂ, ಭುಜಗಳಿಂದ ಕತ್ತನ್ನು ಬಿಗಿಯಲು ಕುಸಿದು ಮತ್ತೆ ಮೇಲೇಳುತ್ತಲೂ, ಕುಶಲತೆಯು ಸುಪ್ರಕಟವಾಗಲು ರೋಷದಿಂದ ಹೋರಾಡಿದರು. ವಚನ : ಮತ್ತೆ ೭೪. ಶಂಕರ ಅರ್ಜುನರಿಬ್ಬರೂ ಮಲ್ಲ ಯುದ್ಧದ ಜಾಣ್ಮೆಯನ್ನು, ತಮ್ಮಲ್ಲಿ ಸಮನಾಗಿ ವಿಭಾಗಿಸಿಕೊಂಡು ಹೋರಾಡಿದರು. ಒಬ್ಬನು ನುಗ್ಗಿ ಬಂದರೆ ಇನ್ನೊಬ್ಬನು ಹಿಡಿಯುವನು. ಹಿಡಿದು ಮೇಲೆತ್ತಿದರೆ ಕೊಡವಿಕೊಂಡು ಬಿಡಿಸಿಕೊಳ್ಳುವನು. ಹೆದರಿಸಿದರೆ ಮೇಲೆ ಬೀಳುವನು. ಬಾರಿಸಿದರೆ ಹಿಂದಕ್ಕೆ ಸರಿಯುವನು. ತಿರುಗಿಬಿದ್ದರೆ ಮೇಲೆ ಬೀಳುವನು. ಒಬ್ಬನು ಉಬ್ಬಿದರೆ ಇನ್ನೊಬ್ಬನು ಅಣಗುವನು. ನೂಕಿದರೆ ಒತ್ತಿ ಅದುಮುವನು. ಓಡಿಹೋಗಿ ಮತ್ತೆ ಕಾಣಿಸಿಕೊಳ್ಳುವನು. ಕೋಪಿಸುವನು. ಹಿಡಿತವನ್ನು ತಪ್ಪಿಸಿಕೊಳ್ಳುವನು. ಝುಂಗನೆ ಮೇಲೆ ಬಿದ್ದರೆ ಧೈರ್ಯದಿಂದ ಮತ್ತೊಬ್ಬನೂ ಮುಂದೆ ನುಗ್ಗುವನು. ಒಬ್ಬನು ಬಿಗಿದರೆ ಮತ್ತೊಬ್ಬನೂ ಬಿಗಿಹಿಡಿದು ಅಪ್ಪಳಿಸುವನು. ೭೫. ಕೈಗಳನ್ನು ಹಿಡಿದು ಹಾಗೆಯೇ ನೆಗೆಯುವುದು, ಬಿಲ್ಲಿನಂತೆ ಮೈಯನ್ನು ವಾಲಿಸುವುದು, ಬೋರಲಾಗಿ ಬೀಳುವುದು, ಎದೆಯನ್ನು ಬಿಗಿಯುವುದು, ಬಳ್ಳಿಗಳಂತೆ ಹೆಣೆದುಕೊಳ್ಳುವುದು, ಕಪಿಗಳಂತೆ ಕಾದಾಡುವುದು, ಕಿತ್ತಾಡುವುದು, ಪಕ್ಕಕ್ಕೆ ಹೊಡೆಯುವುದು, ಕೈಗಳನ್ನು ಘಟ್ಟಿಸುವುದು,

---

೧ ವೌಂಕೆ (ಚ, ಯ) ೨ ನಿಲ್ಕದೆ (ಚ) ೩ ಕುಸುಂಗಿ (ತ) ೪ ಪುಗುವ (ಯ) ೫ ಧಣು (ಯ)

ವಳಯಾವೇಷ್ಟನಮಾಹತಂ ಭುಜಗಬಂಧಂ ತೋಃರಪತ್ತ್ರಂ ಶಿರೋ
ವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ ೭೫

ಮುರಿವ ಮುಳಿಗಿದೊತ್ತುವಾರ್ದು
ಪ್ಪರಿಸುವ ಬೀಟ್ವೀಟ್ವಿ ಸುಃಟಿವ ಸುತ್ತುವ ಡಗೆಯುಂ
ತರಹರಿಪ ಸಾರ್ವ ಪಾರ್ವ
ಬ್ಬರಿಪೆಸಕಂ ಮಿಃಱೆ ಕಾದಿದರ್ ಕಡುಗಲಿಗಳ್ ೭೬

ನಿಡುಸುಯ್ಯಿಂ ಭುಗಿಲೆನೆ ಪೊಜಿ
ಮಡೆ ಪೊಗೆ ಮಿಗೆ ಮುಷ್ಟಿ[2]ಯುಗಳಘಟ್ಟನದಿಂ ಕೆಂ
ಗಿಡಿ ಕೆದಱೆ ಗರ್ಜನಕ್ಕಿಳೆ-
ನಡುಗೆ ಮಹಾಹವಮನೆಸಗಿದರ್ ಧುರಗಲಿಗಳ್ ೭೭

ಮತ್ತೇಭ ಪದಘಾತಕ್ಕೆ ಧರಾತಳಂ ಕುಸಿಯೆ ಕೂರ್ಮಂ ಕುರ್ಗೆ ಭೋಃಗೀಂದ್ರನ
ಗ್ಗದ ದೀರ್ಘಸ್ಫಟೆ ಕಂಠದೊಳ್ ನೆಲಸೆ ಬಾಹುಭ್ರಾಂತಿಸಂಜಾತವಾ
ತದ ಘಾತಕ್ಕೆ[3] ಪಯೋಧರಂ ಕೆದಱೆ ಬಾನೊಳ್ ಜೀರ್ಣಪರ್ಣಂ ದಳಿಲೊ
ಡ್ಡಿದ ವಿದ್ಯಾಧರಪುಷ್ಪಕಂ ಜಗುಱೆ ಯುದ್ಧಂಗೆಯ್ದರೀಶಾರ್ಜುನರ್ ೭೮

ಸುತ್ತುಪಟ್ಟು ಒಡಿದಾಡುವುದು, ಹಾವಿನಂತೆ ಹೆಣೆದುಕೊಳ್ಳುವುದು, ತೋಳುಗಳನ್ನು ಸಿಕ್ಕಿಹಾಕಿಕೊಳ್ಳುವುದು, ತಲೆಯನ್ನು ತಗ್ಗಿಸಿಕೊಂಡು ಘಾತಿಸುವುದು, ಕಂಕುಳುಪಟ್ಟು ಮುಂತಾದ ಮಲ್ಲಕಾಳಗದ ರೀತಿಗಳು ವಿನೋದವನ್ನುಂಟುಮಾಡಲು ಕಿರಾತಾರ್ಜುನರು ನಾನಾ ಚಮತ್ಕಾರಗಳನ್ನು ಮೆರೆದರು. ೭೬. ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುವ, ಕೋಪದಿಂದ ಒತ್ತಿಕೊಂಡು ಹೋಗುವ, ಅಬ್ಬರಿಸುವ, ಮೇಲೆ ನೆಗೆವ, ಬೀಳುವ, ಏಳುವ, ಸುತ್ತುವರಿವ, ಬಳಸುವ, ವಂಚನೆಗೆ ಸುಧಾರಿಸಿಕೊಳ್ಳುವ, ಸಮೀಪಿಸುವ, ದೂರಸರಿವ, ಅಬ್ಬರಿಸುವ, ಉದ್ರೇಕಿಸುವ ರೀತಿಗಳು ಅಧಿಕವಾಗುತ್ತಿರಲು, ಮಹಾಪ್ರತಾಪಶಾಲಿಗಳಾದ ಕಿರಾತಾರ್ಜುನರು ಹೋರಾಡಿದರು. ೭೭. ನಿಟ್ಟುಸಿರಿನಿಂದ ಭಗ್ಗೆಂದು ಹೊಗೆಯು ನುಗ್ಗುತ್ತಿದ್ದಿತು. ಮುಷ್ಟಿಘಾತದಿಂದ ಕೆಂಗಿಡಿಗಳು ಸಿಡಿಯುತ್ತಿದ್ದುವು. ಸಮರಶೂರರಾದ ಕಿರಾತಾರ್ಜುನರು ಮಾಡುವ ಸಿಂಹನಾದಕ್ಕೆ ಭೂಮಿಯು ಕಂಪಿಸುತ್ತಿದ್ದಿತು. ಹಾಗೆ ಭಯಂಕರವಾಗಿ ಅವರಿಬ್ಬರೂ ಕಾದಿದರು. ೭೮. ಪರಮೇಶ್ವರನೂ ಅರ್ಜುನನೂ ಯುದ್ಧಮಾಡುತ್ತಿರಲು, ಅವರ ಕಾಲ ತುಳಿತಕ್ಕೆ ನೆಲವು ಕುಸಿಯಿತು. ಭೂಮಿಯನ್ನು ಹೊತ್ತ ಆಮೆಯು ಅಡಗಿತು. ಆದಿಶೇಷನ ಪ್ರಬಲವಾದ, ನೀಳವಾದ ಹೆಡೆಗಳು ಅದರ ಕೊರಳಿಗಿಳಿಯಿತು. ತೋಳನ್ನು ಬೀಸಿದಾಗ ಎದ್ದ ಗಾಳಿಯ ಹೊಡೆತಕ್ಕೆ ಮೋಡವು ಅಂತರಿಕ್ಷದಲ್ಲಿ ತರಗೆಲೆಗಳಂತೆ ಚದುರಿಹೋಯಿತು. ದಟ್ಟಣಿಸಿದ್ದ ವಿದ್ಯಾಧರ ವಿಮಾನ

---

೧ ಮುರಿ (ಯ) ೨ ಮುಟ್ಟ (ಹಸ್ತಪ್ರತಿಗಳಲ್ಲಿ) ೩ ಪಾತಕ್ಕ (ಯ) ೪ ಪರ್ಣಂಬೊ (ಯ)

ತೊಡೆಯುಂ ಪೊಡೆಯುಂ ಭುಜಮುಂ
ಮುಡುಪುಂ ಪೇರುರಮುಮಳಿಕಮುಂ ನೆತ್ತಿಯುಮುಂ
ಪೆಡತಲೆಯುಂ ಬರಿಯುಂ೧ ಕಾ
ಯ್ದಿಡಿದೊರ್ವರನೊರ್ವರಣ್ಮಿ ಪೊಡೆದರ್ ಕಲಿಗಳ್ ೭೯

ಸೋಲಿಸೆ ಜವಮದು ಜವಮುಂ
ಸೋಲಿಸೆ ಲುಳಿ ಲುಳಿಯ ಬಿನ್ನಣಂ ಬಿನ್ನಣಮುಂ
ಸೋಲಿಸೆ ಪೊಯ್ಗಳ್ ಪೊಯ್ಗಳ
ಸೋಲಿಸೆಯುಂ ಸೋಲಲಾರ್ತರಲ್ಲಾ ಕಲಿಗಳ್ ೮೦

ಕ್ಷತರೇಖೆ ತಟ್ಟಲೀಯದೆ
ಮತಿ ಮಿಗೆ ಸಮದಂಡಿಗೆಯ್ದನಿವನೆಂದು ಸಮು
ನ್ನತರೋಷದಿಂದೆ ತಿವಿದಂ
ಶತಮುಖಸುತನತನುಹರನ ವಕ್ಷಃಸ್ಥಳಮುಂ ೮೧

ಆ ಕೆಯ್ ಮುಂಚದ ಮುನ್ನಂ
ಲೋಕೈಕಾಧೀಶನೆತ್ತಿ ದೃಢಮುಷ್ಟಿಯುಮಾ
ಪಾಕರಿಪುತನಯನಂಗಮ
ನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ ೮೨

ಗಳೂ ಸರಿದುಹೋದುವು. ೭೯. ಸಾಹಸಿಗಳಾದ ಕಿರಾತಾರ್ಜುನರು ಒಬ್ಬರನ್ನೊಬ್ಬರು ಎದುರಿಸಿ ತೊಡೆಯನ್ನೂ, ಹೊಟ್ಟೆಯನ್ನೂ, ತೋಳನ್ನೂ, ತಲೆಯನ್ನೂ, ಎದೆಯನ್ನೂ, ಹಣೆಯನ್ನೂ, ನೆತ್ತಿಯನ್ನೂ, ಕೊರಳನ್ನೂ ರೋಷದಿಂದ ಹೊಡೆದರು. ೮೦. ಒಬ್ಬರ ಆಕ್ರಮಣದ ವೇಗವು ಇನ್ನೊಬ್ಬರ ವೇಗವನ್ನು ಸೋಲಿಸಿತು. ಕೈಚಳಕವು ಕೈಚಳಕವನ್ನು ಸೋಲಿಸಿತು. ಜಾಣ್ಮೆಯು ಜಾಣ್ಮೆಯನ್ನು ಸೋಲಿಸಿತು. ಹೊಡೆತಗಳು ಹೊಡೆತವನ್ನು ಸೋಲಿಸಿತು. ಆದರೆ ಒಬ್ಬರು ಮತ್ತೊಬ್ಬರನ್ನು ಸೋಲಿಸಲು ಮಾತ್ರ ಸಾಧ್ಯವಾಗಲಿಲ್ಲ. ೮೧. ಗಾಯಗಳೇನನ್ನೂ ಮಾಡದಂತೆ, ಬಹಳ ಚಮತ್ಕಾರದಿಂದ ಈ ಬೇಡನು ನನ್ನೊಡನೆ ಹೋರಾಡಿದನಲ್ಲಾ ಎಂದು ಕೋಪಗೊಂಡ ಅರ್ಜುನನು ಮದನಾರಿಯ ಎದೆಯನ್ನು ತಿವಿದನು. ೮೨. ಅರ್ಜುನನ ಮುಷ್ಟಿಯ ಗುದ್ದು ಬೀಳುವುದಕ್ಕೆ ಮುಂಚೆಯೇ ಜಗತ್ಪ್ರಭುವಾದ ಕಪಟಕಿರಾತನು ತನ್ನ ಬಲವಾದ ಮುಷ್ಟಿಯನ್ನು ಎತ್ತಿ,

---

೧ ಬದಿಯಂ (ಗ, ತ)

ಚಂಪಕ ತರಹರಿಸುತ್ತೆ ಮತ್ತೆ ಪೊಡೆದು ನರನೀಶನ ವಕ್ಷಮಂ ಸುಧಾ
ಕರಧರನಾರ್ದು ಮೇಣೆಱಗಿದಂ ಕಲಿಪಾರ್ಥನನಾ ಧನಂಜಯಂ
ಮರಳ್ದು ಮಹೇಶನಂ ತಿವಿದನಂತಕಮರ್ದನನಾ ಕ್ಷಣಂ ಪುರಂ
ದರಸುತನುತ್ತಮಾಂಗದೆಡೆಯಂ ಪೊಡೆದಂ ಸುರರಲ್ಲಿ ನೋಟ್ಪಿನಂ ೮೩

ಅವರಿರ್ವರ ಕಾಳೆಗಮಂ
ಸವೆಯದ ಸಾಹಸಮನೀಕ್ಷಿಸಿದ ಸುರಗಣಮುಂ
ಶಿವಗಣಮುಂ ವಿಸ್ಮಯಗಿಮಂ
ತವೆ೧ತಾಳ್ದುದು ಮೆಚ್ಚಿ೨ಪೊಗಟ್ದು೩ದಗಿರಿಪುಸುತನಂ ೮೪

ವಚನ ಮತ್ತಮಾಗಳ್

ಚಂಪಕ ಶಿವ ಶಿವ ಸತ್ತ್ವಮೆಂತುಟೊ ತಪಸ್ವಿಗಿವಂಗೆ ಮರುನ್ನಿಷೇವಣಂ
ಸವನಿಸೆ ದಂಡಿಸಿರ್ದೊಡಲೊಳದ್ಭುತಮೆನ್ನೊಡನೀತನಂತೆ ಕಾ
ದುವ ಕಲಿಯಾವನೀ ಭುವನದೊಳ್ ಸಮದಂಡಿಯೊಳುದ್ಧಸಾಹಸಾ
ರ್ಣವನಿವನಲ್ತೆ ಸದ್ಗುಣಕಸೂಯೆಯೆ ಕಾಣೆನಿವಂಗೆ ಸಾಟಿಯಂ ೮೫

ವಚನ ಎಂದುಮಾರರಮಣಂ ನಿಜರಮಣಿಯೊಡನೆ ಕಿರೀಟಿಯಂ ಪೊಗಟುತ್ತಿರ್ಪಿನಮಾತ
ನಿದಿರ್ಗೆವಂದು ಮಾರ್ಕೊಂಡು

ಪ್ರೀತಿಯಿಂದಲೋ ಎಂಬಂತೆ ಅರ್ಜುನನನ್ನು ಮೆಲ್ಲಗೆ ತಿವಿದನು. ೮೩. ಶಿವನ ಆ ಮೃದುಘಾತಕ್ಕೇ ಅರ್ಜುನನು ಸುಧಾರಿಸಿಕೊಳ್ಳುವಂತಾಯಿತು. ಅರ್ಜುನನು ಹೇಗೋ ಚೇತರಿಸಿಕೊಂಡು ಶಿವನ ಎದೆಗೆ ಗುದ್ದಿದನು. ಚಂದ್ರಶೇಖರನೂ ಆರ್ಭಟಿಸುತ್ತಾ ವೀರನಾದ ಪಾರ್ಥನ ಮೇಲೆ ಬಿದ್ದನು. ಅರ್ಜುನನೂ ಪುನಃ ಮಹೇಶ್ವರನನ್ನು ತಿವಿದನು. ದೇವತೆಗಳು ಅವರ ಕಾಳಗವನ್ನು ನೋಡುತ್ತಿರಲು, ಶಿವನು ಅರ್ಜುನನ ತಲೆಗೆ ಬಾರಿಸಿದನು. ೮೪. ಅವರಿಬ್ಬರ ಯುದ್ಧವನ್ನೂ, ಕುಂದದ ಸಾಹಸವನ್ನೂ ನೋಡುತ್ತಲಿದ್ದ ದೇವತೆಗಳ ಸಮೂಹವೂ, ಪ್ರಮಥಗಣಗಳ ಸಮೂಹವೂ ವಿಶೇಷವಾಗಿ ಆಶ್ಚರ್ಯ ಪಡುತ್ತಾ ಅರ್ಜುನನನ್ನು ಮೆಚ್ಚಿಕೊಂಡು ಹೊಗಳಿದುವು.ವಚನ: ಮತ್ತೆ ಆಗ ೮೫. "ಶಿವ, ಶಿವ ಈ ತಪಸ್ವಿಯ ಪರಾಕ್ರಮವು ಆಶ್ಚರ್ಯಕರವಾದುದು. ಇವನು ವಾಯುಸೇವನೆಯಿಂದ ಶರೀರವನ್ನು ದಂಡಿಸಿ ಕೃಶನಾದರೂ ಸಹ ನನ್ನೊಡನೆ ಇವನಂತೆ ಸಮ ಶೌರ್ಯದಿಂದ ಹೋರುವ ವೀರನು ಲೋಕದಲ್ಲಿ ಯಾವನಿದ್ದಾನೆ ? ಪ್ರಚಂಡ ಪರಾಕ್ರಮ ಸಾಗರವೇ ಇವನು. ಗುಣಕ್ಕೆ ಮತ್ಸರವೇಕೆ ? ಇವನ ಸಮಾನರಾದವರನ್ನು ನಾನು ಕಾಣೆನು. ವಚನ : ಎಂದು ಗಿರಿಜಾವಲ್ಲಭನು ತನ್ನ ಕಾಂತೆಯೊಡನೆ ಅರ್ಜುನನನ್ನು ಪ್ರಶಂಸಿಸುತ್ತಿದ್ದನು. ಅರ್ಜುನನು ಶಿವನಿಗೆ ಎದುರಾಗಿ ನಿಂತು ಪ್ರತಿಭಟಿಸುತ್ತಾ,

೧ ವಿಸ್ಮಿತ (ಕ) ೨–೨ ತಾಳ್ದುದಮರ್ಚಿ (ಕ, ಗ, ಜ, ತ) ೩ ಟ್ದರಗ (ಎಲ್ಲ ತಾಡವಾಲೆ ಪ್ರತಿಗಳಲ್ಲಿ)

ಉತ್ಪಲ ಎನ್ನ ಭುಜಾಗ್ರವಿಕ್ರಮಕೆ ಮೆಚ್ಚಿದೆ ನೀಂ ಭವದೀಯಸಾಹಸ
ಕ್ಕಾನ್ನೆಱೆ ವಿಸ್ಮಯಂಬಡೆದೆನೆನ್ನ ಪೊಣರ್ಕೆಗಿದಿರ್ಚಿ ನಿಲ್ವ ಧೀ
ರೋನ್ನತರಿಲ್ಲ ದೇವದನುಜರ್ಕಳೊಳೊರ್ವನೆ ನಿಂದು ಕಾದಿದಯ್
ಬಿನ್ನಣದಿಂದೆ ಭಾಪು ಶಬರೇಂದ್ರ ಎನುತ್ತುರೆ ಮೆಚ್ಚಿ ಫಲ್ಗುಣಂ ೮೬

ಮಾಣದೆ ಮತ್ತೆಱಗಿದನಾ
ಸ್ಥಾಣುವನಬ್ಬರಿಸಿ ಸಿಡಿಲ ಮಾಱ್ಕೆಯೊಳಭವಂ
ಕಾಣುತದಂ ಸೈರಿಸುತುಂ
ಕೇಣಂಬಡೆದೊತ್ತಿ ಮೆಟ್ಟಿದಂ ಗಾಂಡಿವಿಯುಂ ೮೭

ಒಕ್ಕುದು ನೆತ್ತರ್ ಬಾಯಿಂ
ಮಿಕ್ಕಲರ್ದುಸಿರಿಡುವ ಮೂಗಿನೆರಡುಂ ಕಡೆಯಿಂ
ದಕ್ಕಟ ತಪ್ಪಾಯ್ತೆನುತುಂ
ಮುಕ್ಕಣ್ಣಂ ಮಱುಗಿ ಮನದೆ ಸಿಡಿಮಿಡಿಗೊಂಡಂ ೮೮

ವಚನ ಅಂತು ಮಱುಗಿ ಕರುಣಾಕರಂ ಕಪರ್ದಿ ಕೆಯ್ದೆಗೆದು ನಿಂದಾಗಳ್

ಚಂಪಕ ಬಱಸಿತುದು ಧೈರ್ಯವಾರ್ಧಿ ಬಱನಾದುದು ಪೆರ್ಚಿದಱ ಶಕ್ತಿ ಬಿಂಕಮುಂ
ತೊಱೆದುದು ಚಿತ್ತವೃತ್ತಿ ನೆಱೆ ನೆರ್ಗಿದುದಿಂದ್ರಿಯರಾಜಿ ಬೀತುದೆ

೮೬. "ನನ್ನ ಕೈಗುಣದ ಬಿರುಸನ್ನು ತಿಳಿದು ನೀನು ಮೆಚ್ಚಿರುವೆ. ನಿನ್ನ ಅತುಳಪರಾಕ್ರಮವನ್ನು ಕಂಡು ನನಗೂ ಪರಮಾಶ್ಚರ್ಯವಾಗಿದೆ. ಕದನಕ್ಕೆ ನನ್ನೊಡನೆ ಎದುರು ನಿಂತು ಹೋರಾಡಬಲ್ಲ ಸಾಹಸಿಗಳು ದೇವಾಸುರರಲ್ಲಿ ಯಾರೂ ಇಲ್ಲ. ನೀನೊಬ್ಬನೆ ಧೈರ್ಯದಿಂದ ನಿಂತು, ಜಾಣ್ಮೆಯಿಂದ ಹೋರಾಡಿರುವೆ. ಭಲಾ, ಬೇಡನಾಯಕನೇ ಭಲಾ" ಎಂದು ಬಹಳವಾಗಿ ಮೆಚ್ಚಿಕೊಂಡು, ಅರ್ಜುನನು ೮೭. ತಡಮಾಡದೆ ಅಬ್ಬರಿಸುತ್ತಾ, ಪುನಃ ಶಿವನನ್ನು ಸಿಡಿಲು ಬಡಿಯುವಂತೆ ಹೊಡೆದನು. ನೋಡಿದ ಶಿವನು ಆ ಹೊಡೆತವನ್ನು ಸೈರಿಸಿಕೊಳ್ಳುತ್ತಾ, ಕೋಪಗೊಂಡು ಅರ್ಜುನನನ್ನು ನೂಕಿ ತುಳಿದನು. ೮೮. ಅರ್ಜುನನ ಬಾಯಿಯಿಂದಲೂ, ಉಸಿರಾಟದಿಂದ ಅರಳುತ್ತಿದ್ದ ಮೂಗಿನ ಎರಡು ಹೊಳ್ಳೆಗಳಿಂದಲೂ ರಕ್ತವು ಹೊರಚಿಮ್ಮಿತು. "ಅಯ್ಯೋ, ಪಾಪ, ಭಕ್ತನನ್ನು ನೋಯಿಸಿದುದು ಅನುಚಿತವಾಯಿತೇ" ಎಂದು ಶಿವನು ಮನಸ್ಸಿನಲ್ಲೇ ನೊಂದು ಕಳವಳಿಸಿದನು. ವಚನ : ಆ ರೀತಿಯಲ್ಲಿ ಪಶ್ಚಾತ್ತಾಪಗೊಂಡು, ಕರುಣಾಳುವಾದ ಶಂಕರನು ಹಿಂದೆ ಸರಿದು ನಿಂತನು. ೮೯. ಸಾಗರದಂತಿದ್ದ ಅಪಾರಧೈರ್ಯ ಒಣಗಿ ಹೋಯಿತು. ಊರ್ಜಿತವಾದ ಶೌರ್ಯವು ತನ್ನ ಬಿಗುಮಾನವನ್ನು ಬಿಟ್ಟಿತು. ಮನಸ್ಸಿನ ಸ್ಥೈರ್ಯವೂ ಕುಸಿಯಿತು. ಇಂದ್ರಿಯಗಳ ಸಾಮರ್ಥ್ಯವೂ ಕ್ಷೀಣವಾಯಿತು. 'ಎಚ್ಚರವೇ

---

೧ ತ್ತಿರೆ (ಯ) ೨ ಪೆರ್ಚಿನ (ಯ)

ಟ್ಟಿಱುವೊಳಸೋರ್ದುದುಗಿತ್ಸವಮುಡಂಗಿದುದುನ್ನತಿ ಕುಂದನಾಳ್ದಿನಂ
ಬೆಱಕದ ಹೇವಮಾವರಿಸೆ ನೊಂದು ಪಲುಂಬಿದನಾ ಧನಂಜಯಂ ೮೯

ಅಳ್ಳಿಱಿದುದು ಮಾನಸಮುಂ
ತಳ್ಳಂಕಂ ತನು ಬೆಮರ್ತುದಾಹವದೆಸಕಂ
ಪೊಳ್ಳಾದುದು ಚಿಂತೋದ್ಗಮ
ಮುಳ್ಳಲರ್ದುದವಂಗೆ ಸೋಲದಿಂ ಸುಖಮೊಳವೇ ೯೦

ವಚನ ಮತ್ತಂ

ಪಳಯಿಸಿದಂ ಪಂಬಲಿಸಿದ
ನೊಳಗಾಱಿದನಾಪ್ರ್ಗುಂದಿದಂ ಬೇವಸದಿಂ
ಕಳವಳಿಸಿದನಾ ಪರಿಭವ
ದಳುರ್ಕೆಯಿಂ ನೊಂದಕಿಸಂದಪಾರ್ಥಂಕಿ ಪಾರ್ಥಂ ೯೧

ವಚನ ಅಂತು ನೊಂದು

ಒಳಗೊಳಗಱಲ್ದು, ಚಿಂತಾ
ಕುಳತೆಯನೊಳಕೊಂಡು ಬೇಡನಿವನೆನ್ನಿಂದ
ಗ್ಗಳಿಸಿದನೆ ಮತ್ಪರಾಕ್ರಮ
ವೊಳಸೋರ್ದುದೆಳ ಚಿತ್ರಮೆಂದವಂ ಖತಿಗೊಂಡುಂ ೯೨

ತಪ್ಪುತ್ತಿದೆ. ಉತ್ಸಾಹವೇ ಇಲ್ಲವಾಗಿದೆ. ಅರ್ಜುನನೆಂಬ ಹೆಚ್ಚುಗಾರಿಕೆಯು ಕುಂದಿದೆ,' ಎಂಬ ನಾನಾ ಭಾವಗಳಿಂದ ಕೂಡಿ, ತನ್ನ ಸ್ಥಿತಿಗೆ ತಾನೇ ಹೇಪರಿಸುತ್ತಾ, ಅರ್ಜುನನು ಸಂಕಟಪಟ್ಟು ಹಂಬಲಿಸಿದನು. ೯೦. ಮನಸ್ಸಿನಲ್ಲಿ ಹೆದರಿಕೆಯಾಗಿ, ಕಳವಳಗೊಂಡು ಶರೀರವು ಬೆವರಿಟ್ಟಿತು. ಸಮರೋತ್ಸಾಹವು ನಿಸ್ಸಾರವಾಯಿತು. ಅರ್ಜುನನ ಚಿಂತೆಯು ಹೆಚ್ಚಿತು. ಅಪಜಯದಿಂದ ಯಾರಿಗಾದರೂ ಸಂತೋಷವಾಗುವುದೇ ? ವಚನ : ಮತ್ತೆ ೯೧. ಆಗ ಅರ್ಜುನನು ಅಯೋಜಕನಂತೆ ದುಃಖಗೊಂಡು ಗೋಳಿಟ್ಟನು. ಅಂತರಂಗದಲ್ಲಿ ಉತ್ಸಾಹವಿಲ್ಲ, ಸಾಮರ್ಥ್ಯವುಡುಗಿತು. ಬೇಸರ ದಿಂದ ಆತಂಕಕ್ಕೊಳಗಾದನು. ಆ ಬೇಡರವನಿಂದಾದ ಸೋಲಿಗೆ ಬಹಳವಾಗಿ ಚಿಂತಿಸಿದನು. ವಚನ : ಹಾಗೆ ನೊಂದು ೯೨. "ಈ ಬೇಡರವನು ನನಗಿಂತಲೂ ಪ್ರಬಲನಾದನಲ್ಲಾ! ನನ್ನ ಪರಾಕ್ರಮವು ಹಾಗೆಯೇ ಅಡಗಿಹೋಯಿತೆ? ಏನಾಶ್ಚರ್ಯ?" ಎಂದು ಅರ್ಜುನನು ಮನಸ್ಸಿನಲ್ಲಿಯೇ ದುಃಖಿಸಿದನು, ಗೋಳಾಡಿದನು. ಮತ್ತೆ ಕ್ರುದ್ಧ

---

೧ ಸಾರ್ದುದು (ಜ) ೨ ಚೇತೋ (ಚ); ಚಿತ್ತೋ (ಗ,ತ) ೩–೩ ನಂದು ಪಾರ್ದಂ (ಜ) ; ನಂದು ಪಾರ್ಥಂ (ಕ, ಗ, ತ) ೪ ಸಾರ್ದುದೆ (ಗ, ಚ, ತ) ೫ ಕತಿ (ಕ, ಗ)

ಚಂಪಕ ಶಿವಪದಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ
ಶಿವನಿಜಭಕ್ತರಂ ಪೞಿದೆನೋ ಶಿವಪೂಜೆಯಂಗೆಯ್ಯದನ್ನಮಂ
ಸವಿದೆನೊ ಶೈವಸುವ್ರತಮನಾಳ್ದೆಡೆವಿಟ್ಟೆನೊ ಪೂರ್ವಜನ್ಮದೊಳ್
ಶಿವ ಶಿವ ತಾನದಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ೯೩

ಎಲ್ಲಂದದಿನಾಹವದೊಳ್
ಗೆಲ್ಲಂ ಶಬರಂಗೆ ಸೋಲಮೆನಗಾಯ್ತುಕಟ
ನ್ನೆಲ್ಲಿಯದು ವಿಜಯನಾಮಸ
ಮುಲ್ಲಸಿತಖ್ಯಾತಿಯೆಂದು ಬಿಸುಸುಯ್ವುತ್ತುಂ ೯೪

ಜಗದೇಕವೀರಶಬ್ದಂ
ನಗೆಗೆಡೆಯಾಯ್ತೆನಗೆ ಪರ್ಬಿದತ್ತೆಣ್ದೆಸೆಯೊಳ್
ನೆಗೞ್ದಪಯಶಮೀ ಶಬರನಿ
ನೊಗೆದ ಪರಾಭೂತಿವೆತ್ತ ಕಾರಣದಿಂದಂ ೯೫

ಎತ್ತಣ ಬನಮೆತ್ತಣ ಕಿಟಿ
ಯೆತ್ತಣ ಕಾಟ್ಟಿಯದನಾಗಮಂ ಶಿವ ಶಿವ ಮೇ
ಣೆತ್ತಣ ಕಾಳೆಗದುಜ್ಜುಗ
ಮೆತ್ತಣ ಪರಿಭವಮಿದೆನಗೆ ಸಾರ್ದುದು ಚಿತ್ರಂ ೯೬

ನಾದನು. ೯೩. "ನಾನು ಜನ್ಮಾಂತರಗಳಲ್ಲೇನಾದರೂ ಪರಮೇಶ್ವರನ ಪಾದಗಳಲ್ಲಿ ಭಕ್ತಿಯನ್ನು ಮಾಡಲಿಲ್ಲವೋ ? ಶಿವನ ದೂಷಣೆಯನ್ನೇನಾದರೂ ಆಸಕ್ತಿಯಿಂದ ಕೇಳಿದೆನೋ ? ಶಿವನ ಅವಿಚ್ಛಿನ್ನ ಭಕ್ತರನ್ನು ಏನಾದರೂ ನಿಂದಿಸಿದೆನೋ ? ಅಥವಾ ಶಿವನನ್ನು ಆರಾಧಿಸದೆ ಆಹಾರವನ್ನು ಸ್ವೀಕರಿಸಿದೆನೋ ? ಶಿವನ ದೀಕ್ಷೆಯನ್ನು ಪರಿಗ್ರಹಿಸಿ, ಆಚರಿಸದೆ ಮಧ್ಯದಲ್ಲಿಯೇ ಬಿಟ್ಟೆನೋ ? ಶಿವ, ಶಿವಾ, ಅಂತಹ ಘೋರ ಪಾಪಗಳನ್ನು ನಾನು ಮಾಡದೇ ಇದ್ದರೆ, ವಿಜಯನೆನಿಸಿಕೊಂಡ ನನಗೆ ಈ ಬಗೆಯ ಸೋಲುಂಟಾಗುತ್ತಿದ್ದಿತೇ ? ೯೪. ಸರ್ವಪ್ರಕಾರದಿಂದಲೂ ಯುದ್ಧದಲ್ಲಿ ಬೇಡನಿಗೆ ಜಯವೂ, ನನಗೆ ಸೋಲೂ ಆಯಿತು. ಅಯ್ಯೋ, ವಿಜಯನೆಂದು ಕರೆಸಿಕೊಳ್ಳುವ ಕೀರ್ತಿ ಮೆರೆಯುತ್ತಿದ್ದಿತಲ್ಲಾ, ಅದು ಇನ್ನೆಲ್ಲಿದೆ?" ಎಂದು ನಿಟ್ಟುಸಿರನ್ನು ಬಿಟ್ಟು ೯೫. "ಈ ಶಬರನಿಂದ ಪ್ರಾಪ್ತವಾದ ಸೋಲಿನಿಂದ, ನನ್ನ ಜಗದೇಕವೀರನೆಂಬ ಹೆಸರು ಹಾಸ್ಯಾಸ್ಪದವಾಯಿತು. ಎಂಟು ದಿಕ್ಕುಗಳಲ್ಲಿಯೂ ನನ್ನ ಅಪಯಶಸ್ಸು ಹರಡಿದಂತಾಯಿತು. ೯೬. ಎಲ್ಲಿಯ ಕಾಡು, ಎಲ್ಲಿಯ ಹಂದಿ, ಈ ಕಾಡ ಬೇಡನು ಬರುವುದು ಅನ್ನುವುದು ಎಲ್ಲಿಯದು ? ಅಯ್ಯೋ, ದೈವವೇ, ಈ ಹೋರಾಟದ ಉದ್ಯೋಗವು ಹೇಗೆ ಆಯಿತು ? ಈ

---

೧ ಪೂಜನೆ (ಯ)

ಈತಂ ನರನಕ್ಕುಮೊ ಪಡಿ
ಮಾತೇಂ ಮಗುಟ್ಟಿಪ್ಪನೆ ಶಬರನಪ್ಪೆನೊ ರಣಸು
ಜಾತಜಯಲಕ್ಷ್ಮಿಯಗ್ಗದ
ಬೂತಾಟವೊ ತಿಳಿಯೆನೆಂದವಂ ಚಿಂತಿಸಿದಂ ೯೭

ವಚನ ಎಂದು ತನ್ನೊಳಾಳೋಚನಂಗೆಯ್ದು

ಚಂಪಕ ತಿಳಿದನೆ ಶಂಭುವೆಂದು ತಜಿಸಂದು ಮಹೋಜ್ಜ್ವಳಶೈವಶಕ್ತಿಯ
ಗ್ಗಳಿಕೆಯ ಕಂಡು ಕಂಡುಮವನಾಹವದೊಳ್ ತಿಳಿಯಲ್ಕೆ ಸಾಧ್ಯಮೇ
ವಿಳಸಿತವೇದರಾಶಿ ಸಲೆ ಕಾಣದ ದೇವನನದ್ವಿತೀಯನಂ
ತೊಳಗುವಖಂಡಚಿನ್ಮಯನನಾತ್ಮವಿಗುಪ್ತನನಪ್ರಮೇಯನಂ ೯೮

ತಪಮೊಳಸಾರ್ದುದು[1] ಮುತ್ತ್ರದ
ಜಪಮಚಿದುದು ತೊಲಗಿದುದು ಮಹೇಶಧ್ಯಾನಂ
ಕುಪಿತಂಗೆನಗಂತವಜಿಂ
ದಪಜಯಮಿಧು ನೆಗಟ್ಟುದಲ್ಲದೊಡೆ ಸಮನಿಪುದೇ ೯೯

ವಚನ ಎಂದು ಪಲವಂದದಿಂ ಪಲುಂಬಿ ವಿರೂಪಾಕ್ಷನುಪೇಕ್ಷೆಯಿಂದೀ ಪರಾಜಯಂ ತಗುಳ್ದುದೆಂದು ನಿಜಾಂತರಂಗದೊಳ್ ಬಗೆದು, ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ಬೊಕ್ಕು,

ಸೋಲು ನನಗೆ ಹೇಗಾಯಿತು ? ಎಲ್ಲವೂ ವಿಚಿತ್ರವಾಗಿದೆಯಲ್ಲ ! ೯೭. ಈ ಬೇಡನೇ ಅರ್ಜುನನಾಗಿರಬಹುದೇ ? ಬೇರೇನು ಹೇಳಲಿ, ಮತ್ತೆ ನಾನೇ ಏನಾದರೂ ಬೇಡರವನಾದೆನೋ ? ಯುದ್ಧದಲ್ಲಿ ಒದಗುವ ಜಯಲಕ್ಷ್ಮಿ ತೋರುತ್ತಿರುವ ಮರುಳಾಟವಿರಬಹುದೇ ? ತಿಳಿಯುವುದಿಲ್ಲವಲ್ಲ !" ಎಂದು ಅರ್ಜುನನು ಚಿಂತೆಗೀಡಾದನು. ವಚನ : ಈ ರೀತಿಯಾಗಿ ತನ್ನ ಮನಸ್ಸಿನಲ್ಲೇ ಆಲೋಚಿಸಿ, ೯೮. ಶಿವನ ದೇದೀಪ್ಯಮಾನವಾಗಿದ್ದ ಸಾಮರ್ಥ್ಯವನ್ನು ನೋಡಿ ನೋಡಿಯೂ, ಶಬರನು ಶಿವನೆ ಇರಬೇಕೆಂದು ನಿಶ್ಚಯಿಸಲು ಅರ್ಜುನನಿಗೆ ಸಾಧ್ಯವಾಗಲಿಲ್ಲ. ವೇದಾವಳಿಗಳೇ ಆ ಅದ್ವಿತೀಯನೂ, ದೇವದೇವನೂ, ಅಖಂಡ ಜ್ಞಾನಜ್ಯೋತಿಸ್ವರೂಪನೂ, ಸಕಲ ಜೀವಿಗಳ ನಿಜಸ್ವರೂಪನೂ, ಅಪ್ರಮೇಯನೂ ಆದ ಆತನನ್ನು ತಿಳಿಯಲಾರದೆನ್ನುವಾಗ, ಅರ್ಜುನನು ಯುದ್ಧಮುಖದಲ್ಲಿ ತಿಳಿಯಲು ಹೇಗೆತಾನೆ ಸಾಧ್ಯವಾದೀತು ? ೯೯ "ನನ್ನ ಹಾಳು ಕೋಪದಿಂದ ತಪಸ್ಸು ಅಡಗಿತು. ಜಪವು ನಾಶವಾಯಿತು. ಪರಮೇಶ್ವರನ ಧ್ಯಾನವು ತಪ್ಪಿಹೋಯಿತು. ಹಾಗಾಗದಿದ್ದರೆ, ನನಗೆ—ವಿಜಯನಿಗೆ, ಸೋಲುಂಟಾಗುತ್ತಿದ್ದಿತೇ ?" ವಚನ : ಎಂದು ಅರ್ಜುನನು ನಾನಾ ವಿಧವಾಗಿ ದುಃಖಿಸುತ್ತಾ, ವಿರೂಪಾಕ್ಷನನ್ನು ಮರೆತೆನಾದುದರಿಂದಲೇ ಈ ಅಪಜಯವು ನನಗೆ ಪ್ರಾಪ್ತವಾಯಿತು ಎಂದು ಮನಸ್ಸಿನಲ್ಲಿಯೇ ಭಾವಿಸಿ, ಕೃಪಾ

---

೧ ಸೋರ್ದುದು (ಯ, ರ)

ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು ಕೌಂತೇಯಂ ಚಿಂತಾಪಂಕಮಂ ವಿವೇಕಜಳದಿಂ ತೊಳೆದು ವಿಮಳಮನಸ್ಕನಾಗಿ

ಚಂಪಕ ಪರಮಶಿವಾಗಮೋಕ್ತವಿಧಿ[1]ಯಿಂ ಮಣಲಿಂ ನೆಗಱ್ದೊಂದು ಲಿಂಗಮಂ
ನಿರುಪಮಭಕ್ತಿಯಿಂ ತಿಱಿದು[1] ಪಸ್ದಳಿ ಬಂದುಗೆ ಕಕ್ಕೆ[2] ಮುತ್ತ ಪಾ
ದರಿಗಳ ಪೂಗಳಂ ಮೃದುಳಬಿಲ್ವದಳಂಗಳನಲ್ಲಿ ತಂದು ಶಂ
ಕರನನೊೞಿಲ್ದು ಪೂಜಿಸಿದನರ್ಥಿತವೈರಿಜಯಂ ಧನಂಜಯಂ ೧೦೦

ಬಲವಂದು ರುದ್ರಸೂಕ್ತಮ
ನೊಲವಿಂದೋದುತ್ತೆ ಮಣಿದು ಮಗುಱ್ದೆೞಗಿ ವಿನಿ
ರ್ಮಲಭಕ್ತಿಭಾವದಿಂ ಸಾಂ
ಜಲಿನಿಟಲಂ ನಿಗಮವಂದ್ಯ[3]ನಂ ಕೀರ್ತಿಸಿದಂ ೧೦೧

ತ್ರ್ಯಂಬಕ ಜಯಜಯ ವಿಧಿಕಮ
ಳಾಂಬಕಶತಮಖಮುಖಾವನತಪದ ಭುವನಾ
ಳಂಬಕ ಗಳರುಚಿಜಿತರೋ
ಳಂಬಕ ಹೇರಂಬಜನಕ ಜಿತಕುಸುಮಶರಾ ೧೦೨

ಶರಧಿಯಾದ ಶಿವನನ್ನು ಸೇವಿಸಿ, ಶರಣಾಗತನಾಗಿ, ಅವನ ಕೃಪೆಯಿಂದ ಶತ್ರುವಾದ ಬೇಡನನ್ನು ಸೋಲಿಸುವೆನು ಎಂದು ತನ್ನ ಮನಸ್ಸಿಗೆ ಅಂಟಿಕೊಂಡಿದ್ದ ಚಿಂತೆಯೆಂಬ ಕೆಸರನ್ನು ವಿವೇಕವೆಂಬ ನೀರಿನಿಂದ ತೊಳೆದು ನಿರ್ಮಲಹೃದಯನಾದನು. ೧೦೦. ಶ್ರೇಷ್ಠ ಶಿವಾಗಮ ಶಾಸ್ತ್ರಗಳಲ್ಲಿ ತಿಳಿಸಿರುವ ರೀತಿಯಲ್ಲಿ ಮರಳಿನಿಂದ ಒಂದು ಶಿವಲಿಂಗವನ್ನು ರಚಿಸಿದನು. ಪರಮಭಕ್ತಿಯಿಂದ ಪಾರಿಜಾತ, ಬಂದುಗೆ, ಎಕ್ಕ, ಮುತ್ತುಗ, ಪಾದರಿ ಮುಂತಾದ ಪುಷ್ಪಗಳನ್ನೂ ಮತ್ತು ಕೋಮಲವಾದ ಬಿಲ್ವಪತ್ರೆಯನ್ನೂ ಬಿಡಿಸಿತಂದನು. ಶತ್ರುಪರಾಜಯವನ್ನು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡು, ಅರ್ಜುನನು ಶಿವನನ್ನು ಪೂಜಿಸಿದನು. ೧೦೧. ರುದ್ರಸೂಕ್ತಗಳನ್ನು ಪಠಿಸುತ್ತಾ ಭಕ್ತಿಯಿಂದ ಲಿಂಗಕ್ಕೆ ನಮಸ್ಕಾರ ಮಾಡಿದನು. ಪುನಃ ಪರಿಶುದ್ಧವಾದ ಭಕ್ತಿಯಿಂದ ಕೈಜೋಡಿಸಿಕೊಂಡು ಅರ್ಜುನನು ವೇದಗಳಿಂದ ಪೂಜಿತನಾದ ಪರಶಿವನನ್ನು ಸ್ತುತಿಸಿದನು. ೧೦೨. "ತ್ರಿನೇತ್ರನೆ, ಜಯ ಜಯ. ಬ್ರಹ್ಮ, ವಿಷ್ಣು,ಇಂದ್ರಾದಿ ದೇವತೆಗಳಿಂದ ವಂದಿತನೇ ಜಯಜಯ,ಜಗದಾಧಾರನೇ, ನೀಲಕಂಠನೇ,

---

೧–೧ ಯಿಂದಲಿ ತನ್ನಯ ಚಿತ್ತಶುದ್ಧದಿಂ । ತಿಱಿದು ವನೇಜವೊಲ್ಲೆ ವರ (ಚ) ೨ ಎಕ್ಕೆ (ಚ) ೩ ವೇದ್ಯ (ಯ)

ಚಂಪಕ ಜಯ ಜಯ ಕಾಲಕಾಲ ಫಣಿಭೂಷಣಭೀಷಣ ಸೋಮ ಕೋಮಲಾ
ಶಯ ಯಮಿನುತ್ಯ ನಿತ್ಯ ಶಿತಿಕಂಧರ ಸಿಂಧುರಕೃತ್ತಿವಸ್ತ್ರ ದು
ರ್ಜಯ ಭವಭಂಜನಾಂಜನವಿವರ್ಜಿತ ನಿರ್ಜಿತಘೋರಮಾರ ನಿ
ರ್ಜಯ ಭುವನೇಶ ಪಾಶಹರ ಕಿಂಕರಶಂಕರ ಪುಷ್ಟಿವರ್ಧನಾ ೧೦೩

ನಿನ್ನ ಪದಭೃತ್ಯ೧ನೆನಿಸಿ
ರ್ದೆನ್ನಂ ಗೆಲ್ದಂ ಕಿರಾತನೀತನನೀಗಳ್
ಬನ್ನಂಬಡಿ೨ಸುತೆ ಸೋಲಿಪ
ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ ೧೦೪

ಎನ್ನಾಳ್ದಂ ನೀನಿರುತಿರೆ
ಬನ್ನಮಿದೆನಗಾಗೆ ಕೊಱತೆಯಾವಂಗೆಂಬಾ
ಬಿನ್ನಣಮಂ ತಿಳಿದೆನ್ನಂ
ಮನ್ನಿಸಿ ರಿಪುಜಯಮನಿತ್ತು ಪೊರೆ ಪುರಮಥನಾ ೧೦೫

ವಚನ ಎಂದು ಪಲವಂದದಿಂ ನುತಿಸಿ ದೈನ್ಯಂದೋಱಿ ಪಾರ್ಥಂ ಪ್ರಾರ್ಥಿಸಿ ಶಬರಂಗಭಿ ಮುಖನಾಗಿ ನಿಂದು ನಿರೀಕ್ಷಿಸಿ ನಿಜಭುಜಾಸ್ಫಾಲನಂಗೆಯ್ದು

ಗಣಪತಿಯ ಪಿತನೇ, ಮದನಾರಿಯೇ ಜಯವಾಗಲಿ. ೧೦೩. ಮೃತ್ಯುಂಜಯನೇ, ಸರ್ಪ ಭೂಷಣಗಳಿಂದ ಭಯಂಕರನಾದವನೆ, ಉಮಾಸಹಿತನಾದವನೇ, ಕರುಣಾರ್ದ್ರಹೃದಯನೇ, ಋಷಿಮುನಿಗಳಿಂದ ಹೊಗಳಿಸಿಕೊಂಬುವನೇ, ಶಾಶ್ವತನೇ, ನೀಲಗ್ರೀವನೇ, ಗಜಚರ್ಮಾಂ ಬರನೇ, ಯಾರಿಂದಲೂ ಜಯಿಸಲು ಸಾಧ್ಯವಿಲ್ಲದವನೇ, ಭವನಾಶನೇ, ನಿರ್ಲಿಪ್ತನೇ, ಪ್ರಬಲ ಕಾಮನನ್ನು ಜಯಿಸಿದವನೇ, ನಾಶರಹಿತನೇ, ಜಗದೊಡೆಯನೇ, ಮಾಯಾಪಾಶ ಗಳನ್ನು ಛೇಧಿಸುವವನೇ, ಭಕ್ತಾನುಗ್ರಹಿಯೇ,ಶ್ರೇಯೋವೃದ್ಧಿದಾಯಕನಾದ ಪರಮೇಶ್ವ ರನೇ ನಿನಗೆ ಜಯವಾಗಲಿ ; ಜಯವಾಗಲಿ. ೧೦೪. ನಿನ್ನ ಚರಣದಾಸನಾದ ನನ್ನನ್ನು ಈ ಬೇಡನು ಪರಾಜಿತಗೊಳಿಸಿರುವನು. ಈಗ ಈ ಬೇಡನ ಗರ್ವವನ್ನು ಭಂಗಪಡಿಸಿ, ಸೋಲಿಸುವಂತೆ ಅನುಗ್ರಹಿಸಿ, ಎಲೈ, ದಯಾಳುಗಳ ಪ್ರಭುವೇ ನನ್ನನ್ನು ಕಾಪಾಡು. ೧೦೫. ನೀನು ನನ್ನ ಪ್ರಭುವಾಗಿರುವಾಗ, ಈ ಬಗೆಯಲ್ಲಿ ನನಗೆ ಅವಮಾನವಾಗಲು, ಅದು ಯಾರಿಗೆ ಕಳಂಕ ತರುವುದೆಂಬುದನ್ನು ಪರಿಶೀಲಿಸಿ, ನನ್ನ ಮಾನವನ್ನು ರಕ್ಷಿಸಿ, ಹಗೆ ಯನ್ನು ಗೆಲ್ಲುವ ಸಾಮರ್ಥ್ಯವನ್ನು ಅನುಗ್ರಹಿಸಿ, ಕಾಪಾಡು" ವಚನ : ಎಂದು ನಾನಾ ರೀತಿಯಲ್ಲಿ ಶಿವನನ್ನು ಕೊಂಡಾಡಿ, ಆರ್ತನಾಗಿ ಅರ್ಜುನನು ಬೇಡಿಕೊಂಡು ಅನಂತರ

---

೧ ಭಕ್ತ (ಚ) ೨ ಬಿಡಿ (ಗ, ತ)

ಉತ್ಪಲ ಇನ್ನೞಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮ
ಪ್ರೋನ್ನತಿ೧ಯಿಟ್ಟಿರಂ ಪೊಱಮಡೆನ್ನಧಿನಾಥಮಹೇಶನೊಲ್ಮೆ ದಲ್
ಸನ್ನಿ೨ದಮಾಗಿದುದಿಂದೆ೩ನಗೆ ನಿನ್ನಸುವಂ ನೆಱೆ ಪೀರ್ವೆನಾವದೇ
ವನ್ನನಗೋತು ಬರ್ಪನವನಂ ಸ್ತದೆದಿಕ್ಕುವೆನೀಕ್ಷಣಾರ್ಧದೊಳ್ ೧೧೬

ವಚನ ಎಂದು ರೋಷಾರುಣೇಕ್ಷಣದಿನಭೀಕ್ಷಿಸುತ್ತಿರೆಯಿರೆ.

ಚಂಪಕ ಸಲೆ ನೆಲಸಿರ್ದ ನುಣ್ಮಣಲ ಲಿಂಗದೊಳಂ ಶಬರಾಂಗದೊಳ್ ಸಮು
ಜ್ಜ್ವಲನರವಕ್ತ್ರಸಂಭವಮನಾ ಸ್ತವಮಂ ಪೞಿಯಂ ಕಪರ್ದಿ ಮಂ
ಜುಲಗುಣವಾರ್ಧಿ ೪ಕೇಳ್ದುಮೆರಡಂ೪ ಸರಿಗಂಡು ಮನೋನುರಾಗಸಂ
ಕುಲತೆಯನಾಳ್ದನಂತೆ ನುತಿಯುಂ ಪೞಿಯುಂ ಸಮನಲ್ತೆ ಭವ್ಯರೊಳ್ ೧೧೭

ತರಳ ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾ
ಕ್ಷಣಮೆ ತಳ್ತಡಾರ್ದಾ ಕಿರಾತನ ಮುಡಿಯಲ್ಲಿರೆ ಕಂಡು ಕಾ
ರಣಮಿದೇಂ ಪೊಸತೆಂದು ಸಾದ್ಭುತಮಾನಸಂ ಮಗುೞ್ದೀಕ್ಷಿಸು
ತ್ತಣಿಯುರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ ೧೧೮

ಬೇಡನಿಗೆದುರಾಗಿ ನಿಂತು, ದಿಟ್ಟಿಸಿ ನೋಡಿ, ತನ್ನ ಭುಜಗಳನ್ನು ಅಪ್ಪಳಿಸುತ್ತಾ, ೧೧೬. "ಎಲೈ ವಂಚಕನಾದ ಬೇಡನೇ, ನಿನ್ನ ಮಹಾಪರಾಕ್ರಮವು ಅದೆಷ್ಟಿದೆಯೆಂಬುದನ್ನು ಈಗ ನಿಶ್ಚಯಿಸಬಹುದು. ಮುಂದೆ ಬಾ, ನೋಡೋಣ! ಈಗ ನನಗೆ, ನನ್ನೊಡೆಯನಾದ ಪರಮೇಶ್ವರನ ಅನುಗ್ರಹವು ನಿಃಸಂಶಯವಾಗಿ ಒದಗಿದೆ. ನಿನ್ನ ಪ್ರಾಣಗಳನ್ನು ಹೀರಿ ಹಿಂಡುವೆನು. ಯಾವ ದೇವರಾದರೂ ನಿನಗೆ ಸಹಾಯಕ್ಕೆ ಬರುವುದಾದರೆ, ಅವರನ್ನೂ ಸಹ ಅರೆಕ್ಷಣದಲ್ಲಿ ಕೊಂದುಬಿಡುವೆನು." ವಚನ : ಎಂದು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ದುರುಗುಟ್ಟಿ ನೋಡುತ್ತಿರಲು, ೧೧೭. ಮನೋಹರವಾದ ಸುಗುಣಗಳ ಸಾಗರನಾದ ಶಿವನು ಅರ್ಜುನನ ಬಾಯಿಂದ ಹೊರಟ ಸ್ತೋತ್ರಗಳನ್ನು, ಅವನು ಪ್ರತಿಷ್ಠಿಸಿ ಪೂಜೆಮಾಡಿದ ಮರಳಲಿಂಗದಲ್ಲಿದ್ದು ಕೇಳಿದನು. ಅವನ ದುರುಕ್ತಿಗಳನ್ನು ಬೇಡವೇಷದಲ್ಲಿದ್ದು ಕೇಳಿದನು. ದ್ವಂದ್ವಾತೀತನಾದ ಪರಶಿವನಿಗೆ ಸ್ತುತಿ–ನಿಂದೆಗಳೆರಡೂ ಒಂದೇ ಸಮನಾಗಿದ್ದುವು. ಶಿವನ ಮನಸ್ಸಿನಲ್ಲಿ ಮಾತ್ರ ಅರ್ಜುನನ ವಿಷಯದಲ್ಲಿ ಅನುರಾಗಭಾವವು ತುಂಬಿ ಉಕ್ಕುತ್ತಿದ್ದಿತು. ಮಹಾನುಭಾವರ ರೀತಿಯೇ ಹಾಗೆ. ಅವರಿಗೆ ಸ್ತುತಿ–ನಿಂದೆಗಳೆರಡೂ ಒಂದೇ. ೧೧೮. ಮರಳಲಿಂಗದ ಶಿರಸ್ಸಿನಲ್ಲಿ ಅರ್ಜುನನು ಪೂಜಿಸಿದ ಹೂಗಳು ತಕ್ಷಣವೇ ಬೇಡರವನ ತಲೆಯಲ್ಲಿದ್ದುದನ್ನು ಕಂಡು, "ಇದಕ್ಕೇನುಕಾರಣವಿರಬಹುದು ? ವಿಚಿತ್ರವಾಗಿದೆಯಲ್ಲ !" ಎಂದು ಆಶ್ಚರ್ಯಚಕಿತನಾಗಿ, ಮತ್ತೆ ಇತ್ತಕಡೆ

---

೧ ದುನ್ನತಿ (ಚ) ೨ ಸನ್ನಿಧಿಯಾ (ವ) ೩ ದಿನ್ನೆ (ಚ) ೪–೪ ಕೇಳ್ದು ಮೆರೆದಂ (ಚ)

ಮತ್ತೇಭ ಇದನಿನ್ನುಂ ಮಗುಳ್ದೊರ್ಮೆ ನೋಟ್ಪೆನೆನುತುಂ ಪೂಗೊಂಚಲಂ ತಂದು ಸೂ
ಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದಾಗಮೋ
ಕ್ತದ ಮಾರ್ಗಂಬಿಡಿದೊಲ್ದು ಪೂಜಿಸಿ ಕರಂ ಕೊಂಡಾಡಿ ಮೆಯ್ಯಿಕ್ಕಿ ನೋ
ಡಿದನಿತ್ತಲ್ ಶಬರೋತ್ತಮಾಂಗದೆಡೆಯುಂ ಪ್ರಾಂಚದ್ಗುಣಂ ಫಲ್ಗುಣಂ ೧೧೯

ಉತ್ಪಲ ಕಂಡನಖಂಡಪುಷ್ಪಭರಮಂಜರಿಯಂ ಶಬರೋತ್ತಮಾಂಗದೊಳ್
ಮಂಡಿತಲಿಂಗಮಸ್ತಕದೊಳಂತದನೀಕ್ಷಿಸಿ ಕಾಣದಾದನಾ
ಖಂಡಲಸೂನುವದ್ಭುತರಸಂಬಡೆದಾಟ್ಪು ಭಯಾಬ್ಧಿಯಲ್ಲಿ ಮುಂ
ಕೊಂಡು ಮುಱುಂಗಿ ತೇಲ್ದುವವನೀಕ್ಷಣ ಯುಗ್ಮಪಯಷ್ಟರದ್ವಯಂ ೧೧೦

ಚಂಪಕ ಹರ ಹರ ದೇವದೇವನಿವನಲ್ತೆ ಶಿವಂ ಭುವನೈಕವಲ್ಲಭಂ
ಗುರು ಸಕಲಾಮರರ್ಗೆ ಶಬರಾಕೃತಿಯಿಂ ಮದನುಗ್ರಹಾರ್ಥಮೀ
ಪರಿ ನಡೆತಂದನಲ್ತೆ ತಪದುಬ್ಬೆಗದುದ್ಭ್ರಮೆ ಸೆತ್ತಿವತ್ತೆ೨ ಸೈ
ತಿರದೆ ಮರುಳ್ತನಂದಳೆದಿದಿರ್ಚಿದೆನೆನ್ನವೊಲಜ್ಞನಾವನೋ ೧೧೧

ವಚನ ಎಂದು ಬಗೆದಾಗಳ್

ಮರಳಲಿಂಗದ ಮಸ್ತಕದಲ್ಲಿ ಹೂಗಳಿಲ್ಲದುದನ್ನು ಕಂಡನು. ೧೧೯. ಈ ವಿಚಿತ್ರವನ್ನು ಇನ್ನೊಂದು ಸಲ ಪರೀಕ್ಷಿಸಿ ನೋಡಿಬಿಡುವೆನೆಂದು, ಸದ್ಗುಣಶೋಭಿತನಾದ ಅರ್ಜುನನು ಹೂಗಳನ್ನು ತಂದು, ಲಿಂಗದ ತಲೆಯಲ್ಲಿಯೇ ಅವುಗಳನ್ನಿಟ್ಟು, ಪರಮಭಕ್ತಿಯಿಂದ, ಆಗಮೋಕ್ತವಿಧಿಗನುಸಾರವಾಗಿ, ಪ್ರೀತಿಯಿಂದ ಪೂಜಿಸಿ, ವಿಶೇಷವಾಗಿ ಸ್ತೋತ್ರಮಾಡಿ, ನಮಸ್ಕರಿಸಿ, ಇತ್ತಕಡೆ ಬೇಡನ ತಲೆಯಕಡೆ ನೋಡಿದನು. ೧೧೦. ತಾನು ಪೂಜಿಸಿದ ಹೂಗಳ ರಾಶಿಯನ್ನೆಲ್ಲಾ ಬೇಡನ ಶಿರಸ್ಸಿನಲ್ಲಿ ಕಂಡನು. ತಾನು ಅಲಂಕರಿಸಿದ್ದ ಮರಳ ಲಿಂಗದ ತಲೆಯತ್ತ ನೋಡಿದರೆ, ಹೂಗಳು ಅಲ್ಲಿ ಕಾಣಲಿಲ್ಲ. ಬೇಡನ ಕಡೆ ನೋಡಿ, ಅವನ ತಲೆಯಲ್ಲಿದ್ದ ಹೂಗಳನ್ನು ನೋಡಿ, ಆಶ್ಚರ್ಯಸಾಗರದಲ್ಲಿ ಮುಳುಗಿದನು ! ಇತ್ತಕಡೆ ಮರಳಲಿಂಗದ ತಲೆಯಲ್ಲಿ ಹೂಗಳನ್ನು ಕಾಣದೆ ಭಯಸಾಗರದಲ್ಲಿ ಮುಳುಗಿದನು ! ಅರ್ಜುನನ ಕಣ್ಣುಗಳು ಮೀನುಗಳಂತೆ ಒಂದುಸಲ ಭಯಸಾಗರದಲ್ಲಿಯೂ, ಮತ್ತೊಂದು ಸಲ ಆಶ್ಚರ್ಯಸಾಗರದಲ್ಲಿಯೂ ನುಗ್ಗಿ, ತೇಲಿ, ಮುಳುಗುವಂತಿದ್ದುವು. ೧೧೧. ಹರ ಹರ ! ಇವನು ದೇವಾದಿದೇವನಾದ ಸಾಕ್ಷಾತ್ ಶಿವನಲ್ಲವೇ? ಜಗತ್ಪ್ರಭುವಲ್ಲವೇ ? ಸಕಲ ದೇವತೆಗಳಿಗೂ ಜ್ಞಾನಪ್ರದನಲ್ಲವೇ ? ನನ್ನನ್ನು ಅನುಗ್ರಹಿಸಲು ಈ ವಿಧವಾಗಿ ಬೇಡನ ರೂಪವನ್ನು ಧರಿಸಿ ಬಂದಿರುವನಲ್ಲವೇ ? ನಾನು ತಪಸ್ಸಿನ ಉದ್ವೇಗದಿಂದ ತಲೆತಿರುಗಿದವನಾಗಿ, ಮನಸ್ಸಮಾಧಾನವನ್ನು ಕಳೆದುಕೊಂಡು,ಹುಚ್ಚನಂತೆ. ಈತನೊಡನೆ ಹೋರಾಡಿದೆನಲ್ಲಾ ! ನನ್ನ ಸಮಾನ ಮೂರ್ಖರು ಯಾರಾದರೂ ಇರುವರೇ ?" ವಚನ : ಎಂದು

---

೧ ದವ (ಉ) ೨ ವತ್ತಿ (ಜ)

ಚಂಪಕ ಪಡಿದೆಱೆದಂತೆ ಪಾಱೆತೆರ್ದ ಪವ್ವನೆ ಜುಮ್ಮೆನೆ ಮೆಯ್ಯನಿರ್ ಪೊದ
ಱ್ದಿಡಿಕಿಱಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮಡ
ಲ್ತಿದರ್ದುದು ಭೀತಿ ಬೇರ್ವಱಿದುದೇೞ್ಗೆಯನಾಳ್ದುದು ರಾಗಸಂಪದಂ ೧೧೨

ವಚನ ಮತ್ತಂ

ಉತ್ಪಲ ಬೀತುದು ಬಿಂಕವೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್
ಕಾತುದು ಭೀತಿವಲ್ಲರಿ ಮನೋಗದವುಂ ತಱಿಸಂದು ನಿಂದುದು
ದ್ಭೂತಮಹಾದ್ಭುತಂ ಮನದೊಳಂಗದೊಳಾಯ್ತು ವಿವರ್ಣವೃತ್ತಿ ಚಿಂ
ತಾತುರನಾಗಿ ಬೆಳ್ಪಳಿಸಿ ಬೇವಸಮುಂ ತಳೆದಂ ಧನಂಜಯಂ ೧೧೩

ಉಱಿವೆಳಗು ಸಂಜೆ ನಸುಮು
ರ್ಬಳುರ್ದಂಬರದಂತೆ ತಿಳಿವು ರಾಗಂ ನೆಗೞ್ದ
ಮ್ಮಳಮನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ ೧೧೪

ಚಂಪಕ ತಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂದದೇಂ
ತಿಳಿದೆನೆ ದಿವ್ಯಮಾರ್ಗಣದಿನಾನಿಸೆ ತಳ್ವದೆ ನುಂಗಿದಂದದೇಂ

ಮನಸ್ಸಿನಲ್ಲಿ ಆಲೋಚಿಸಿ ೧೧೨. ಕಿರಾತನೇ ಸಾಕ್ಷಾತ್ ಶಿವನೆಂಬ ಭಾವವು ಅರ್ಜುನನಿಗೆ ಉಂಟಾದಕೂಡಲೇ, ಅವನ ಹೃದಯವನ್ನು ಆವರಿಸಿದ್ದ ಗರ್ವವು, ಬಾಗಿಲುತೆರೆದಾಗ ಬಂಧಮುಕ್ತವಾದಂತೆ, ಓಡಿತು. ಮೈನವಿರೆದ್ದಿತು ; ಬೆವತಿತು, ಕೋಪವು ಮನಸ್ಸಿನಿಂದ ದೂರವಾಯಿತು. ಆಶ್ಚರ್ಯವು ತುಂಬಿ, ಉತ್ಸಾಹವು ಹೆಚ್ಚಿತು. ಭಯದ ಬೇರು ಕತ್ತರಿಸಿ ಹೋಯಿತು. ಭಕ್ತಿಯ ಸಿರಿಯು ಹೆಚ್ಚಿತು. ವಚನ : ಅಲ್ಲದೆ ೧೧೩. ಅರ್ಜುನನ ಗರ್ವವು ಕಮರಿ ಹೋಯಿತು. ಅವಿವೇಕವು ತೊಲಗಿ ಓಡಿತು.ಕಣ್ಣಿನಲ್ಲಿ ನೀರು ತುಂಬಿತು. ಭೀತಿಯು ಹೆಚ್ಚಿತು. ಮನೋವ್ಯಥೆಯು ಕೊನೆಗೊಂಡಿತು. ಮನಸ್ಸಿನಲ್ಲಿ ಮಹಾವಿಸ್ಮಯವಾಯಿತು. ದೇಹಕಾಂತಿಯು ಕಳೆಗುಂದಿತು, ಅರ್ಜುನನು ಚಿಂತಾಕ್ರಾಂತನಾಗಿ, ಮಂಕುಹಿಡಿದು ತಳಮಳಗೊಂಡನು. ೧೧೪. ಸೂರ್ಯಾಸ್ತಮಯ ಸಮಯದಲ್ಲಿ ಅಂತರಿಕ್ಷದಲ್ಲಿ ಸೂರ್ಯನ ಕ್ಷೀಣಿಸುತ್ತಿರುವ ಅಲ್ಪಪ್ರಕಾಶವೂ, ಸಂಜೆಯ ಕೆಂಪೂ ಮತ್ತು ಹರಡುತ್ತಿರುವ ಕತ್ತಲೆಯೂ ಏಕಕಾಲದಲ್ಲಿ ಗೋಚರಿಸುವಂತೆ, ಅರ್ಜುನನ ಮನಸ್ಸಿನಲ್ಲಿ ಈ ಬೇಡನೇ ಪರಮೇಶ್ವರನೆಂಬ ಜ್ಞಾನಪ್ರಕಾಶವೂ, ಅವನಲ್ಲಿ ತಾನು ತೋರಿದ ಅನುಚಿತವರ್ತನೆಗೆ ಕ್ಷಮೆ ಬೇಡಬೇಕೆಂಬ ಅನುರಾಗವೂ ಮತ್ತು ಪಶ್ಚಾತ್ತಾಪವೂ ಆವರಿಸಿತು. ಕಳವಳದಿಂದ ಕೂಡಿ ಅರ್ಜುನನೆಂದನು : ೧೧೫. "ಅನೇಕ ಬಾಣಗಳಿಂದ ಹೊಡೆದರೂ ಸಹ ಅವನಿಗೆ ಅವು ತಗುಲಲಿಲ್ಲವಲ್ಲಾ, ಆಗಲಾದರೂ, ಈ ಬೇಡನು ಸಾಕ್ಷಾತ್ ಶಿವನೇ ಎಂದು ನಾನು ತಿಳಿಯಬಹುದಾಗಿತ್ತೊ. ಆದರೆ, ನಾನು ಹಾಗೆ ತಿಳಿಯಲಿಲ್ಲ. ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದಾಗ,

ತಿಳಿದೆನೆ ಕೆಯ್ಯ ಚಾಪಮನಡಾಯುಧಮಂ ಸೆಳೆದೀಟ್ಟುಕೊಂಡೊಡಂ
ತಿಳಿವೊಳಸಾರ್ದುಗಿಡಕ್ಕಟ ಪುರಾಕೃತಕರ್ಮದ ಪೆರ್ಮೆಯೆಂತುಟೋ ೧೧೫

ಉತ್ಪಲ ಆವನ ಮಾಯೆಯಿಂ ತ್ರಿಜಗಮಾದುದು ಸೂರ್ಯಸುಧಾಕರರ್ ಪೊದ
ಟ್ದಾವನ ತೇಜದಿಂ ಬೆಳಗುವರ್ ಭುವನೋತ್ಕರರಕ್ಷೆ ಶಿಕ್ಷೆ ಮೇಣ್
ಆವನಧೀನಮಾವನೊಳೆ ತೋರ್ಪುದು ವಿಶ್ವಮಿದೆಂದುಮಾ ಮಹಾ
ದೇವನೊಳಾಹವಂ ಗಡೆನಗದ್ಭುತಮದ್ಭುತಮೇನನೆಂದಪೆಂ ೧೧೬

ಆವನನರ್ಚಿಪರ್ ಮಖದೊಳಾವನ ಮಂತ್ರಜಪಂಗಳಿಂದೆ ಸಂ
ಭಾವಿಪರಾವನಂ ಭಜಯಿಪರ್ ಮುನಿಗಳ್ ಮನುಗಳ್ ಸುಭಕ್ತಿಯಿಂ
ದಾವನ ಪಾದಪದ್ಮಮನೆ ಜಾನಿಪರಗ್ಗದ ಯೋಗಿವರ್ಯರಾ
ದೇವನೊಳಕ್ಕಟಾ ಪೊಣರ್ದೆನೆನ್ನದೊ ಸಂದ ವಿಮೋಹದೆತ್ತರಂ ೧೧೭

ಅನವದ್ಯನೊಳಪ್ರತಿಮನೊ
ಳನಘನೊಳಾದ್ಯಂತಶೂನ್ಯದೊಳ್ ಸಕಲಜಗ
ಜ್ಜನಕನೊಳಭ್ಯಂರ್ಹಿತಚೇ
ತನಗತನೊಳಿದಿರ್ಚಿ ಧುರದೊಳೆಚ್ಚಾಡಿದೆನೇ ೧೧೮

ಅವನು ಅವುಗಳನ್ನು ನುಂಗಿದನಲ್ಲಾ, ಆಗಲಾದರೂ ಅವನು ಶಿವನೆಂದು ತಿಳಿಯಲಾರದೆ ಹೋದೆ. ಹೊಡೆಯಲು ಎತ್ತಿದ ಗಾಂಡೀವಧನುಸ್ಸನ್ನೂ ಮತ್ತು ಕತ್ತಿಯನ್ನೂ ಎಳೆದು ಕಿತ್ತುಕೊಂಡನಲ್ಲಾ, ಆಗಲೂ ಅವನನ್ನು ತಿಳಿಯಲಾರದಾದೆ. ನನ್ನ ವಿವೇಕವು ಅಡಗಿತೇ ; ಜನ್ಮಾಂತರದ ಪ್ರಾರಬ್ಧಕರ್ಮವು ಎಷ್ಟು ಪ್ರಬಲವಾದುದು ? ೧೧೬. ಯಾವ ಪರಮೇಶ್ವರನ ಮಾಯೆಯಿಂದ ಮೂರು ಲೋಕಗಳೂ ಸೃಷ್ಟಿಯಾದುವೋ, ಯಾವನ ನಿಜಪ್ರಭಾವದಿಂದ ಸೂರ್ಯ ಚಂದ್ರಾದಿಗಳು ಬೆಳಗುವರೋ, ಜಗತ್ತಿನ ನಿಗ್ರಹಾನುಗ್ರಹಗಳು ಯಾವನ ಅಧೀನವೋ, ಯಾವನನ್ನು ಆಧರಿಸಿಕೊಂಡು ಸಕಲ ಬ್ರಹ್ಮಾಂಡಗಳೂ ಪ್ರಕಟವಾಗುವುವೋ, ಅಂತಹ ದೇವೋತ್ತಮನಲ್ಲಿ ನನಗೆ ಹೋರಾಟವೇ ? ಆಶ್ಚರ್ಯ! ಆಶ್ಚರ್ಯ! ಏನು ಹೇಳಲಿ ? ೧೧೭. ಯಾವನನ್ನು ಯಜ್ಞಯಾಗಾದಿಗಳಿಂದ ಪೂಜಿಸುವರೋ, ಯಾವನನ್ನು ಮಂತ್ರಗಳಿಂದಲೂ, ಜಪಧ್ಯಾನಾದಿಗಳಿಂದಲೂ ಸೇವಿಸುವರೋ, ಯಾವನನ್ನು ಮುನಿಗಳೂ, ಇಂದ್ರಾದಿಮನುಗಳೂ ಮಹಾಭಕ್ತಿಯಿಂದ ಭಜಿಸುವರೋ, ಯಾವನ ಪಾದಕಮಲಗಳನ್ನೇ ಮಹಾಯೋಗಿಗಳು ಧ್ಯಾನಿಸುವರೋ, ಅಂತಹ ಮಹಾದೇವನೊಡನೆ ನಾನು ಕಾದಾಡಿದೆ. ಅಯ್ಯೋ, ನನಗೆ ಅದೆಷ್ಟು ಅಜ್ಞಾನ ತುಂಬಿಕೊಂಡಿದೆ ! ೧೧೮. ದೋಷರಹಿತನೂ, ಅಸಮಾನನೂ, ಪಾಪರಹಿತನೂ, ಜನನಮರಣರಹಿತನೂ, ಸಕಲ ಜಗತ್ತುಗಳ ಸೃಷ್ಟಿಕರ್ತನೂ, ಸಕಲರ ಅಂತರ್ಯಾಮಿಯೂ ಆದ ಶಂಕರ

---

೧ ಸೋರ್ದು (ಯ)

ಪರಮೈಶ್ವರ್ಯಾಸ್ಪದನೊಳ್
ಪರಿಪೂರ್ಣಪರಪ್ರಕಾಶನೊಳ್ ಪಶುಪತಿಯೊಳ್
ಪರಶಕ್ತಿಯುಕ್ತನೊಳ್ ಪರ
ತರಮಹಿಮನೊಳಾಂತಿದಿರ್ಚುತೆಚ್ಚಾಡಿದೆನೇ ೧೧೯

ಸ್ವಸಮಾನಾಧಿಕರಹಿತನೊ
ಳಸಮಾಕ್ಷನೊಳಾಗಮೌಘಜನಕನೊಳಸುರ
ಪ್ರಸರಪ್ರಹಾರಿಯೊಳ್ ತಾ
ಮಸರಹಿತನೊಳಾಂತಿದಿರ್ಚುತೆಚ್ಚಾಡಿದೆನೇ ೧೨೦

ಪ್ರಣವಾರ್ಥನೊಳನುಪಮಗುಣ
ಗಣಯುತನೊಳತರ್ಕ್ಯವಿಭವನೊಳ್ ಶ್ರುತಿನಿವಹ
ಪ್ರಣುತನೊಳಖಿಳಸುಪರ್ವಾ
ಗ್ರಣಿಯೊಳ್ ಸೆಣಸಾಂತು ಮೃಡನೊಳೆಚ್ಚಾಡಿದೆನೇ ೧೨೧

ಗಿರಿಧನ್ವನೊಳಲ್ಪಧನು
ರ್ಧರನಾಂ ಸೆಣಸಲ್ ಸಮರ್ಥನೇ ಹರಿಶರನೊಳ್
ಪರಿಗತಕೃಶಶರನಖಿಳಾ
ಮರವರನೊಳ್ ನರನತರ್ಕ್ಯಮಹಿಮನೊಳಬಲಂ ೧೨೨

ನೊಡನೆ ಪ್ರತಿಭಟಿಸಿ ಹೋರಾಡಿದೆನಲ್ಲಾ! ೧೧೯. ಪರಮೈಶ್ವರ್ಯಗಳಿಗೂ ಕಾರಣನಾದ, ಪರಿಪೂರ್ಣನೂ ಶುದ್ಧಚಿದ್ರೂಪನೂ ಆದ, ಸಕಲಾತ್ಮರಿಗೂ ಪ್ರಭುವಾದ, ಸ್ವತಂತ್ರ ಶಕ್ತಿಸಹಿತನಾದ, ಸರ್ವೋತ್ತಮವಾದ ಮಹಿಮೆಯುಳ್ಳ ಶಂಕರನೊಡನೆ ನಾನು ಎದುರುಬಿದ್ದು ಕಾದಾಡಿದೆನಲ್ಲಾ. ೧೨೦. ತನಗೆ ಯಾರೂ ಸರಿಮಿಗಿಲಿಲ್ಲದ ಶಿವನಲ್ಲಿ, ಮುಕ್ಕಣ್ಣನೊಡನೆ, ಉಚ್ಛ್ವಾಸಮಾತ್ರದಿಂದ ವೇದಾವಳಿಗಳನ್ನು ಪ್ರಕಟಿಸಿದ ಪರಮೇಶ್ವರನಲ್ಲಿ, ದಾನವಮರ್ದನನಲ್ಲಿ, ತಮೋಗುಣ ವಿಕಾರಗಳಿಲ್ಲದ ಶಿವನಲ್ಲಿ ವಿರೋಧವನ್ನು ಹೊಂದಿ ಯುದ್ಧಮಾಡಿದೆನಲ್ಲಾ. ೧೨೧. ಓಂಕಾರಮಂತ್ರದಿಂದ ಸೂಚ್ಯನಾದವನೂ, ಅಸದೃಶ ಸದ್ಗುಣರಾಶಿಯೂ, ಅರಿಯಲು ಆಗದ ಮಹಿಮೆಗಳುಳ್ಳವನೂ, ವೇದಾವಳಿಗಳಿಂದ ಸ್ತುತ್ಯನೂ, ಸಕಲ ದೇವತಾಸಾರ್ವಭೌಮನೂ ಆದ ಶಿವನಲ್ಲಿ ದ್ವೇಷದಿಂದ ಹೋರಾಡಿದೆನಲ್ಲವೇ ? ೧೨೨. ಮೇರುಕೋದಂಡನೊಡನೆ ಸಾಮಾನ್ಯ ಬಿಲ್ಲನ್ನು ಹಿಡಿದ ನಾನು ಹೋರಾಡಲು ಸಮರ್ಥನೇ ? ನಾರಾಯಣನನ್ನೇ ಅಸ್ತ್ರವಾಗುಳ್ಳವನೊಡನೆ ಕೆಲಸಬಾರದ ಬಾಣಗಳನ್ನು ಹೊಂದಿರುವ ನಾನು, ಹಾಗೂ ನಿಖಿಲ ದೇವಾದಿದೇವನೊಡನೆ ಹುಲುಮಾನವನೆನಿಸಿದ ನಾನು, ಮಹಾಶಕ್ತಿಸಂಪನ್ನನೂ, ಮಹಿಮಾನ್ವಿತನೂ ಆದ ಶಿವ

---

೧-೧ ಧನುವಿನೊ (ಜ)

ಚಂಪಕ ಶಿವ ಶಿವ ಸಲ್ಲುವದೇ ಸಮರಮೀಂತೆನಗದ್ವಯನೊಳ್ ಮಹೇಶನೊಳ್
ಭವಹರನೊಳ್ ಮಹಾಮಹಿಮನೊಳ್ ಜ್ವಲನಾಕ್ಷನೊಳಕ್ಷಯಾಂಗನೊಳ್
ಪ್ರವಿದಿತ ನಾದಬಿಂದುಕಳೆಯಿಂ ಮಿಗೆ ಮೀಱಿದನೊಳ್ ಶ್ರುತಿಸ್ಮೃತಿ
ಸ್ತವನಕತೀತನೊಳ್ ಜಗದ ಜೀವರನಾಡಿಪ ಸೂತ್ರಧಾರನೊಳ್ ೧೨೩

ಮತ್ತೇಭ ಕಲಹಂ ತಕ್ಕುದೆ ನೋೞ್ಪೊಡಿಂತೆನಗೆ ಸಚ್ಚಿದ್ರೂಪನೊಳ್ ನಿತ್ಯನಿ
ರ್ಮಳನೊಳ್ ಪ್ರಾಕೃತನಾಮರೂಪಗುಣಚೇಷ್ಟಾಲಂಬನಂದೋಱಿದು
ಜ್ಜ್ವಳನೊಳ್ ಸಂದಣುವಿಂಗಣುಸ್ಥಿತಿ ಮಹತ್ತಿಂಗಂ ಮಹತ್ತಾದ ನಿ
ಶ್ಚಲನೊಳ್ ನಿರ್ಭಯನೊಳ್ ನಿರಸ್ತಜಡತಾಸಂಸರ್ಗನೊಳ್ ಭರ್ಗನೊಳ್ ೧೨೪

ಹರನೊಲವನಾಂಪ ಬಗೆಯಿಂ
ಪಿರಿದು ತಪಂಗೆಯ್ದು ಬೞಿಕಮದನಳಿದೀಗಳ್
ಕರಮಜ್ಞತೆಯಿಂ ಪೊಣರ್ದೆಂ
ಹರಚರಣದ್ರೋಹಕಿಂತು ಭಾಜನನಾದೆಂ ೧೨೫

ಮತ್ತೇಭ ಕ್ಷಿತಿಯೊಳ್ ಕೃಚ್ಛ್ರಮುಖಪ್ರಸಿದ್ಧತಪದಿಂ ಯಾಗಂಗಳಿಂ ತೀರ್ಥಸಂ
ತತಗಿಸೇವಾವಿಧಿಯಿಂದೆ ಮಂತ್ರಜಪದಿಂ ದಾನಾದಿಯಿಂ ನಾಡೆ ನಿ

ನೊಡನೆ ಹೋರಾಡಲು ಸಾಧ್ಯವೇ ? ೧೨೩. ಏಕೈಕ ವಸ್ತುವೂ, ಮಹೇಶ್ವರನೂ, ಜನ್ಮ ಜರಾ ಮೃತ್ಯುವಿವರ್ಜಿತನೂ, ಮಹಾಮಹಿಮನೂ, ಅಗ್ನಿನೇತ್ರನೂ, ಅಕ್ಷಯನೂ, ನಾದ ಬಿಂದು ಕಳೆಗಳಿಗೆ ಅತೀತನೂ, ನಿಗಮಾಗಮಂಗಳ ಸ್ತುತಿಗೆ ನಿಲುಕದವನೂ, ಸಕಲ ಜೀವರನ್ನೂ ಸಂಸಾರದಲ್ಲಿ ವ್ಯವಹರಿಸುವಂತೆ ಮಾಡುವುದರಲ್ಲಿ ಸೂತ್ರಧಾರನಂತಿರುವವನೂ ಆದ ಶಿವನಲ್ಲಿ, ಶಿವ, ಶಿವಾ, ನನಗೆ ಕಾದಾಟವು ಉಚಿತವಾದುದೇ ? ೧೨೪. ಹೀಗೆ ವಿಚಾರ ಮಾಡಿದರೆ ನನಗೆ ಸತ್ಯ, ಜ್ಞಾನಸ್ವರೂಪನಾದವನೊಡನೆ, ನಿತ್ಯ ನಿರ್ಮಲನೊಡನೆ, ಪ್ರಾಕೃತನಾಮ, ರೂಪ, ಗುಣ, ಕ್ರಿಯಾದಿಗಳನ್ನು ಮೀರಿದ ದಿವ್ಯಜ್ಯೋತಿಸ್ವರೂಪನೊಡನೆ, ಅಣುಗಳಲ್ಲಿ ಅಣುವೂ, ಮಹತ್ತಿನಲ್ಲಿ ಮಹತ್ತೂ ಆದ ಮಹಾಮಹಿಮನೊಡನೆ, ಶಾಶ್ವತನೂ, ಅಭಯಸ್ವರೂಪನೂ, ಜ್ಞಾನರೂಪನೂ ಆದ ಪರಶಿವನಲ್ಲಿ ಹೋರಾಟವು ಯೋಗ್ಯವಾಗುವುದೇ ? ೧೨೫. ಶಿವನನ್ನು ಮೆಚ್ಚಿಸಿ, ಅವನ ಅನುಗ್ರಹವನ್ನು ಪಡೆಯಬೇಕೆಂಬ ಸಂಕಲ್ಪದಿಂದ ಬಂದ ನಾನು, ಅದಕ್ಕಾಗಿ ತಪಸ್ಸು ಮಾಡಿ, ಈಗ ವಿಶೇಷ ಮೂರ್ಖನಾಗಿ ಶಿವನೊಡನೆಯೇ ಹೋರಾಡಿದೆನಲ್ಲಾ ! ಪರಮೇಶ್ವರನ ಚರಣಗಳಿಗೆ ದ್ರೋಹವನ್ನು ಮಾಡಿದ ಪಾಪಕ್ಕೆ ಗುರಿಯಾದೆನು ! ೧೨೬. ಪ್ರಪಂಚದಲ್ಲಿ ಮಾಡಬಾರದ ಮಹಾ ಪಾಪಕಾರ್ಯವನ್ನು ಮಾಡಿದರೆ, ಅವುಗಳಿಗೆ ಪರಿಹಾರವು ಕೃಚ್ಛ್ರಾದಿ ಉಪವಾಸವ್ರತಾಚರಣೆಯಿಂದಾಗಲೀ, ತಪಸ್ಸಿನಿಂದಾಗಲೀ,

೧ ತತಿ (ಚ)

ಪ್ಪೃತಿ ಶಾಸ್ತ್ರಂಗಳೊಳುಂಟು ದುಸ್ತರಮಹಾಪಾಪಕ್ಕಮಿಲ್ಲಿಲ್ಲ ನಿ
ಶ್ಚಿತಮೆಂತುಂ ಪರಿಹಾರಮುತ್ಕಟಶಿವದ್ರೋಹಕ್ಕೆ ಶಾಸ್ತ್ರೌಘದೊಳ್ ೧೨೬

ಉತ್ಪಲ ವನ್ಯಕಿರಾತನೆಂದು ಬಗೆದೆಚ್ಚೆನಿದಿರ್ಚಿದೆನಜ್ಞಭಾವದಿಂ
ಜನ್ಯಮನಾಂತು ನಿಂದು ಮಿಗೆ ಮೆಯ್ವೊಣರ್ದೆಂ ಮದನುಗ್ರಹಾರ್ಥಮೀ
ಮಾನ್ಯಮಹೇಶ್ವರಂ ಮಱೆಯೊಳಿರ್ದುದುಮಂ ತಿಳಿದಾತನಲ್ತು ಸೌ
ಜನ್ಯವಿದೂರನಾದೆನಕಟೆನ್ನವೊಲಾವನೊ ಗಾಂಪನುರ್ವಿಯೊಳ್ ೧೨೭

ಚಂಪಕ ಸಕಲ [1]ಸುರೋರಗಾಸುರ[1] ನರರ್ಕಳನಸ್ತ್ರದೆ ಗೆಲ್ಕೆ[2] ಪ್ರಪ್ಪಸಾ
ಯಕ ಜಗದೇಕವೀರನ ಮದಂಗಿಡೆ ಮರ್ದಿಸಿದಪ್ರತರ್ಕ್ಯನೊಳ್
ಪ್ರಕಟಕೃತಾಂತಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋ
ತ್ಸುಕತೆಯೊಳೆಚ್ಚು ಗೆಲ್ವ ಬಗೆಯಾಂತೆನಿದೆನ್ನಯ ಮೋಹಮೆಂತುಟೋ ೧೨೮

ಉತ್ಪಲ ಅಂಗುಟದಿಂ ರಸಾತಳಕೆ ಮೆಟ್ಟಿದನಾ ದಶಕಂಠನಂ ಮಹಾ
ಸಂಗರದೊಳ್ ವಿಭಂಗಿಸಿದನಾಂತಸುರರ್ಕಳನಾರ್ದು ಸುಟ್ಟನಾ

ಗಂಗಾದಿ ಪುಣ್ಯನದಿಗಳಲ್ಲಿ ಸ್ನಾನಮಾಡಿ ಭಗವಂತನನ್ನು ಸೇವಿಸುವುದರಿಂದಲಾಗಲೀ, ಮಂತ್ರ ಜಪ ಧ್ಯಾನಾದಿಗಳಿಂದಲಾಗಲಿ, ಗೋ, ಹಿರಣ್ಯ, ಭೂದಾನಾದಿಗಳಿಂದಲಾಗಲಿ ಸಾಧ್ಯವೆಂದು ಶಾಸ್ತ್ರಗಳಲ್ಲಿ ಹೇಳಿರುವುದುಂಟು. ಆದರೆ ಯಾವ ಶಾಸ್ತ್ರಗಳಲ್ಲಿಯೇ ಆಗಲಿ ಮಹಾ ಶಿವದ್ರೋಹಕ್ಕೆ ಪರಿಹಾರವೇ ಇಲ್ಲ. ೧೨೭. ನಾನು ಪರಮೇಶ್ವರನನ್ನು ಕಾಡಬೇಡನೆಂದು ಭಾವಿಸಿಕೊಂಡು ಬಾಣಗಳಿಂದ ಹೊಡೆದೆನು. ಮೂರ್ಖನಂತೆ ವಿರೋಧಿಸಿದೆನು. ಜಗಳವನ್ನು ಕೆಣಕಿಕೊಂಡು, ಎದುರಿಸಿ ಮೇಲೆ ಬಿದ್ದೆನು. ನನ್ನನ್ನು ಕಾಪಾಡಲು ಮಹೇಶ್ವರನು ರೂಪಾಂತರದಿಂದ ಬಂದಿರುವುದನ್ನು ತಿಳಿಯದೆಹೋದೆ. ಅವನೊಡನೆ ಯೋಗ್ಯರೀತಿಯಲ್ಲಿ ನಾನು ವರ್ತಿಸಲಿಲ್ಲ. ಅಯ್ಯೋ, ಪ್ರಪಂಚದಲ್ಲಿ ನನ್ನ ಹಾಗೆ ಅವಿವೇಕಿಗಳು ಬೇರೆ ಯಾರುತಾನೇ ಇರಲು ಸಾಧ್ಯ ? ೧೨೮. ಸಕಲ ದೇವತೆಗಳನ್ನೂ, ಉರಗರನ್ನೂ, ರಾಕ್ಷಸರನ್ನೂ ಮತ್ತು ಮಾನವರನ್ನೂ ಜಯಿಸಬಲ್ಲ ಜಗದೇಕ ವೀರನಾದ ಮನ್ಮಥನ ದರ್ಪವನ್ನು ಅಡಗಿಸಿ, ಧ್ವಂಸ ಮಾಡಿದಂತಹ ನಿಸ್ಸೀಮ ಮಹಿಮಾನ್ವಿತನೂ, ಮೃತ್ಯುವನ್ನೇ ಜಯಿಸಿದ ಶಿವನಲ್ಲಿ ಸಾಮಾನ್ಯವಾದ ಬಿಲ್ಲು ಬಾಣಗಳಿಂದ ಗೆಲ್ಲುವ ಉತ್ಸಾಹದಿಂದ ಕೂಡಿದ್ದೆನಲ್ಲಾ, ನನ್ನ ಅಜ್ಞಾನವು ಎಷ್ಟು ಪ್ರಬಲವಾದುದು ! ೧೨೯. ಈ ಪರಶಿವನು, ರಾವಣಾಸುರನು ಕೈಲಾಸಪರ್ವತವನೆತ್ತಲು ತೊಡಗಿದಾಗ, ತನ್ನ ಕಾಲಿನ ಹೆಬ್ಬೆರಳನ್ನು ಊರುವ ಮಾತ್ರದಿಂದಲೆ, ಆ ರಾಕ್ಷಸನನ್ನು ಪಾತಾಳಕ್ಕೆ ತುಳಿದನು. ತನ್ನೊಡನೆ ಯುದ್ಧಕ್ಕೆ ನಿಂತ ಜಲಂಧರ, ಅಂಧಕಾಸುರ, ಗಜಾಸುರನೇ ಮೊದಲಾದ ರಾಕ್ಷಸವೀರರನ್ನು ಧ್ವಂಸ ಮಾಡಿದನು. ಗಗನದಲ್ಲಿ ಕೋಟೆ

---

೧-೧ ಸುರಾಸುರೋರಗ (ಯ) ೨- ಗೆಲ್ದ (ಯ)

ರ್ಪಿಂ ಗಗನಸ್ಥಿತಾಸುರಪುರತ್ರಯಮಂ ಸದೆದಂ ಕೃತಾಂತನಂ
ತುಂಗಪರಾಕ್ರಮಂ ಗಿರಿಶನೀತನೊಳೆಂತುಟೊ ಗೆಲ್ವು[1]ದುಜ್ಜುಗಂ ೧೨೯

ಮಹಾಸ್ರಗ್ಧರೆ ಮುಳಿದಾಂ ನೋಟ್ಪಂದದೀ ಕಣ್ಣೆರಡರೊಳೆ ಮಹಾವಿಶ್ವತಶ್ಚಕ್ಷುವಂ ಕೆಯ್
ಗೊಳಿಸುತ್ತಿರ್ಕೆಯ್ಗಳಿಂ ಕಾದುವ ಸಡಗರವೀ ವಿಶ್ವತೋಬಾಹುವೊಳ್ ಸಾ
ರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳವೀ ವಿಶ್ವತಃಪಾದನೊಳ್ ಸಂ
ಗಳಿಸಿತ್ತೀ ವಿಶ್ವತೋವಕ್ತ್ರನೊಳೆ ಪುರುಡುವಾತೆನ್ನದೋ ಮದ್ವಿಮೋಹಂ ೧೩೦

ಉತ್ಪಲ ಮೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾ
ಹ್ಲಾದದ ಝಂಕೆಗಳ್ ಗಡ ಜಗತ್ರಯ ದುರ್ಜಯನೊಳ್ ಶರೌಘದಿಂ
ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ
ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ ೧೩೧

ಚಂಪಕ ಹರ ಹರ ತಾರ್ಕ್ಷ್ಯನೆತ್ತ ಫಣಿಯೆತ್ತ ಮಹಾವನವಹ್ನಿಯೆತ್ತ ಕಾ
ಟ್ಮರಮುಮದೆತ್ತ ವಜ್ರಧರನೆತ್ತ ಧರಾಧರಮೆತ್ತ ಮತ್ತಕೇ
ಸರಿಪತಿಯೆತ್ತ ವನ್ಯಗಜಮೆತ್ತ ಪೊಣರ್ಕೆಗಿವೆತು ನಿಲ್ವುವಾ
ಪರಿ ಜಗದೇಕದೇವ ಶಿವನೆತ್ತ ಧನಂಜಯನೆತ್ತ ಧಾತ್ರಿಯೊಳ್ ೧೩೨

ಗಳನ್ನು ನಿರ್ಮಿಸಿಕೊಂಡಿದ್ದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಗಳೆಂಬ ತ್ರಿಪುರಾಸುರರನ್ನು ಅಟ್ಟಹಾಸ ಮಾಡಿ ಸುಟ್ಟುಹಾಕಿದನು. ಯಮನನ್ನೇ ನಾಶಮಾಡಿದನು. ಅಂತಹ ಉನ್ನತಪರಾಕ್ರಮಿಯಾದ ಶಂಕರನೊಡನೆ ಹೋರಾಡಿ, ಗೆಲ್ಲುವ ನನ್ನ ಪ್ರಯತ್ನವು ಎಷ್ಟು ಮಾತ್ರದ್ದು ತಾನೇ ಆಗುವುದು! ೧೩೦. ನನ್ನ ಈ ಎರಡು ಚರ್ಮಚಕ್ಷುಗಳಿಂದ ಕೋಪಗೊಂಡು ಆ ಮಹಾ ವಿಶ್ವತಶ್ಚಕ್ಷುವನ್ನು ದಿಟ್ಟಿಸುವುದೇ? ಈ ಎರಡು ತೋಳುಗಳಿಂದ ವಿಶ್ವತೋಬಾಹುವಿನೊಡನೆ ಮೇಲೆ ಬಿದ್ದು ಹೋರಾಡುವ ಸಡಗರವೇ? ಈ ಎರಡು ಕಾಲುಗಳಿಂದ ಆ ವಿಶ್ವತಃಪಾದನೊಡನೆ ಕೂಡಿ, ಕಾದಾಡುವ ಬಿಂಕವೇ? ಆ ವಿಶ್ವತೋಮುಖನೊಡನೆ ನನ್ನ ವೀರಾಲಾಪವೇ? ಎಂಥಹ ಅವಿವೇಕ ನನ್ನದಾಯಿತು! ೧೩೧. ವೇದಗಳ ಸ್ತುತಿಗೆ ನಿಲುಕದ ಸ್ವರೂಪವುಳ್ಳ ಶಿವನೊಡನೆ ನಮ್ಮ ಬಿರುಸಿನ ನುಡಿಗಳೇ? ತ್ರಿಭುವನದಲ್ಲಿಯೂ ಅಜೇಯನಾದವನೊಡನೆ ವಿಜಯೋನ್ಮತ್ತನಾಗಿ ಅಬ್ಬರಿಸುವುದೇ? ಮೃತ್ಯುಂಜಯನನ್ನು ಬಾಣಗಳ ಪ್ರಯೋಗದಿಂದ ಘಾತಿಸುವುದು ಒಂದು ಜಾಣ್ಮೆಯೇ? ನಿರ್ದೇಹಿಯಾದ ಶಿವನಲ್ಲಿ ಮುಷ್ಟಿಯುದ್ಧವನ್ನು ಮಾಡುವೆನೆಂಬುದು ಬಹಳ ಚೋದ್ಯವಾಗಿರುವುದಿಲ್ಲವೇ? ೧೩೨. ಹರ, ಹರಾ! ಗರುಡನೆಲ್ಲಿ–ಹಾವೆಲ್ಲಿ? ದೊಡ್ಡ ಕಾಳ್ಗಿಚ್ಚೆಲ್ಲಿ–ಒಂದು ಮೋಟು ಮರವಲ್ಲಿ? ವಜ್ರಾಯುಧಧಾರಿಯಾದ ಇಂದ್ರನೆಲ್ಲಿ–ಒಂದು ಪರ್ವತವೆಲ್ಲಿ? ಮದೋನ್ಮತ್ತವಾದ

---

೧ ಗೆಲ್ಲ (ಕ, ಯ)

ಮತ್ತೇಭ ಭಯಭಕ್ತಿಸ್ಪೃಹೆವೆತ್ತು ನೋಟ್ಪ ನಯನಂ ರೋಷಾರುಣಾವೇಶದು
ರ್ಣಯಕೀಡಾಯ್ತು ಪದಾಬ್ಜಪೂಜನಕೆ ಪಕ್ಕಾಗಿರ್ದ ಕೆಯ್ ಕೆಯ್ದುವಂ
ರಯದಿಂ ತಾಳ್ದಿದಿರಾಂತುದೀಶ್ವರಮಹಾಮಂತ್ರಕ್ಕೆ ಬೀಡಾದ ಜಿ
ಹ್ವೆಯೆ ಮಾಱುತ್ತರವಾಂತುದಕ್ಕಟ ಮಹಾವ್ಯಾಮೋಹಮೇಗೆಯ್ಯದೋ ೧೩೩

ಉತ್ಪಲ ಆವಳ ಪಾದಪಂಕಜದಧಸ್ಸ್ಥಳದೊಳ್ ಸಲೆ ಸುಪ್ರತಿಷ್ಠಿತರ್
ಭಾವಿಸೆ ಧಾತೃ ದೈತ್ಯರಿಪು ರುದ್ರ ಮಹೇಶ ಸದಾಶಿವರ್ಕಳಾ
ಪಾವನಶಕ್ತಿಯಾವನಡಿಗಾತ್ಮಶಿರಸ್ಕಮನಾನ್ಕೆಗೆಯ್ದ[1]ಳಾ
ದೇವನೊಳಾಂ ದಿಟಂ ಶಿವ ಶಿವಾ ಮುಳಿಸಿಂ ಸೆಣಸಲ್ ಸಮರ್ಥನೇ ೧೩೪

ಪುಟ್ಟಿದ ಪೊಂದದುಂಟೆನಿಸದಿಲ್ಲೆನಿಸುತ್ತಿರದೆಯ್ದೆ ಮಾಯೆಯುಂ
ಮುಟ್ಟದ ಪಿಂಗದೋಸರಿಸದೊಂದಿರದಾತ್ಮರನಾತ್ಮಪಾಶದಿಂ
ಕಟ್ಟುವ ಕಟ್ಟುವ[2]ಗ್ಗಮನದಂ ಪಱಿದಿಕ್ಕುವ ಮಿಕ್ಕು ತೋರ್ಪ ಕೆ
ಯ್ಗೆಟ್ಟುವಱ ಮುಟ್ಟೆ ಸಿಲ್ಕದ ಮಹಾತ್ಮನೊಳಪ್ಪುದೆ ಮತ್ಪರಾಕ್ರಮಂ ೧೩೫

ಸಿಂಹರಾಜನೆಲ್ಲಿ-ಒಂದು ಕಾಡಾನೆಯೆಲ್ಲಿ ? ಹೋರಾಡಲು ಇವುಗಳಿಗೆ ಯಾವ ಹೋಲಿಕೆ ತಾನೆ ಸಾಧ್ಯ ? ಹೀಗಿರುವಾಗ ಜಗದೇಕದೈವವಾದ ಶಿವನೊಡನೆ ಹೋರಾಡಲು ಈ ಅರ್ಜುನನು ಎಷ್ಟುಮಾತ್ರದವನು ? ೧೩೩. ಭಯ, ಭಕ್ತಿಗಳಿಂದಲೂ, ಆಶ್ಚರ್ಯ ದಿಂದಲೂ ಶಿವನ ದರ್ಶನವನ್ನು ಮಾಡಬೇಕಾದ ಕಣ್ಣುಗಳು ಕೋಪಾವೇಶದಿಂದ ಕೆಂಪಾಗಿ ನೋಡಿದ ಅಪಚಾರಕ್ಕೆ ಗುರಿಯಾದವು. ಪಾದಕಮಲಗಳನ್ನು ಪೂಜಿಸಲು ಯೋಗ್ಯವಾದ ಕೈಗಳು ಆಯುಧವನ್ನು ಹಿಡಿದು, ತಟ್ಟನೆ ಎದುರುಬಿದ್ದವು. ಮಹಾ ಶಿವಮಂತ್ರವನ್ನುಚ್ಚರಿಸುತ್ತಿದ್ದ ನನ್ನ ಬಾಯಿ ಶಿವನಿಗೇ ಎದುರು ಹೇಳುವಂತಾಯಿತು. ಅಯ್ಯೋ, ನನ್ನ ದುರಭಿಮಾನವು ಎಂತಹ ಹೀನಕಾರ್ಯಗಳನ್ನು ನನ್ನಿಂದ ಮಾಡಿಸಿತು ! ೧೩೪. ವಿಚಾರಮಾಡಲು ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವರುಗಳು ಯಾವ ಮಹಾ ಮಾಯಾಸ್ವರೂಪಿಣಿಯ ಪಾದಕಮಲಗಳ ಕೆಳಗಿದ್ದುಕೊಂಡು ತಾವು ಧನ್ಯರೆಂದುಕೊಂಡರೋ, ಆ ಪರಾಶಕ್ತಿದೇವತೆಯೇ ಈ ಶಿವನ ಚರಣಗಳಿಗೆ ತನ್ನ ಶಿರಸ್ಸನ್ನು ಬಾಗುವಾಗ, ಅಂತಹ ಮಹಾದೇವನಲ್ಲಿ ನಾನು ಕೋಪಮಾಡಿಕೊಂಡು ಕಾದಾಡಲು ಶಕ್ಯನೇ ? ೧೩೫. ಅಜನೂ, ನಿರ್ಲಿಪ್ತನೂ, ಅಗೋಚರನೂ, ಶೂನ್ಯ ನಲ್ಲದವನೂ, ಸರ್ವಾವರಣನೂ, ನಿರ್ಮಾಯನೂ, ನಿಸ್ಸಂಗಿಯೂ, ಸರ್ವಾತ್ಮಕನಾದರೂ ಪ್ರಕೃತಿಭಿನ್ನನೂ, ಜೀವಕೋಟಿಗಳನ್ನು ಮಾಯಾಪಾಶದಿಂದ ಬಂಧಿಸುವವನೂ, ಆ ಬಂಧನದಿಂದ ಮುಕ್ತಮಾಡುವವನೂ, ಸಕಲಕ್ಕೂ ಭಿನ್ನನಾಗಿರುವವನೂ, ಭಕ್ತಿಗೆ ಪ್ರಾಪ್ಯನೂ, ಕರ್ಮಗಳಿಗೆ ದುಷ್ಪ್ರಾಪ್ಯನೂ ಆದ ಮಹಾನುಭಾವನಲ್ಲಿ ನನ್ನ ಪ್ರತಾಪವು

---

೧ ಗೆಯ್ವ (ಕ) ೨ ಗಟ್ಟುವ (ಯ)

ಎಂಗಿದಿಂತು ಚಿಂತಿಸುತೆ ಪಲ
ವಂದದೆ ಬಗೆನೊಂದು ಪಮ್ಮದಂಬೋಗಿರೆ ಪಾ
ರ್ಥಂ ದಯೆಯಿಂದವನಿರ್ದೆಡೆ
ಗಿಂದುಧರಂ ತಳರ್ದು ತಣ್ಪುವೀಱಿದನಾಗಳ್ ೧೩೬

ಚಂಪಕ ಪೊಗೆಯಳಿದಗ್ನಿಯಂತೆ ಮುಗಿಲೋಡಿದ೨ ಭಾಸ್ಕರನಂತೆ ಮಾಯೆ ಮೆ
ಯ್ದೆಗೆದ ನಿಜಾತ್ಮನಂತಿರೊಱೆಯುರ್ಚಿದ ಕೂರಸಿಯಂತೆ ಕಾಂತಿ ಕಿಯ್
ಮಿಗೆ ಶಬರಾಂಗಮಂ ತೊಱೆದು ಪೂರ್ವನಿಜಾಕೃತಿವೆತ್ತಲಂಪಿನಿಂ
ಸೊಗಯಿಸುತಿರ್ದನಾಗಮಶಿರು ಪೊಗಟುತ್ತಿರೆ ಚಂದ್ರಶೇಖರಂ ೧೩೭

ಗದ್ಯ ಇದು ನಿಖಿಲ೩ ಭುವನೈಕವಲ್ಲಭ ಸುರಾಸುರೇಂದ್ರ ವರದ ಕರುಣಾವರಣ ಪರಮ ಶಿವಲಿಂಗ ತರುಣಪತಂಗಸಂಗತ ಮಂಗಳಹೃದಯಾರವಿಂದಬಂಧುರ ೪ಸರಸಸಜ್ಜನ೪ಮಾನಿತೋಭಯ ಕವಿತಾವಿಚಕ್ಷಣ೫ ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳ ಪ್ರಬಂಧದೊಳ್ ಶಬರಶಂಕರ ಪಾರ್ಥ ಯುದ್ಧವರ್ಣನಂ ಚತುರ್ಥಾಶ್ವಾಸಂ ಪರಿಸಮಾಪ್ತಂ.

ಸಾಗುವುದೇ ?" ೧೩೬. ಈ ರೀತಿಯಾಗಿ ಅರ್ಜುನನು ವಿಷಾದಿಸುತ್ತಾ, ನಾನಾ ವಿಧವಾಗಿ ವ್ಯಾಕುಲವನ್ನು ಹೊಂದಿ, ಗರ್ವವು ಉಡುಗಿಹೋಗಲು, ಚಂದ್ರಶೇಖರನಾದ ಶಿವನು ಅವನಿದ್ದಲ್ಲಿಗೆ ಬಂದು, ಅವನ ಮನದ ತಾಪವನ್ನು ಪರಿಹರಿಸಿದನು. ೧೩೭. ಉಪನಿಷತ್ತುಗಳು ಹೊಗಳುತ್ತಿರಲು, ಚಂದ್ರಶೇಖರನು ಬೇಡನಾಕಾರವನ್ನು ಬಿಟ್ಟು, ತನ್ನ ಸಹಜವಾದ ಸ್ವರೂಪವನ್ನು ಪ್ರಕಟಿಸಿ ಮಹಾತೇಜಸ್ಸಿನಿಂದ ಬೆಳಗುತ್ತಿದ್ದನು. ಅವು ನಿರ್ಮಾಮವಾದ ಅಗ್ನಿಯಂತೆ, ಮೇಘ ಚದುರಿಹೋದಮೇಲೆ ಬೆಳಗುವ ರವಿಯಂತೆ, ಮಾಯೆಯ ಆವರಣದಿಂದ ಮುಕ್ತನಾದ ಆತ್ಮಸ್ವರೂಪವು ಬೆಳಗುವಂತೆ, ಓರೆಯಿಂದ ಈಚೆಗೆ ಸೆಳೆದು ಹರಿತವಾದ ಕತ್ತಿಯಂತೆ ಅತಿಶಯ ತೇಜಸ್ಸಿನಿಂದ ಕೂಡಿದ್ದಿತು. ಗದ್ಯ : ಈ ಗದ್ಯ ಪದ್ಯಾತ್ಮಕವಾದ ಚಂಪೂಪ್ರಬಂಧವು ಸಮಸ್ತಲೋಕಗಳಿಗೂ ಏಕ ಮಾತ್ರ ಪ್ರಭುವೂ, ದೇವದಾನವೇಂದ್ರರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸುವವನೂ, ದಯಾಕವಚನೂ, ಶ್ರೇಷ್ಠನೂ, ಶುಭಚಿಹ್ನನಾದ ಮಹಾದೇವನೆಂಬ ತರುಣ ಭಾಸ್ಕರ ನೊಡಗೂಡಿದ ನಿರ್ಮಲಚಿತ್ತವೆಂಬ ತಾವರೆಯಿಂದ ಶೋಭಿತನೂ, ರಸಜ್ಞರಾದ ವಿದ್ವಾಂಸರಿಂದ ಪುರಸ್ಕೃತನೂ, ಕನ್ನಡ ಸಂಸ್ಕೃತಭಾಷೆಗಳೆರಡರಲ್ಲೂ ಕವಿತಾಕೌಶಲವುಳ್ಳವನೂ ಆದ ಶ್ರೀ ಷಡಕ್ಷರದೇವನೆಂಬ ಕವಿಯಿಂದ ವಿರಚಿತವಾದ ಕಿರಾತರುದ್ರ ಲೀಲಾಕಥನ ಮಹಾಕೃತಿಯಲ್ಲಿ ಶಬರಶಂಕರ ಪಾರ್ಥ ಯುದ್ಧವರ್ಣನವೆಂಬ ನಾಲ್ಕನೆಯ ಆಶ್ವಾಸವು ಸಮಾಪ್ತವಾದುದು.

---

೧ ಬಂ (ತ) ೨ ಲೊಡ್ಡದ (ಗ, ಜ, ತ) ೩ ಸಮಸ್ತ (ಚ, ಜ) ೪–೪ ಸರಸಜನ (ಯ) ೫ ವಿಶಾರದ (ಯ)

# ಪಂಚಮಾಶ್ವಾಸಂ

ಶ್ರೀಸರ್ವಮಂಗಳಾಮುಖ
ಭಾಸುರಪೂರ್ಣೇಂದುರುಚಿಚಕೋರಂ ವಿಶ್ವಾ
ವಾಸಂ ನಿಗಮಸ್ತುತಸುವಿ
ಲಾಸಂ ಮಾಟ್ಕೆಮಗೆ ಸೌಖ್ಯಮಂ ಶಿವಲಿಂಗಂ ೧

ಮಹಾಸ್ರಗ್ಧರೆ ರವಿಕೋಟಿದ್ಯೋತಮೆತ್ತಂ ತೊಳಗೆ ಶಶಿಕಲಾಸ್ವರ್ಧುನೀಜೂಟನಂಗೋ
ದ್ಭವಭಸ್ಮಾಲಿಪ್ತಸಕ್ಷಿತ್ರಯಕಲಿತನನಂತಾಹಿಭೂಷಂ ಮಹಾಕೃ
ತ್ತಿವಸಾನಂವಿ ಪಂಚವಕ್ತ್ರಂ ದಶಭುಜನಸಿತಗ್ರೀವನೊಲ್ದೊಪ್ಪಿದಂ ಟಂ
ಕವರಾಭೀತಿತ್ರಿಶೂಲಾದ್ಯುಪಲಸಿತಕರಂ ದಿವ್ಯರೂಪಂ ಮಹೇಶಂ ೨

ಎಳವಳಿಕಿನ ಬೆಳ್ವೆಳಗಂ
ಬಟಲ್ಚಿ ಶಶಿರುಚಿಯೊಳೆರಕವಿಟ್ಟಂದದಿನೇಂ
ತೊಳಗಿದುದೊ ಧವಳಕಿರಣೋ
ಜ್ಜ್ವಳಸದ್ಯೋಜಾತವದನಮದು ಪರಶಿವನಾ ೩

೧. ಸಂಪತ್ಕರಳಾದ ಪಾರ್ವತಿಯ ಮುಖಚಂದ್ರನ ಕಾಂತಿಯೆಂಬ ಬೆಳುದಿಂಗಳನ್ನು ಆಸ್ವಾದಿಸುವ ಚಕೋರಪಕ್ಷಿಯಾದವನೂ, ಜಗದಾಧಾರನೂ, ವೇದಗಳಿಂದ ಕೀರ್ತಿಸಲಾದ ಅದ್ಭುತ ಲೀಲೆಗಳಿಂದ ಕೂಡಿದವನೂ, ಮಂಗಳಸ್ವರೂಪನೂ ಆದ ಪರಮೇಶ್ವರನು ನಮಗೆ ಆನಂದವನ್ನು ಮಾಡಲಿ. ೨. ಮಹೇಶ್ವರನು ತನ್ನ ದಿವ್ಯರೂಪವನ್ನು ಪ್ರಕಟಿಸಿದನು. ಆಗ ಕೋಟಿ ಸೂರ್ಯಪ್ರಕಾಶವು ಎಲ್ಲಾ ಕಡೆಯೂ ತುಂಬಿತು. ಜಟಾಜೂಟದಲ್ಲಿ ಚಂದ್ರಕಲೆಯೂ, ದೇವಗಂಗೆಯೂ, ಮೈಗೆ ಸುಟ್ಟ ಮನ್ಮಥನ ಭಸ್ಮಲೇಪವೂ, ತ್ರಿನೇತ್ರಗಳೂ, ಆದಿಶೇಷನ ಆಭರಣಗಳೂ, ಮಹಾಗಜಚರ್ಮಾಂಬರವೂ, ಪಂಚಮುಖಗಳೂ, ಹತ್ತು ತೋಳುಗಳೂ, ಕರಿಗೊರಲೂ ಮತ್ತು ಹಸ್ತಗಳಲ್ಲಿ ಟಂಕಾಯುಧ ಹಾಗೂ ವರಾಭಯ ಮುದ್ರೆಗಳೂ, ತ್ರಿಶೂಲವೂ ಶೋಭಿಸಿ ಶಿವನು ಕಂಗೊಳಿಸಿದನು. ೩. ನಯವಾದ ಸ್ಫಟಿಕದ ಕಾಂತಿಯನ್ನೂ ಮೀರಿ, ಚಂದ್ರನ ಬೆಳುದಿಂಗಳೊಡನೆ ಬೆರೆತು ಸೇರಿಕೊಂಡ ರೀತಿಯಲ್ಲಿ ಶುಭ್ರಕಿರಣಗಳಿಂದ ಉಜ್ವಲವಾದ ಶಂಕರನ ಸದ್ಯೋಜಾತ

---

೧ ನಂಗಾಹಿ (ಚ) ೨ ವಿವಾಸಂ (ಚ)

ಎಳನೇಸಱ ಬಿಂಬದ ಕೆಂ
ಬೆಳಗಂ೧ ತೆಗಟ್ಟಿ೨ಲರ್ದ ದಾಸಳದ೩ ಪೊಸಗೆಂಪ೪ಳಿ
ಪಱಿಕೆಯುದ್ದು ವಾಮದೇವೋ
ಜ್ಜ್ವಳವದನಂ ಸೊಗಯಿಸಿರ್ದುದಗಜಾಧವನಾ೫ ೪

ಭ್ರಮರಾಂಜನಾಭ್ರರುಚಿ ವಿ
ಭ್ರಮಮತಿಸಿತಕುಟಿಲದಂಷ್ಟ್ರಮಕ್ಷಿತ್ರಯಸಂ
ಕ್ರಮಿತಂ ಕರಮೆಸೆದುದಘೋ೬
ರಮುಖಂ ಫಣಿಕುಂಡಲೋಜ್ಜ್ವಲಂ ಪುರಹರನಾ ೫

ಅಲರ್ದ೭ ಪೊಸಕರ್ಣಿಕಾರದ
ಸುಲಲಿತ ನವಕನಕಕಂಜಕಿಂಜಲ್ಕದ ಮಂ
ಜುಲರುಚಿಯಂ ಪಱಿದೆಸೆದುದು
ವಿಲಸಿತ ತತ್ಪುರುಷವಕ್ತ್ರಮಹಿಕುಂಡಲನಾ ೬

ಎಳಮುತ್ತಿನ ಶಂಖದ ಬೆ
ಳ್ವೆಳಗಂ ಮುಕ್ಕುಳಿಸಿದಂತೆ ತೊಳತೊಳಗುವ ಸೈ
ಪಳವಡೆ ನಯನತ್ರಯಮಂ
ಜುಳಮೀಶಾನಾಸ್ಯಮೊಪ್ಪಿದುದು ಶಶಿಧರನಾ ೭

ಮುಖವು ಬೆಳಗುತ್ತಿದ್ದಿತು. ೪. ಬಾಲಸೂರ್ಯನ ಕೆಂಬೆಳಗನ್ನೂ ಮೀರಿ, ಅರಳಿದ ದಾಸವಾಳದ ನವಾರುಣ ಕಾಂತಿಯನ್ನೂ ಧಿಕ್ಕರಿಸುವಂತೆ, ಪಾರ್ವತೀರಮಣನ ವಾಮ ದೇವವೆಂಬ ಪ್ರಕಾಶಮಾನವಾದ ಮುಖವು ಬೆಳಗುತ್ತಿದ್ದಿತು. ೫. ದುಂಬಿ, ಕಾಡಿಗೆ ಮತ್ತು ಕಾಲಮೇಘಗಳಂತೆ ಕಾಂತಿಯೂ, ಅತಿಸ್ವಚ್ಛವಾದ ಕೋರೆದಾಡೆಗಳೂ, ಮೂರು ಕಣ್ಣುಗಳೂ, ಹಾವಿನ ಕರ್ಣಾಭರಣಗಳೂ ಕೂಡಿ ಬೆಳಗುತ್ತಿರುವ ಪುರಮಥನನ ಅಘೋರ ಮುಖವು ಕಂಗೊಳಿಸಿತು. ೬. ಆಗತಾನೇ ಅರಳಿದ ಬೆಟ್ಟದ ತಾವರೆಯ ಮತ್ತು ಮನೋಹರವಾದ ಹೊಸಹೊಂದಾವರೆಯ ಕೇಸರಗಳ ಕಾಂತಿಗಳನ್ನು ಕಡೆಗಣಿಸಿದ ದೇಹ ಕಾಂತಿಯಿಂದ ಫಣಿಕುಂಡಲನಾದ ಶಿವನ ಪ್ರೋಜ್ಜ್ವಲವಾದ ತತ್ಪುರುಷಮುಖವು ಮೆರೆಯುತ್ತಿದ್ದಿತು. ೭. ಚಂದ್ರಚೂಡನ ಈಶಾನಮುಖವು ಎಳೆಯ ಮುತ್ತಿನ ಮತ್ತು ಧವಳಶಂಖದ ಶುಭ್ರಕಾಂತಿಯನ್ನು ಚೆಲ್ಲುತ್ತಾ ತೊಳತೊಳಗಿ ಆನಂದವನ್ನುಂಟು

---

೧ ಬೆಳರಂ (ಗ, ತ) ೨ ತೆಗೆದ (ಚ) ೩ ದಾಸಣದ (ಯ) ೪ ಕೆಂಪಂ (ಕೈಬರೆಹದ ಪ್ರತಿಗಳಲ್ಲಿ) ೫ ವರನಾ (ಚ) ೬ ಸೆದುದು ಘೋ (ಜ) ೭ ಅಲರ್ದು (ಗ, ತ) ; ಅಲರ್ವ (ಯ)

ಮಹಾಸ್ರಗ್ಧರೆ ಘನತೇಜಂ ರತ್ನಮಾ ರತ್ನದಿಮಧಿಕಕರಂ ಕಾಂಚನಂ ರತ್ನದಿಂ ಕಾ
ಚನದಿಂ ತೀವ್ರಾಂಶುಯುಕ್ತಂ ಪಳಚನೆ ಪೊಳೆವೊಳ್ಮಿಂಚುಮಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿ ಪಿರಿದೊಪ್ಪಿರ್ಕುಮಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿಯಿನಳುಂಬಂ ಮಹೇಶಪ್ರಕಾಶಂ ೮

ಚಂಪಕ ತುಱಿಲಳವಾಂತು ನಿಂದ ಮಿಗಬೇರ[1]ನನಿಕ್ಕಿ ಪೊಣರ್ಕೆಗಾರ್ಪು ಸಂ
ಗಳಿಸಿದಿರಾಂತ ಪಲ್ಲಮಱಿರಕ್ಕಸನಂ ಸದೆವಣ್ಮಿ ಚುರ್ಚಿ ಬಾಂ
ಬೊಟಿಲನೊಡರ್ಚಿ ನಲ್ಪೊಗಮನಗ್ಗಿವೊಗರ್ಗೆ ಸಮಂತು ಬೆಳ್ವಸು
ದಳೆದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ ೯

ಶ್ರುತಿವೀಥಿ[2] ಮುಗಿದ ಕೆಯ್ಗಳಿ
ನತಿಶಯಮೆನೆ ಪೊಗಟ್ಟ ಮಂಗಳಧ್ವನಿ ದಿವಿಜ
ಪ್ರತತಿಯ ಜಯಜಯರುತಿ ಗಣ
ನುತಿನಿನದಂ ದೆಸೆಯನಳುರ್ದುದೇಂ ಮುಸುಕಿದುದೋ ೧೦

ಮಾಡುತ್ತಾ, ಮೂರು ಕಣ್ಣುಗಳಿಂದ ಕೂಡಿ ರಮಣೀಯವಾಗಿದ್ದಿತು. ೮. ಉಜ್ಜ್ವಲ ಕಾಂತಿಯಿಂದ ಬೆಳಗುವುದು ರತ್ನ; ರತ್ನಕ್ಕಿಂತಲೂ ಹೆಚ್ಚು ಬೆಳಗುವುದು ಬಂಗಾರ; ರತ್ನ, ಬಂಗಾರಗಳಿಗಿಂತಲೂ ಅಧಿಕಪ್ರಕಾಶ ಫಳ್ ಎಂದು ಹೊಳೆಯುವ ಕೋಲ್ಮಿಂಚು; ರತ್ನ, ಬಂಗಾರ, ಮಿಂಚುಗಳಿಗಿಂತಲೂ ಸೂರ್ಯನ ಕಾಂತಿಯು ಮತ್ತೂ ಕಾಂತಿಯುಕ್ತವಾದುದು. ರತ್ನ, ಬಂಗಾರ, ಮಿಂಚು, ಸೂರ್ಯಪ್ರಕಾಶಗಳಿಗಿಂತಲೂ ಪರಮೇಶ್ವರನ ತೇಜಸ್ಸು ಅಖಂಡೋಜ್ಜ್ವಲವೆನಿಸಿ ಶೋಭಿಸಿತು. ೯. ಶೌರ್ಯ, ಸಾಮರ್ಥ್ಯಗಳಿಂದ ಎದುರುಬಿದ್ದ ವ್ಯಾಘ್ರಾಸುರನನ್ನು ಸಂಹರಿಸಿದ, ಕದನೋನ್ಮುಖನಾದ ಪರಾಕ್ರಮಿ ಗಜಾಸುರನನ್ನು ಕೊಂದ, ಆಕಾಶದಲ್ಲಿ ಮನೆಗಳನ್ನು ನಿರ್ಮಿಸಿಕೊಂಡಿದ್ದ ತ್ರಿಪುರಾಸುರರನ್ನು ಧ್ವಂಸಮಾಡಿ, ದೇವತೆಗಳಿಗೆ ಆನಂದವನ್ನುಂಟುಮಾಡಿ ಧವಳಕೀರ್ತಿಯನ್ನು ಮೆರೆಸಿದ ವ್ಯೋಮಕೇಶನು ತನ್ನ ರಮ್ಯಮೂರ್ತಿಯನ್ನು ಪ್ರಕಟಿಸಿದನು.[1] ೧೦. ಕೈಗಳನ್ನು ಮುಗಿದುಕೊಂಡು ವಿಸ್ಮಯದಿಂದ ವೇದರಾಶಿಗಳು "ಅದ್ಭುತ, ಅದ್ಭುತ"ವೆಂದು ಉದ್ಘರಿಸುವ ಧ್ವನಿಯೂ, ದೇವತಾಸಮೂಹವು ಸ್ತುತಿಸುತ್ತಲಿದ್ದ ಮಂಗಳಘೋಷವೂ ಪ್ರಮಥಗಣಗಳ ಜಯ ಜಯಕಾರವೂ ಸಕಲ ದಿಕ್ಕುಗಳನ್ನೂ ತುಂಬಿ ವ್ಯಾಪಿಸಿದುವು.

೧ ದೇರ (ಯ) ; ಭೇದ (ಜ) ೨ ಶ್ರುತಿ ವಿತತ (ಯ)

[1] ಮಿಗಬೇರ (ಸಂ. ಮೃಗವೈರ) = ವ್ಯಾಘ್ರ. ಪಲ್ಲಮಱಿ = ಆನೆ, ಬಾಂಬೊಟಿಲ್ = ಆಕಾಶದಲ್ಲಿ ಮನೆಯನ್ನು ಕಟ್ಟಿಕೊಂಡ ತ್ರಿಪುರಾಸುರ. ಅಗ್ಗಿವೊಗರ್ = ಅಗ್ನಿಮುಖರಾದ ದೇವತೆಗಳು. ಬಾನ್ನವಿರ = ವ್ಯೋಮಕೇಶನಾದ ಶಿವ. ಒಳ್ವರಿಜ = ಸುಂದರವಾದ ದೇಹ (ರು)

ಚಂಪಕ ವಿತತ ಸುಗಂಧಿಗಸಾರಸುರಭೀಕೃತ ದಿಙ್ಮುಖಚಂಚರೀಕಸಂ
ಗತ ಮಕರಂದಪೂರ್ಣ ಸುಮನೋಗಣಪಾಣಿವಿಮುಕ್ತ ಭೂರಿದಿ
ವ್ಯತರುಲತಾಂತವೃಷ್ಟಿ ಸುರಭೇರಿಯ ನಿರ್ಭರನಾದಮುಣ್ಮೆ ಸ
ನ್ನುತ ಸುರರಾದ್ಘೋಷಣೆಯೆನೆ ವಿಜೃಂಭಿಸಿ ಸೂಸಿದುದೀಶ್ವರಾಂಘ್ರಿಯೊಳ್ ೧೧

ಹರಗಣಮುಂ ಸುರಗಣಮುಂ
ಕಿರಾತವೇಷಮನಗಲ್ದು ದಿವ್ಯಾಭರಣಾಂ
ಬರಗಂಧಮಾಲಿಕಾಬಂ
ಧುರಮೆಸೆದುದು ಮುನ್ನಿನಂತಿರಭವನ ಪೊರೆಯೊಳ್* ೧೨

ಚಂಪಕ ಉಟಿದು ಪುಳಿಂದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ
ಬಳಸಿರೆ ತಾನುಮಂತೆ ನಗನಂದನೆ ಹಾರಕಿರೀಟಕುಂಡಲೋ
ಜ್ಜ್ವಳಕಳಕಾಂಚಿ ಕಂಕಣಪದಾಂಗದ ಮುಖ್ಯವಿಭೂಷಣಾಳಿ ಕ
ಣ್ಗೊಳಿಸಿರೆ ದೇವದೇವನೆಡದೊಳ್ ನೆಲಸಿರ್ದಳುದಾರಶೋಭೆಯಿಂ ೧೩

ವಚನ ಆಗಳ್

ಚಂಪಕ ಬೆಮರ್ವ ಕಳೇವರಂ ಸುರಿವ ಸಂತಸಗಣ್ಬನಿ ತಳ್ತ ಕಂಪನಂ
ನಿಮಿರ್ದ ಸೆವಂಗರೋಮತತಿ ಕಣ್ಗೊಳಿಸುತ್ತಿರೆ ತಳ್ವದೆಟ್ಟಿಳಿ ಸಂ

೧೧. ದೇವತೆಗಳು ಉಚ್ಚಸ್ವರದಿಂದ ಸ್ತುತಿಸುತ್ತಲೂ, "ಉಘೇ" ಎಂದು ಜಯಕಾರವನ್ನು ಮಾಡುತ್ತಲೂ ಇದ್ದರು. ದೇವದುಂಧುಬಿಗಳು ಮೊಳಗುತ್ತಿದ್ದುವು. ದಿವ್ಯ ಪರಿಮಳದ ಕಂಪನ್ನು ಎಲ್ಲೆಡೆಗೂ ಹರಡುತ್ತಲಿದ್ದ, ಮಕರಂದಪೂರ್ಣವಾಗಿದ್ದು, ದುಂಬಿಗಳು ಮುತ್ತಿದ್ದ ಕಲ್ಪವೃಕ್ಷಲತೆಗಳ ಪುಷ್ಪಗಳನ್ನು ತಮ್ಮ ಬೊಗಸೆಗೈಗಳಲ್ಲಿ ಹಿಡಿದು ಶಿವನ ಪಾದಗಳಲ್ಲಿ ಸುರಿಯುತ್ತಿದ್ದರು. ೧೨. ಪ್ರಮಥಗಣಗಳೂ, ದೇವತಾ ಸಮೂಹವೂ ಬೇಡರ ಆಕಾರಗಳನ್ನು ತ್ಯಜಿಸಿ, ದಿವ್ಯವಸ್ತ್ರ ಭೂಷಣಗಳನ್ನು ಧರಿಸಿ ಕೊಂಡು, ದಿವ್ಯಮೂಲ್ಯಗಂಧಾನುಲೇಪನದಿಂದ ಕೂಡಿ ತಮ್ಮ ನಿಜಸ್ವರೂಪದಿಂದ ಬೆಳಗುತ್ತಾ ಶಿವನ ಸಮೀಪದಲ್ಲಿದ್ದರು. ೧೩. ದೇವತಾಸ್ತ್ರೀಯರು ಬೇಡಹೆಣ್ಣುಗಳ ಅಂದವನ್ನು ತ್ಯಜಿಸಿ,ಪಾರ್ವತಿಯನ್ನು ಬಳಸಿ ನಿಂತರು.ಆಕೆಯೂ ಇತರ ದೇವತಾಸ್ತ್ರೀಯ ರಂತೆ ಬೇಡಸ್ತ್ರೀ ಆಕಾರವನ್ನುಳಿದು, ಹಾರ, ಕಿರೀಟ, ಕುಂಡಲ, ಒಡ್ಯಾಣ, ಕಡಗ, ಬಾಹು ಪೂರಾದಿ ಆಭರಣಗಳಿಂದ ಕೂಡಿ, ವಿಶೇಷ ಕಾಂತಿಯುಕ್ತಳಾಗಿ ಶಿವನ ಎಡ ಪಾರ್ಶ್ವದಲ್ಲಿ ನಿಂತಳು. ವಚನ : ಆಗ ೧೪. ಆನಂದಾತಿರೇಕದಿಂದ ಅರ್ಜುನನ ಮೈ ಬೆವರಿಟ್ಟಿತು. ಕಣ್ಣುಗಳಿಂದ ಆನಂದಬಾಷ್ಪವು ಸುರಿಯಿತು, ಮೈ ಕಂಪಿಸಿತು ; ರೋಮಾಂಚವಾಯಿತು.

---

೧ ಗಂಧ (ಯ) ೨ ವರಾಂ (ಯ) ೩ ಉದಾತ್ತ (ಚ) ೪ ದೇಳ್ವ (ಯ)

* ಈ ಪದ್ಯವು 'ಯ' ಪ್ರತಿಯಲ್ಲಿಲ್ಲ ; ಬಿಟ್ಟುಹೋದಂತೆ ತೋರುತ್ತದೆ.

ಭ್ರಮದ ಪೊದಟ್ಕೆಯಿಂ ಮುದದ ಪೆರ್ಚುಗೆ ಸಂದಣಿಗೊಳ್ವಿನಂ ಪದಾ
ಬ್ಜಮನವಮದೊರ್ಪ್ಪೆ ಮೌಳಿ ಮಣಿದಂ ಮಹಿಯಂ ತನು ಸೋಂಕೆ ಪಾಂಡವಂ ೧೪

ವಚನ ಅಂತೆಱಗಿ ಸರುಜಂ ಸಂಜೀವನಮಂ ಸವಿದಂತೆ, ಬಡವಂ ಕಡವರಂಗಂಡಂತೆ, ಕಡಲೊಳಾಟ್ವಿಂ ತೆಪ್ಪಮನಪ್ಪಿದಂತೆ, ಜಾತ್ಯಂಧಂ ಕಣ್ಬಡೆದಂತೆ ನಿರತಿಶಯಸಂಮದಗಿಮನೊಳಕೊಂಡು ಕರಾರವಿಂದಂಗಳಂ ಪಣೆಯೊಳಮರ್ಚಿ ನಿಂದು

ಚಂಪಕ ಪದತಳದೊಳ್ ತೊಡಂಕಿ ಪರಿದಾಡಿ ಪೊದಟ್ದಿಸೆವಂಗದೇಶದೊಳ್
ಪದೆದುರದಲ್ಲಿ ಸಯ್ತುರಿದು ಮಂಜುಳಕಂಠಮನಪ್ಪಿ ವಕ್ತ್ರಪ
ದ್ಮದೊಳೆಡೆಗೊಂಡು ಸುತ್ತಿ ಸುೞಿದಾಡಿ ಬೞಲ್ದು ಸರಿತ್ಸುಧಾಂಶುಗಳ್
ಪುದಿದ ತದೀಯಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ ೧೫

ವಚನ ಅಂತು ಸಡಗರದಿನವನಭವನನಭೀಕ್ಷಿಸಿ

ಚಂಪಕ ಜಯ ಜಗದೀಶ ದೇವ ಜಯ ಚಿನ್ಮಯರೂಪ ಜಯಾದ್ರಿಜಾಕುಚ
ದ್ವಯಪರಿಚುಂದನಾಂಕ ಜಯ ನಿರ್ಜಿತಪಾಶ ಜಯಾಗಮಾಂತಸಂ

ಅವನು ತಕ್ಷಣ ಸಂಭ್ರಮ, ಆನಂದೋತ್ಸಾಹಗಳಿಂದ ಎದ್ದು ಬಂದು, ಶಿವನ ಪಾದಕಮಲ ಗಳಿಗೆ ತನ್ನ ತಲೆಯನ್ನಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು. ವಚನ : ಹಾಗೆ ನಮಸ್ಕರಿಸಿ, ರೋಗಿಯು ಪ್ರಾಣದಾಯಕವಾದ ಔಷಧವನ್ನು ಸೇವಿಸಿದವನಂತೆ, ದರಿದ್ರನು ಚಿನ್ನವನ್ನು ಕಂಡಂತೆ, ಸಮುದ್ರದಲ್ಲಿ ಮುಳುಗುತ್ತಿದ್ದವನು ದೋಣಿಯನ್ನು ಹಿಡಿದ ರೀತಿಯಲ್ಲಿ, ಹುಟ್ಟುಕುರುಡನು ದೃಷ್ಟಿಯನ್ನು ಪಡೆದ ಹಾಗೆ, ತನ್ನಂತರಂಗದಲ್ಲಿ ಪರಮ ಸಂತೋಷವನ್ನು ಹೊಂದಿದವನಾಗಿ, ಕೈಗಳನ್ನು ಜೋಡಿಸಿ ಹಣೆಯಲ್ಲಿಟ್ಟು ಕೊಂಡು ನಿಂತನು. ೧೫. ಅರ್ಜುನನ ದೃಷ್ಟಿಯು ಶಿವನ ಪಾದಗಳಲ್ಲಿ ಸಿಲುಕಿ ಹೊರಳಾಡಿತು, ಮೇಲೇರಿ ಶಿವನ ದಿವ್ಯವಾದ ದೇಹದಲ್ಲಿ ಹರಡಿತು, ವಕ್ಷಸ್ಥಳವನ್ನಡರಿತು, ಮನೋಹರವಾದ ಕೊರಳನ್ನಾಲಂಗಿಸಿತು, ಮುಖಕಮಲವನ್ನು ಸೇರಿ, ಅಲ್ಲಿಯೇ ಬಳಸಿ ಸುಳಿದಾಡಿತು. ಸುಳಿದು ಸುಳಿದು ಬಳಲಿತು. ಗಂಗೆ ಮತ್ತು ಚಂದ್ರನಿಂದ ಅಲಂಕೃತ ವಾಗಿದ್ದ ಅವನ ಮುಡಿಯಲ್ಲಿ ವಿಶ್ರಮಿಸಿ ನೆಲಸಿತು. (ಅರ್ಜುನನು ಶಿವನನ್ನು ಅಡಿಯಿಂದ ಮುಡಿಯವರೆಗೆ ನೋಡಿ ಆನಂದಿಸುತ್ತಿದ್ದನು). ವಚನ : ಹೀಗೆ ಅವನು ಶಿವನನ್ನು ಸಂಭ್ರಮೋತ್ಸಾಹಗಳಿಂದ ನೋಡಿ ೧೬. "ಜಗದೀಶ್ವರನೇ, ಪ್ರಭುವೇ, ಜ್ಞಾನಘನನೇ, ಪಾರ್ವತಿಯ ಕುಚಕುಂಕುಮ ವಿಲಿಪ್ತಾಂಗನೇ, ಮಾಯಮಲಗಳ ಪಾಶಗಳನ್ನು ಗೆದ್ದವನೇ,

---

೧ ಸಮ್ಮುದಕ (ಯ)

ಜಯನುತಪಾದಪದ್ಮ ಜಯ ಭೂಧರಧರ್ವ ಜಯಾಶ್ರಯಾಶಸಂ
ಶ್ರಯನಿಜಫಾಲನೇತ್ರ ಜಯ ನಿರ್ಜರಪೂಜ್ಯ ಜಯಾಂತಕಾಂತಕಾ ೧೬

ಉತ್ಪಲ ಭಕ್ತಕುಟುಂಬಿ ಭಕ್ತಜನವತ್ಸಲ ಭಕ್ತಭವಾದ್ರಿಶಂಬ ಸ
ದ್ಭಕ್ತಸಹಾಯ ಭಕ್ತಸುಖಸಿಂಧುಸುಧಾಕರ ಭಕ್ತಪಾಲನೋ
ದ್ಯುಕ್ತ ನಿರೀಹಭಕ್ತಪರಮೋಕ್ಷದ ಭಕ್ತಮನಸ್ಸರೋಜಸು
ಸಕ್ತಮರಾಳ ಭಕ್ತಪರಿಷದ್ವಿಪದರ್ಣವಕುಂಭಸಂಭವಾ ೧೭

ಮಹಾಸ್ರಗ್ಧರೆ ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿ ಮದಾಂಧಂ ಮಹಾಮೋಹಮೂರ್ಛಾ
ವಿಳಸಾಶಾಪಾಶಬದ್ಧಂ ಕುಟಿಲನಧಮನಾದೆನ್ನೊಳಾರಯ್ವುದೇಂ ನಿ
ರ್ಮಳಭಕ್ತಿಜ್ಞಾನಭಾಸ್ವದ್ಗುಣಗಣಮನುಮಾನಾಥ ಸರ್ವಾಪರಾಧಂ
ಗಳನೀಗಳ್ ತಳ್ವದೆಂತುಂ ಮಱೆ ಪೊರೆ ಪುರುಳಿಲ್ಲಿಲ್ಲಮೆನ್ನೊಳ್ ಪುರಾರೀ ೧೮

ಚಂಪಕ ಅಱೆದಱೆದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡು ಕಂ
ಡೆಱಗದ ಖೂಳನಾನೆ ಕುಱಿವಾನಿಸನಾನೆ ಕುಬುದ್ಧಿಯಾನೆ ಕ

ವೇದಾಂತಸ್ತುತ ಪಾದಕಮಲಗಳುಳ್ಳವನೇ, ಮೇರುಪರ್ವತವನ್ನು ಬಿಲ್ಲಾಗಿ ಹಿಡಿದವನೇ, ಅಗ್ನಿಗೆ ಆಧಾರವಾದ ಹಣೆಗಣ್ಣುಳ್ಳವನೇ, ದೇವತೆಗಳಿಂದ ಪೂಜಿತನಾದವನೇ, ಮೃತ್ಯುಂಜಯನೇ ಜಯವಾಗಲಿ, ಜಯವಾಗಲಿ, ೧೭. ಭಕ್ತಕುಟುಂಬಿಯೇ, ಭಕ್ತವತ್ಸಲನೇ, ಭಕ್ತಸಂಸಾರವೆಂಬ ಪರ್ವತಗಳಿಗೆ ವಜ್ರಾಯುಧದಂತಿರುವವನೇ, ಸದ್ಭಕ್ತರಿಗೆ ಉಪಕಾರಿಯೇ, ಭಕ್ತರ ಆನಂದಸಾಗರವನ್ನು ಉಕ್ಕೇರಿಸುವ ಚಂದ್ರನೇ, ಭಕ್ತರಕ್ಷಣೆಯೇ ಕರ್ತವ್ಯವೆಂದು ತಿಳಿದಿರುವವನೇ, ನಿಷ್ಕಾಮಿಗಳಾದ ಭಕ್ತರಿಗೆ ಕೈವಲ್ಯಮುಕ್ತಿಪ್ರದನೇ, ಭಕ್ತರ ಮನಸ್ಸೆಂಬ ತಾವರೆಯಲ್ಲಿ ಸೇರಿರುವ ಹಂಸದಂತಿರುವವನೇ, ಭಕ್ತಕೋಟಿಯ ಸಂಕಷ್ಟಗಳೆಂಬ ಸಮುದ್ರವನ್ನು ಆಪೋಶನವಾಗಿಸುವ ಅಗಸ್ತ್ಯನಂತಿರುವವನೇ ನಿನಗೆ ಜಯವಾಗಲಿ. ೧೮. ಚಂಚಲವಾದ ಮನಸ್ಸುಳ್ಳವನೂ, ಮೂಢನಡತೆಯುಳ್ಳವನೂ, ಸ್ಥಿರಬುದ್ಧಿಯಿಲ್ಲದವನೂ, ಗರ್ವದಿಂದ ಕಣ್ಕಾಣದವನೂ, ವಿಪರೀತ ಅಜ್ಞಾನದಿಂದ ಮೈಮರೆತು ವ್ಯಾಕುಲನಾದವನೂ, ಆಶಾಪಾಶಗಳಿಂದ ಬದ್ಧನಾದವನೂ, ದುರ್ಮಾರ್ಗಿಯೂ, ನೀಚನೂ ಆದ ನನ್ನಲ್ಲಿ ಪರಿಶುದ್ಧವಾದ ಭಕ್ತಿಯನ್ನೂ, ಜ್ಞಾನವನ್ನೂ, ಉತ್ತಮ ಗುಣಗಳನ್ನೂ ಕಾಣಲು ಸಾಧ್ಯವಿಲ್ಲ. ಪಾರ್ವತಿಪತಿಯೇ, ಈಗ ನನ್ನ ಸಕಲಾಪರಾಧಗಳನ್ನೂ ಕೂಡಲೇ ಹೇಗಾದರೂ ಸರಿ, ಮರೆತುಬಿಡು. ತ್ರಿಪುರಾಂತಕನೇ, ನನ್ನಲ್ಲಿ ಯಾವ ಯೋಗ್ಯತೆಯೂ ಇಲ್ಲ, ನನ್ನನ್ನು ರಕ್ಷಿಸು. ೧೯. ತಿಳಿದು ತಿಳಿದೂ, ಬುದ್ಧಿಗೆಟ್ಟು ಗರ್ವದಿಂದ ಕುರುಡನಾದೆನು. ನೋಡಿದರೂ ಸಹ ನಮಸ್ಕರಿಸದ ಅಯೋಗ್ಯನು ನಾನು. ನಾನು ಕುರಿಯಂತೆ ಮೂಢನು ; ದುರ್ಬುದ್ಧಿಯೂ ಚೆನ್ನಾಗಿ ತಿಳಿಯಲು ಸಾಧ್ಯ

೧ ಪದಾ (ಜ)

ಟ್ಟಜಿಕೆಯ ದುಷ್ಟನಾನೆ ಮಜಿ ದೇವ ಮದೀಯ ಶತಾಪರಾಧಮಂ
ಮೆಜಿ ಕರುಣಾಬ್ಧಿ ನಿನ್ನ ಸುಗುಣೋನ್ನತಿಯಂ ಭುವನೈಕವಲ್ಲಭಾ ೧೯

ಕರುಣಿಸು ಕಾಲಸಂಹರ ಕಲಾಪಕಲಾಧರ ಸಾರಸತ್ಕೃಪಾ
ಕರ ಶರಣಾಗತಾದರ ಸುರಾಹಿತಭೀಕರ ಧೀರವಾರಸಾ
ಗರ ವಿಲಸತ್ಸುಧಾಕರ ಮಹಾಗುಣಬಂಧುರ ಶೂಲಕೃತ್ತ[೧]ಸಿಂ
ಧುರ ಕನಕಾದ್ರಿಕಂದರ ವಿರಾಜಿತಮಂದಿರ ಕಾಲಕಂಧರಾ ೨೦

ಉತ್ಪಲ ದೇವ ಮಹೇಶ ದೇವರಿಪುನಾಶಕ ದೇವ ಗಣೇಶತಾತ ಮ
ದ್ದೇವ ಗಿರೀಸ ದೇವ ಜಿತಪಾಶ[೨]ಕ ದೇವ ಹು[೨]ತಾಶಲೋಚನಾ[೨]
ದೇವ ಸುಭಾವ ದೇವ [೩]ಸುಕಳೇವರ ದೇವ ಸು[೩]ಧರ್ಮಕೋಶ ಸ
ದ್ದೇವ ಮದೀಶ ದೇವ ಗರಳಾಶನ ದೇವ ನಗಾತ್ಮಜೇಶ್ವರಾ ೨೧

ಚಂಪಕ ನಿರುಪಮಮೂರ್ತಿ ನಿರ್ಮಳಿನಮೂರ್ತಿ ನಿರರ್ಗಳಮೂರ್ತಿ ಸತ್ಕೃಪಾ
ಕರವರಮೂರ್ತಿ ಭದ್ರಮಯಮೂರ್ತಿ ಭವಾಮಯದೂರಮೂರ್ತಿ ಭಾ
ಸ್ಕರರುಚಿಮೂರ್ತಿ ಭಕ್ತಹಿತಮೂರ್ತಿ ಚರಾಚರಮೂರ್ತಿ ಚಂದ್ರಶೇ
ಖರವರಮೂರ್ತಿ ಚಾರುತರಮೂರ್ತಿ ಸುಮೂರ್ತಿಯಮೂರ್ತಿ ಶಂಕರಾ ೨೨

ವಾದರೂ ಅರಿಯದ ದುಷ್ಟನು ನಾನು. ಭಗವಂತನೇ, ನನ್ನ ನೂರು ತಪ್ಪುಗಳನ್ನೂ ಮರೆತುಬಿಡು. ಕರುಣಾಸಾಗರನೇ, ಜಗದೇಕನಾಥನೇ ನಿನ್ನ ದಯಾ ವಾತ್ಸಲ್ಯಾದಿ ಕಲ್ಯಾಣಗುಣಗಳನ್ನು ನನ್ನಲ್ಲಿ ತೋರಿಸು. ೨೦. ಮೃತ್ಯುಂಜಯನೇ, ಚಂದ್ರಚೂಡನೇ, ಪರಮ ದಯಾನಿಧಿಯೇ, ಶರಣಾಗತರನ್ನು ರಕ್ಷಿಸುವವನೇ, ದೇವವೈರಿಗಳಿಗೆ ಭಯಂಕರನೇ, ಜ್ಞಾನಿಗಳೆಂಬ ಸಮುದ್ರಕ್ಕೆ ಚಂದ್ರನಂತೆ ಶೋಭಿಸುವವನೇ, ಕಲ್ಯಾಣ ಗುಣಶೋಭಿತನೇ, ಶೂಲಾಯುಧದಿಂದ ಗಜಾಸುರನನ್ನು ತಿವಿದುಕೊಂದವನೇ, ಮೇರು ಪರ್ವತದ ಗುಹೆಗಳೇ ನಿನ್ನ ದಿವ್ಯವಾದ ವಾಸಸ್ಥಾನವಾಗುಳ್ಳವನೇ, ನೀಲಕಂಠನೇ ಕೃಪೆ ಮಾಡು. ೨೧. ಸ್ವಯಂಪ್ರಕಾಶನೇ, ಮಹಾದೇವನೇ, ದೈತ್ಯಾಂಕನೇ, ಗಣಪತಿಯ ಪಿತನೇ, ನನ್ನೊಡೆಯನೇ, ಕೈಲಾಸಪತಿಯೇ, ಜನನ ಮರಣರೂಪವಾದ ಬಂಧನದಿಂದ ಮುಕ್ತನೇ, ನಿಟಿಲಾಕ್ಷನೇ, ಭಕ್ತರಲ್ಲಿ ಸದ್ಭಾವನೆಯುಳ್ಳವನೇ, ಮಂಗಳಮೂರ್ತಿಯೇ, ಶುದ್ಧಧರ್ಮದಿಂದ ಪರಿವೃತನೇ, ಸಜ್ಜನರಕ್ಷಕನೇ, ನನ್ನ ಪ್ರಭುವೇ, ನಂಜುಂಡನೇ, ಗೌರೀಕಾಂತನೇ ಕರುಣಿಸು. ೨೨. ಹೋಲಿಸಲು ಬಾರದ ಸ್ವರೂಪವುಳ್ಳವನೇ, ಶುದ್ಧ ಸ್ವರೂಪನೇ, ದಿವ್ಯಲೀಲಾಸ್ವರೂಪನೇ, ದಯಾನಿಧಿಯೇ, ಶ್ರೇಷ್ಠನೇ, ಮಂಗಳ ಸ್ವರೂಪನೇ, ಆದ್ಯಂತರಹಿತನೇ, ಜ್ಯೋತಿಸ್ವರೂಪನೇ, ಭಕ್ತರ ಅಪೇಕ್ಷೆಗಳನ್ನು

---

೧ ಕೃತ್ತಿ (ಕೈಬರೆಹದ ಪ್ರತಿಗಳಲ್ಲಿ) ೨–೨ ಹುತಾಶಲೋಚನಾಕ್ಷಯಾ (ಚ) ೩–೩ ವರಪಾಂಡು ಕಳೇವರ (ಚ)

ಚಂಪಕ ಪರಮ ಪರಾದಿರೂಪ ಪರಮಾತ್ಮ ಪರಾನ್ವಿತ ಪಾಶ[1]ದೂರ ಚಿತ್
ಪರತರತತ್ತ್ವ ಪಾವನ[2]ಗುಣಾಶ್ರಯ ಪಾಲಿತವಿಶ್ವ ಭಕ್ತತತ್
ಪರಪರಿಪೂರ್ಣ ಪಾವಕವಿಲೋಚನ ಪನ್ನಗಹಾರ ಸತ್ಪರಾತ್
ಪರ ಪರಮೇಶ ಪಾಲಿಸು ಪರಾಪರಮೋಕ್ಷದ ಪಾರ್ವತೀಶ್ವರಾ ೨೩

ನಿರಘ ನಿರೀಹ ನಿರ್ಭಯ ನಿರಾಶ್ರಯ ನಿಶ್ಚಲ ನಿತ್ಯ ನಿರ್ಮಲಾ[3]
ಚರಣ ನಿರಂತ ನಿರ್ಭವ ನಿರಾಮಯ ನಿರ್ಗುಣ ನಿಸ್ತುಳಪ್ರಭಾ
ವರಣ ನಿರಂಗ ನಿರ್ಮದ[4] ನಿರಾಕುಲ ನಿಷ್ಕಲ ನೀಲಕಂಠ ನಿ
ರ್ಜರನತ ನಿಷ್ಕಳಂಕಳ ಜಯಶಂಕರ ನಿರ್ಜಡ[5] ಶಾಂಭವೀಧವಾ ೨೪

ಉತ್ಪಲ ವ್ಯೋಮಕಚಾಭಿರಾಮ ತತಸಾಮ ಸುಧಾಮ ಸುರಾಮ ಸಜ್ಜನ
ಪ್ರೇಮ ನಿರಾಮಯಾಂಗ ಪರಭೀಮ ಸುನಾಮ ನಿಕಾಮ ನಿರ್ಜರ
ಸ್ತೋಮಲಲಾಮ ಹೇಮನಗಧಾಮ ಜಗತ್ತ್ರಯಸಾರ್ವಭೌಮ ಸು
ತ್ರಾಮಮುಖಾಮರಾರ್ಚ್ಯ ಜಿತಕಾಮ ಸದಾ[6]ಮಳ ಸೋಮಭೂಪಣಾ ೨೫

ಈಡೇರಿಸುವವನೇ, ಚರಾಚರಮೂರ್ತಿಯೇ, ಇಂದುಮೌಳಿಯೇ, ಸುಂದರಮೂರ್ತಿಯೇ, ಆಕಾರವುಳ್ಳವನೇ, ಆಕಾರರಹಿತನೇ, ಶುಭಕರನೇ ಕರುಣಿಸು. ೨೩. ಮಹೋನ್ನತನೇ, ಸಕಲಕ್ಕೂ ಮೂಲಸ್ವರೂಪನೇ, ಪರಮೇಶ್ವರನೇ, ದಯಾಶಕ್ತಿಯುಕ್ತನೇ, ಭವಪಾಶವಿಲ್ಲದವನೇ, ಚಿದಾಭಾಸರೂಪವಾದ ಜೀವಕೋಟಿಗಳಿಗಿಂತ ಭಿನ್ನನೂ, ನಿಯಾಮಕನೂ ಆದವನೇ, ಸತ್ಯಸ್ವರೂಪನೇ, ಕಲ್ಯಾಣಗುಣಪರಿಪೂರ್ಣನೇ, ಜಗದ್ರಕ್ಷಕನೇ, ಭಕ್ತಾನುಕಂಪಿಯೇ, ವಿಶ್ವದ ಒಳಗೂ ಹೊರಗೂ ವ್ಯಾಪಿಸಿರುವವನೇ, ಅಗ್ನಿನಯನನೇ, ಉರಗಮಾಲೆಯನ್ನು ಧರಿಸಿದವನೇ, ಸದ್ವಸ್ತುಗಳಲ್ಲಿ ಉತ್ತಮೋತ್ತಮನೇ, ಪರಮೇಶ್ವರನೇ, ಅಣು-ಮಹತ್ಸ್ವರೂಪನೇ, ಮುಕ್ತಿದಾಯಕನೇ, ಉಮಾಕಾಂತನೇ ರಕ್ಷಿಸು. ೨೪. ಪಾಪದೂರನೇ, ನಿಷ್ಕಾಮನೇ, ಅಭೀತನೇ, ಅನ್ಯ ಆಧಾರವಿಲ್ಲದವನೇ, ಅಚಲನೇ, ನಿತ್ಯನೇ, ಶುದ್ಧಾನುಷ್ಠಾನನಿರತನೇ, ನಾಶರಹಿತನೇ, ಅನಾದಿಯೇ,ರೋಗದೂರನೇ, ತ್ರಿಗುಣಗಳನ್ನು ಮೀರಿದವನೇ, ಉಪಮಾನರಹಿತನೇ, ಕಾಂತಿಯುಕ್ತನೇ, ಪ್ರಾಕೃತ ದೇಹವಿಲ್ಲದವನೇ, ನಿಗರ್ವಿಯೇ, ಶಾಂತನೇ, ಕಳಾತೀತನೇ,ಕಪ್ಪುಗೊರಳನೇ,ದೇವವಂದಿತನೇ, ಕಳಂಕರಹಿತನೇ, ಅಜ್ಞಾನರಹಿತನೇ, ಸುಖಸ್ವರೂಪನೇ, ಗಿರಿಜಾರಮಣನೇ ಕಾಪಾಡು. ೨೫. ವ್ಯೋಮಕೇಶನೇ, ಮನೋಹರನೇ,ಸಾಮವೇದವನ್ನು ವಿಸ್ತರಿಸಿದವನೇ, ದಿವ್ಯಜ್ಯೋತಿಯೇ, ಲೀಲಾವಿನೋದಿಯೇ, ಸಜ್ಜನರಲ್ಲಿ ಪ್ರೇಮವುಳ್ಳವನೇ, ಕುಂದಿಲ್ಲದವನೇ, ರಿಪುಭಯಂಕರನೇ, ದಿವ್ಯನಾಮನೇ, ನಿಷ್ಕಾಮನೇ, ದೇವೋತ್ತಮನೇ, ಮೇರುಮಂದಿರನೇ, ತ್ರಿಲೋಕಸಾರ್ವಭೌಮನೇ, ಇಂದ್ರಾದಿದೇವಗಣಾರಾಧಿತನೇ, ಮದನಾಂತಕನೇ, ನಿತ್ಯಶುದ್ಧನೇ, ಚಂದ್ರಾ

---

೧ ನಾಶ (ಯ) ೨ ಪಾಲನ (ಕ, ಜ) ೩ ನಿರ್ಮಲ (ಚ); ನಿಶ್ಚಲ (ಯ) ೪ ಳಾಂಕ (ಗ, ತ)
೫ ನಿರ್ಜರ (ಯ) ೬ ಸುಧಾ (ಗ, ತ)

ತುಂಗತರಂಗಗಾಂಗಜಲಸಂಗ ಕುರಂಗಧರೋತ್ತಮಾಂಗ ನಿ
ರ್ಭಂಗ ನಿರಂಗ ರುಗ್ಣಿತಪತಂಗ ಸುಧಾಂಗ ಸುಮಂಗಳಾಂಗ ಸ
ಲ್ಲಿಂಗನಿಜಾಂಗ ಪುಂಗವತುರಂಗ[೧] ಭುಜಂಗವಿಭೂಷ ಮರ್ದಿತಾ
ನಂಗ ವಿಹಂಗರಾಜರಥದತ್ತರಥಾಂಗ ಚಿದಂಗನಾಪ್ರಿಯಾ ೨೬

ಚಂಪಕ ಭೃತನಗಧರ್ಮ ಧರ್ಮಪರಿಪಾಲ ಕಪಾಲಕರೇಶ ರೇಶಸಂ
ಗತ ಗತಕಾಮ ಕಾಮದ ಕಲಾಪಕಲಾಪ ಸಮಸ್ತಮಸ್ತಕ
ಸ್ಥಿತಪದಸಾರಸಾರಸ[೨] ಕುಮಾರಕುಮಾರ ಸದಾನ ದಾನವಾ
ಹಿತಹಿತ ದೇವದೇವ ಜಯ ವಾಗ್ವರ ವಾಗ್ವರವಂದ್ಯ ಶಂಕರಾ ೨೭

ಶಿವ ಭವ[೩] ಭೀಮ ಕಾಮಮದಮರ್ದಿ ಕಪರ್ದಿ ನಿತಾಂತಶಾಂತ ದಿ
ವ್ಯವರದ ಭವ್ಯಸೇವ್ಯ ಪದಕಿಂಕರಶಂಕರ ಶಂಭು ಶಾಂಭವೀ
ಧವ ಭುವನೇಶ ಪಾಶಹರ ಚಿದ್ಗುಣ ಸದ್ಗುಣನಾಥಯೂಥಬಾಂ
ಧವ ಧವಳಾಂಗಸಂಗತ ಕೃಪಾಕರ ಭೀಕರ ಕಾಲಸಂಹರಾ ೨೮

ಭರಣನೇ ಜಯ, ಜಯ. ೨೬. ಗಂಗಾಧರನೇ, ಚಂದ್ರಮೌಳಿಯೇ, ಅಜೇಯನೇ; ನಿರಾಕಾರನೇ, ಸೂರ್ಯಪ್ರಕಾಶವನ್ನೂ ಸಹ ಮೀರಿದ ತೇಜಸ್ಸುಳ್ಳವನೇ, ಅಮೃತ ಸ್ವರೂಪನೇ, ನಿರ್ಮಲಾಂಗನೇ, ಸುಲಕ್ಷಣನೇ, ದಿವ್ಯಲಿಂಗನೇ, ವೃಷಭವಾಹನನೇ, ಸರ್ಪ ಭೂಷಣನೇ, ಮದನಧ್ವಂಸಿಯೇ, ಗರುಡವಾಹನನಾದ ಹರಿಗೆ ಚಕ್ರವನ್ನಿತ್ತವನೇ, ಜ್ಞಾನಕಾಂತೆಯ ವಲ್ಲಭನೇ ಜಯ, ಜಯ. ೨೭. ಮೇರುಕೋದಂಡನೇ,[1] (?) ಧರ್ಮ ರಕ್ಷಕನೇ, ಕಪಾಲವನ್ನು ಹಿಡಿದಿರುವವನೇ, ಕುಬೇರ[2]ಮಿತ್ರನೇ, ಮನ್ಮಥನ ಅಭೀಪ್ಸೆಯನ್ನು ಸಲಿಸಿದವನೇ, ಚಂದ್ರಭೂಷಣನೇ, ನತಸಮಸ್ತ ಸುರಾಸುರಮೌಳಿಚರಣನೇ, ಉತ್ತಮ ಕಮಲಗಳುಳ್ಳವನೇ, ದುಷ್ಟನಿಗ್ರಹವನ್ನು ಮಾಡಿದ ಷಣ್ಮುಖಸ್ವಾಮಿಯನ್ನು ಮಗನಾಗಿ ಪಡೆದವನೇ, ಭಕ್ತಾನುಗ್ರಹಿಯೇ, ರಾಕ್ಷಸಾಂತಕನೇ, ದೇವದೇವನೇ, ಸರ್ವ ವಿದ್ಯಾಧೀಶ್ವರನೇ, ಭಾರತೀರಮಣನಿಂದ ವಂದಿತನಾದವನೇ, ಶಂಕರನೇ ನಿನಗೆ ಜಯ ವಾಗಲಿ. ೨೮. ಮಂಗಳಕರನೇ, ಸದ್ರೂಪನೇ, ಪಾಪರಿಪುಭಯಂಕರನೇ, ಮನ್ಮಥನ ಗರ್ವವನ್ನು ಮುರಿದವನೇ, ಜಟಾಜೂಟಯುಕ್ತನೇ, ಪರಮಶಾಂತನೇ, ಉತ್ಕೃಷ್ಟವಾದ ವರಗಳನ್ನು ಅನುಗ್ರಹಿಸುವವನೇ, ವಿಚಕ್ಷಣರಿಂದ ಆರಾಧಿತವಾದ ಚರಣಗಳುಳ್ಳವನೇ, ಭಕ್ತರಿಗೆ ಶುಭಪ್ರದನೇ, ಸುಖಸ್ವರೂಪನೇ, ಮಾಯೆಗೆ ಒಡೆಯನೇ, ಜಗದೀಶ್ವರನೇ, ಮಲ, ಮಾಯಾ, ಕರ್ಮಧ್ವಂಸಿಯೇ, ಜ್ಞಾನಸ್ವರೂಪನೇ, ಸದ್ಗುಣಗಳಿಗೆ ಪ್ರಭುವೇ,

---

೧ ಕುರಂಗ (ಚ) ೨ ಸು (ಗ, ಚ, ತ) ೩ ಭವ (ಚ)

[1] ಧರ್ಮ ಶಬ್ದಕ್ಕೆ ಧನುಸ್ಸು ಎಂಬ ಅರ್ಥವಿದೆಯೆಂದು ಶ್ರೀ ರಾಮಾನುಜ. ಚಂಪುವಿನಲ್ಲಿ 'ಶೈವಂ ಧರ್ಮಂ' ಎಂಬ ಶ್ಲೇಷೋಕ್ತಿಯಿಂದ ಗೊತ್ತಾಗುತ್ತದೆ.

[2] ರೇಶ = ಕುಬೇರ (ರಂ)

ಚಂಪಕ ಪುರಹರಪೂರ್ಣ ಪುಷ್ಕರಸರಿದ್ಧರ ವಾರ್ಧರವಾಹವಂದ್ಯ ವಾ
ಸರಕರಕೋಟಿತೇಜ ವಲಯೀಕೃತಪನ್ನಗರಾಜ ರಾಜಭಾ
ಸ್ಕರಶಿಖಿನೇತ್ರ ವಿದ್ರುಮಲತಾಭಜಟಾಧರ ಚಾರುಚಂದ್ರಶೇ
ಖರ ಶರಣಾಗು ಶಾಶ್ವತ ಮಹೀಧರಮಂದಿರ ಮಂಗಳಾಕರಾ ೨೯

ಸ್ರಗ್ಧರೆ ಸರ್ವಾಂತರ್ಯಾಮಿ ಸರ್ವಾತ್ಮಕನಧಿಗತ ಸರ್ವಾರ್ಥನಾದ್ಯಂತಶೂನ್ಯಂ
ಸರ್ವಜ್ಞಂ ಸರ್ವತತ್ತ್ವಾಧಿಕನನುಪಮಿತಾಖಂಡಿತೈಶ್ವರ್ಯಪೂರ್ಣಂ
ಸರ್ವಾಧಾರಂ ಸ್ವತಂತ್ರಂ ಸಗುಣನಗುಣನಾತ್ಮೇಶ್ವರಂ ನಿತ್ಯತೃಪ್ತಂ
ಸರ್ವೇಶಂ ದೇವ ನೀನೊರ್ವನೆ ವಿಮಲಪರಂಜ್ಯೋತಿ ಸತ್ಯಂ ಕಪರ್ದೀ ೩೦

ಸದ್ಯೋಜಾತಾದಿ ಪಂಚಾನನದೆ ಪಡೆಗಿದು ಮಹ್ಯಾದಿಭೂತಂಗಳಂ ತ
ಳ್ತುದ್ಯೋಗಂಬೆತ್ತು ಪಂಚೀಕರಿಸಿ ಬೆರಸುತಯ್ದಯ್ದು ಭೂತಂಗಳಿಂದಂ
ಪ್ರದ್ಯೋತಾತ್ಮಾಗಮಂ ಮುನ್ನೆರಪಿ ನೆಗಟ್ದು ತದ್ಯೋಗಮಂ ಚೇತನಾಂತ
ಶ್ಚಿದ್ವ್ಯಕ್ತಂ ಗುಪ್ತಿಯಿಂ ಪ್ರೇರಕನೆನಿಸಿದಪಯ್ ಸೂಕ್ಷ್ಮರೂಪಿಂ ಮಹೇಶಾ ೩೧

ಪ್ರಮಥಗಣಗಳಿಗೆ ಒಂಧುವೇ, ಪವಿತ್ರಗಾತ್ರನೇ, ಕರುಣಾಳುವೇ, ಘೋರ ಮೃತ್ಯುವನ್ನು ನಾಶಮಾಡಿದವನೇ ನಿನಗೆ ಜಯವಾಗಲಿ. ೨೯. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ತ್ರಿಪುರಗಳನ್ನು ಪರಿಹರಿಸುವವನೇ, ಪೂರ್ಣನೇ, ದೇವಗಂಗಾಧರನೇ, ಮೇಘವಾಹನನಾದ ಇಂದ್ರನಿಂದ ನಮಸ್ಕೃತನಾದವನೇ, ಸೂರ್ಯಕೋಟಿಪ್ರಕಾಶನೇ, ನಾಗೇಂದ್ರನನ್ನು ಕಡಗವನ್ನಾಗಿ ಧರಿಸಿದವನೇ, ಚಂದ್ರ, ಸೂರ್ಯಾಗ್ನಿನೇತ್ರನೇ, ಹವಳಗಳ ಬಳ್ಳಿಯಂತೆ ಬೆಳಗುವ ಜಟೆಯುಳ್ಳವನೇ, ಚಂದ್ರಶೇಖರನೇ, ನಿತ್ಯನೇ, ಪರ್ವತದಲ್ಲಿ ವಾಸಿಸುವವನೇ, ಶುಭಾಕರನೇ ನನಗೆ ನೀನೇ ಗತಿ. ೩೦. ಎಲ್ಲರ ಒಳಗಿದ್ದು ಪ್ರೇರಣೆ ಮಾಡುವವನೇ, ಸಕಲ ಜೀವಿಗಳ ಆತ್ಮಸ್ವರೂಪನೇ, ಪೂರ್ಣಕಾಮನೇ, ಆದ್ಯಂತರಹಿತನೇ, ಸರ್ವಜ್ಞನೇ, ಮೂವತ್ತಾರು ತತ್ತ್ವಗಳನ್ನು ಮೀರಿದವನೇ, ಪರಿಪೂರ್ಣವೈಭವಯುಕ್ತನೇ, ಸಕಲ ಸೃಷ್ಟಿಗೂ ಆಧಾರವಾಗಿರುವವನೇ, ಸ್ವತಂತ್ರನೇ, (ಸಕಲ ತಂತ್ರಗಳನ್ನೂ ತನ್ನ ಅಧೀನ ದಲ್ಲಿ ಹೊಂದಿರುವವನೇ,) ಕಲ್ಯಾಣಗುಣಸಹಿತನೇ, ಹೇಯಗುಣರಹಿತನೇ, ಜೀವರಿ ಗೊಡೆಯನೇ, ನಿತ್ಯತೃಪ್ತನೇ, ಸರ್ವೇಶ್ವರನೇ, ಶಿವನೇ, ಸತ್ಯಸ್ವರೂಪನೇ, ಶುದ್ಧಜ್ಞಾನ ಪ್ರಕಾಶನು ನೀನೊಬ್ಬನೇ ಆಗಿರುವೆ. ೩೧. ಸದ್ಯೋಜಾತಾದಿ ಐದು ಮುಖಗಳಿಂದ ಮಹತ್ತೇ ಮೊದಲಾದ ಪಂಚಭೂತಂಗಳನ್ನು ಸೃಷ್ಟಿಸಿ, ಬೆಳಸಿ, ಸೇರಿಸಿ, ಒಂದೊಂದು ಭೂತಗಳನ್ನೂ ಐದು ಭಾಗಮಾಡಿ, ಒಂದೊಂದು ಅಂಶಗಳನ್ನೂ ಕೊಡಿಸುತ್ತ, ಇಪ್ಪ

---

೧ ಪದೆ (ಯ)

* ಈಶ್ವರನ ಈಶಾನಮುಖದಿಂದ ಆಕಾಶ, ವಾಮದೇವ ಮುಖದಿಂದ ವಾಯು, ಅಘೋರ ಮುಖದಿಂದ ಅಗ್ನಿ, ತತ್ಪುರುಷಮುಖದಿಂದ ಜಲ ಮತ್ತು ಸದ್ಯೋಜಾತಮುಖದಿಂದ ಪೃಥವಿಭೂತ ಗಳು ಸೃಷ್ಟಿಯಾದುವು.

ಮತ್ತೇಭ ಭವವಾರಾಶಿವಹಿತ್ರಮಲ್ತೆ ಭವದೀಯಂ ದಿವ್ಯನಾಮಂ ಕೃಪಾ
ರ್ಣವ ಮಾಯಾಮಯಮರ್ದನೌಷಧಮೆ ದಲ್ ಭವ್ಯರ್ಗೆ ನಿನ್ನೀ ಗುಣ
ಸ್ತವಮೆಂತುಂ ಭವದಂಘ್ರಿಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋ
ತ್ಸವಮಂ ಸಾರ್ಚುವ ದೂತಿ ನಿಕ್ಕುವಗಮಿಪ್ಪಕ್ಕುಂ ಧಾತ್ರಿಯೊಳ್ ಶಂಕರಾ ೩೨

ಮಹಾಸ್ರಗ್ಧರೆ ಶ್ರುತಿಭಾಮಾಪಾಮಸೀಮಂತಮಣಿ ಮುನಿಮನೋಗೇಹಮಧ್ಯಪ್ರಭಾಸಂ
ಗತದೀಪಂ ಮುಕ್ತಿಕಾಂತಾಕರತಳಮುಕುರಂ ಕಾಲಘೋರಾಹಿಗಾರು
ತ್ಮತರತ್ನಂ ಭಕ್ತಚೇತೋವಿಮಳತರ೨ ಸರಃಕಂಜಮಜ್ಞಾನಸಾಂದ್ರಾಂ
ಧತಮಃಪ್ರಧ್ವಂಸಚಂಡದ್ಯುತಿ ಗಡ ಭವದೀಯಾಂಘ್ರಿಪದ್ಮಂ ತ್ರಿಣೇತ್ರಾ೩ ೩೩

ಮತ್ತೇಭ ಕ್ಷಿತಿವಾರ್ಯಗ್ನಿಸಮೀರಪುಷ್ಕರರವೀಂದ್ವಾತ್ಮಕರ್ಗಳೆಂದೆಂಬ ವಿ
ಶ್ರುತಮೂರ್ತ್ಯಷ್ಟಕವಾಂತು ವಿಶ್ವಮಯತಾಸಂಪತ್ತಿಯಂ ತಾಳ್ದು ಭೂ
ರಿತಮಸ್ಸತ್ತ್ವರಜೋಗುಣಂಬಿಡಿದು ತತ್ತತ್ಕಾರ್ಯಮಂ ಮಾಡುತುಂ
ಸತತಂ ನಿರ್ಗುಣನಿರ್ವಿಕಾರನೆನಿಪಯ್ ಶ್ರೀಶೈಲಜಾವಲ್ಲಭಾ ೩೪

ತ್ತೈದು ತತ್ತ್ವಂಗಳಿಂದ ಬೆಳಗುವ ಜೀವಿಗಳನ್ನು ಸೃಷ್ಟಿಸಿ, ಅವರಿಗೆ ಸುಖದುಃಖಭೋಗಗಳನ್ನಿತ್ತು, ಅವರ ಬುದ್ಧಿಯಲ್ಲಿ ಜ್ಞಾನಶಕ್ತಿಯಿಂದ ಅಡಗಿದ್ದು, ಎಲೈ ಶಿವನೇ. ಸೂಕ್ಷ್ಮರೂಪದಿಂದ ಪ್ರೇರಕನಾಗಿ ಅಂತರ್ಯಾಮಿ ಎನ್ನಿಸಿಕೊಳ್ಳುವವನು ನೀನೇ ಆಗಿರುವೆ, ೩೨. ನಿನ್ನ ದಿವ್ಯನಾಮಸ್ಮರಣೆಯೇ ಸಂಸಾರಸಾಗರದಲ್ಲಿ ಮುಳುಗುತ್ತಿರುವವರಿಗೆ ನಾವೆಯಂತಿರುವುದು. ಕರುಣಾಸಾಗರನೇ, ನಿನ್ನ ಗುಣಗಳನ್ನು ಸ್ತುತಿಸಿ, ಜ್ಞಾನಿಗಳು ಮಾಯಾಜನಿತವಾದ ಅಜ್ಞಾನ ವಿಕಾರಗಳನ್ನು ನೀಗಿಕೊಳ್ಳುವರು. ಎಷ್ಟಾದರೂ ನಿನ್ನ ಪಾದಗಳನ್ನು ಧ್ಯಾನಿಸುವುದೇ ಮೋಕ್ಷಲಕ್ಷ್ಮೀವಿಲಾಸಗಳನ್ನು ದೊರಕಿಸುವ ದೂತಿಯಂತೆಂಬುದನ್ನು ನಿಶ್ಚಯವಾಗಿಯೂ, ಜಗತ್ತಿನಲ್ಲೆಲ್ಲರೂ ತಿಳಿದಿರುವರು. ೩೩. ಎಲೈ ತ್ರಿನೇತ್ರನೇ, ನಿನ್ನ ಪಾದಕಮಲಗಳು ವೇದಕಾಂತೆಯ ಚೆಲುವಾದ ಬೈತಲೆಗೆ ಸೀಮಂತರತ್ನದಂತಿರುವುದು. ಮುನಿಗಳ ಮನಸ್ಸೆಂಬ ಮಂದಿರದ ಮಧ್ಯದಲ್ಲಿಟ್ಟಿರುವ ಬೆಳಗುವ ದೀಪದಂತಿರುವುದು. ಮುಕ್ತಿರಮಣಿಯ ಕೈಯಲ್ಲಿರುವ ಕನ್ನಡಿಯಂತೆ ಇರುವುವು. ಮೃತ್ಯುವೆಂಬ ಭಯಂಕರ ಹಾವಿಗೆ ಗರುಡಮಣಿಯಂತಿರುವುದು. ಭಕ್ತರ ಮನಸ್ಸರೋವರದಲ್ಲಿ ಕಂಗೊಳಿಸುವ ಕಮಲದಂತಿರುವುದು. ನಿನ್ನ ಪಾದಕಮಲಗಳೇ ಅಜ್ಞಾನವೆಂಬ ಗಾಢಾಂಧಕಾರವನ್ನು ತೊಲಗಿಸುವ ಪ್ರಚಂಡ ಸೂರ್ಯನಂತಿರುವುದು. ೩೪. ಭೂಮಿ, ಜಲ, ಅಗ್ನಿ, ಗಾಳಿ, ಆಕಾಶ ಮತ್ತು ಸೂರ್ಯ, ಚಂದ್ರ, ಜೀವಾತ್ಮರೆಂಬ ನಿನ್ನ ಪ್ರಸಿದ್ಧವಾದ ಅಷ್ಟಮೂರ್ತಿಸ್ವರೂಪದಿಂದ ಪ್ರಕಟವಾದ ಈ ಪ್ರಪಂಚ ವಿಕಾರ ಸಂಪತ್ತನ್ನು ಹೊಂದಿ, ಪ್ರಬಲವಾದ ಸತ್ತ್ವ, ರಜಸ್, ತಾಮಸಗುಣಗಳನ್ನು ಅವಲಂಬಿಸಿ, ಅವು ತಮ್ಮ ಕಾರ್ಯಗಳಾದ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಮಾಡುತ್ತಲಿರುವುವು. ಎಲೈ ಗಿರಿಜಾ

---

೧ ಲಕ್ಷಣ (ಕ) ೨ ವಿಮತರವಿ (ಚ) ೩ ತ್ರಿಣೇತ್ರಂ (ಕ,ಚ ಜ)

ಮಹಾಸ್ರಗ್ಧರೆ ಸಕಲಾಧಿಷ್ಠಾತೃ ನೀನೇ ಪ್ರಕೃತಿಮಹದಹಂಕಾರಮುಂ ನೀನೆ ನಿತ್ಯಂ೧
ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾ
ಜ್ಞಕನಾದಂ ನೀನೆ ದೇಹೇಂದ್ರಿಯಮಸುಕರಣಂ ಭೂತಮುಂ ನೀನೆ ತತ್ಸಾ
ಕ್ಷಿಕಸಾಕ್ಷಾದ್ಬ್ರಹ್ಮಮುಂ ಸರ್ವಮುಮೆಲೆ ಪೆಱರಾರ್೨ ನೀನೆ ವಿಶ್ವಾಧಿನಾಥಾ ೩೫

ವಚನ ಎಂದು ಪರಮೋತ್ಸವದಿಂ ಸನ್ನುತಿಗೆಯ್ದು ಮತ್ತಮಿರದೆ

ಮತ್ತೇಭ ಅತಿಕೋಪಾತುರನಾಗಿ ಮಾಣ್ದು ತಪಮಂ ನೀಗಾಡಿ ಮುಂಬಿಟ್ಟ ಸ
ಕ್ಷತಕಾಯೋಗ್ರವರಾಹಮಂ ಸದೆದದಂ ಕೊಳ್ವಾಸೆಯಿಂದಜ್ಞತಾ
ಸ್ಥಿತಿವೆತ್ತೆಚ್ಚು ಶರಂಗಳಿಂ ಪೊಣರ್ದೆನೆನ್ನಿಂ ದ್ರೋಹಿಯಾವಂ ಜಗತ್
ಪತಿ ನಿನ್ನಿಂ ಪೆಱನಾವನೀ ಭುವನದೊಳ್ ದೇವಂ ಕ್ಷಮಾಸಂಯುತಂ ೩೬

ವಚನ ಎಂದು ದೈನ್ಯಂದೋಱಿ ೩ಭಕ್ತಿಭರದಿಂ೩ ಮಗುಳ್ದುಂ ದಂಡಪ್ರಣಾಮಂಗೆಯ್ದು ಪದಯುಗಮಂ ತೆಗೆದು ಬಿಗಿದಪ್ಪಿ ನೆತ್ತಿಯೊಳ್ ಪೊತ್ತು

ವಲ್ಲಭನೇ, ನೀನು ಮಾತ್ರ ಯಾವಾಗಲೂ ನಿರ್ಗುಣನಾಗಿಯೂ,ಯಾವ ಪರಿಣಾಮಗಳನ್ನು ಹೊಂದದೆಯೂ, ಇರುವೆ. ೩೫. ಎಲೈ ಜಗದೀಶ್ವರನೇ, ಸಕಲ ಪ್ರಪಂಚಗಳಿಗೂ ನೀನೆ ಆಶ್ರಯನು. ಪಕೃತಿ, ಮಹತ್, ಅಹಂಕಾರಗಳೆಂಬುವೂ ನೀನೆ. ನಿತ್ಯನೂ, ಸಕಲ ಪ್ರಾಣಿಗಳ ಆತ್ಮನೂ, ಸೂರ್ಯಾಗ್ನಿಗಳು ಗೋಚರಿಸುವ ಜಾಗ್ರದವಸ್ಥಾಭಿಮಾನಿಯಾದ ವಿಶ್ವವೆಂಬ ಚೇತನನೂ, ಸ್ವಪ್ನಾವಸ್ಥಾಭಿಮಾನಿಯಾದ ತೈಜಸವೆಂಬ ಆತ್ಮನೂ, ಸುಷುಪ್ತಾವಸ್ಥೆಯ ಅಭಿಮಾನಿಯಾದ ಪ್ರಾಜ್ಞವೆಂಬ ಆತ್ಮನೂ ನೀನೆ ಆಗಿರುವೆ. ನೀನೆ ಶರೀರವೂ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೂ, ಪ್ರಾಣಗಳೂ, ಅಂತಃಕರಣವೂ, ಪೃಥಿವ್ಯಾದಿ ಪಂಚಭೂತಗಳೂ ನೀನೆ. ಅವುಗಳೆಲ್ಲಕ್ಕೂ ಸಾಕ್ಷಿಯಾಗಿರುವೆ. ಸಾಕ್ಷಾತ್ ಬ್ರಹ್ಮನೂ ನೀನೆ, ಪರಮಾತ್ಮನೂ ನೀನೆ. ನಿನ್ನ ಹೊರತು ಬೇರಾರಿರುವರು." ವಚನ: ಈ ರೀತಿಯಾಗಿ ಅಪರಿಮಿತ ಸಂತೋಷದಿಂದ ಶಿವನನ್ನು ಸ್ತೋತ್ರಮಾಡಿ, ಮತ್ತೆ ೩೬. "ಕೋಪದಿಂದ ಉನ್ಮತ್ತನಾಗಿ, ಮಾಡುತ್ತಿದ್ದ ತಪಸ್ಸನ್ನೂ ವ್ಯರ್ಥಮಾಡಿಕೊಂಡು, ಗಾಯಗೊಂಡು ಬಂದು ಮುಂದೆ ಬಿದ್ದ ಭಯಂಕರವಾದ ಹಂದಿಯನ್ನು ಕೊಂದು, ಅದನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಿಂದ ಮೂರ್ಖನಾದೆನು. ನಿನ್ನೊಡನೆ ಬಾಣ ಗಳಿಂದ ಹೋರಾಡಿದೆನು. ನನಗಿಂತಲೂ ದೈವದ್ರೋಹಿ ಯಾವನೂ ಇಲ್ಲ. ಎಲೈ ಜಗದೀಶ್ವರನೇ, ಲೋಕದಲ್ಲಿ ಭಕ್ತರ ಅಪರಾಧಗಳನ್ನು ಮನ್ನಿಸುವ ಪ್ರಭುವು ನಿನ್ನನ್ನು ಬಿಟ್ಟರೆ ಬೇರೆ ಯಾರುತಾನೇ ಇರುವರು ?" ವಚನ : ಎಂದು ಆರ್ತ ನಾಗಿ, ಭಕ್ತ್ಯತಿಶಯದಿಂದ ಪುನಃ ಸಾಷ್ಟಾಂಗ ಪ್ರಣಾಮ ಮಾಡಿ, ಶಿವನೆರಡು

---

೧ ಸತ್ಯಂ (ವ) ೨ ತಾರ್ (ಕ) ೩-೩ ಭಯಭಕ್ತಿ ಭಾರದಿಂ (ಯ)

ಚಂಪಕ ಮಣಿವ ಮರಲ್ದು ನೋಡುವ ಕಡಂಗುವ ಪೊಂಗುವ ಸುತ್ತಿ ಬರ್ಪ ರಿಂ
ಗಣಗುಣವಾರ್ದು೧ ಸಾರ್ದು೨ ನಲವೇರ್ಚುವ ತೂಗುವ ಬೀಗವಟ್ಟಿ ಸಂ
ದಣಿಗೊಳೆ ಪಾಡುವಾಡುವ ಕರಂ ನುತಿಗೆಯ್ವ ಪದಾಬ್ಜಪೂಜೆಯಂ
ತಣಿಯದೆ ಮಾಳ್ಪ ಸಂಭ್ರಮಮದೇಂ ಬಗೆಗೊಂಡುದೊ ಪಾಂಡುಪುತ್ರನಾ ೩೭

ಪರಿವಿಧಿ ಮನುಮುನಿನಿಗಮೋ
ತ್ಕರಂ ಕರಂ ಕಾಣದರಸುವೀ ನಿನ್ನ ಪದಾಂ
ಬುರುಹದ್ವಯಮಂ ಕಂಡೆಂ
ಹರ ಹರ ೩ನೆಜೆ೪ ಧನ್ಯನಾವನೆನ್ನಿಂದನ್ಯಂ೩ ೩೮

ಪುಟ್ಟಿಂದು ಸಫಲಮಾದುದು
ನೆಟ್ಟನೆ ಮದ್ವಂಶಕುಸುಮಮಲರ್ದುದು ಪೆಜತೇಂ
ಮುಟ್ಟಿದೆನತಿಶಯಪದವಿಯ
ಬಟ್ಟೆಯನೆಲೆ ದೇವದೇವ ನೀನೊಲ್ದುದಱಿಂ ೩೯

ವಚನ ಎಂದು ಮತ್ತಮಿಂತು ಕೃತಾರ್ಥತೆಯಂ ತಾಳ್ದು ಸನ್ನುತಿಗೆಯ್ವ ಪಾರ್ಥನ ಸಮು ನ್ನತಭಕ್ತಿಭಾವಕ್ಕೆ ಭವಾನೀರಮಣಂ ಮೆಚ್ಚಿ ಮನದಂದು

ಪಾದಗಳನ್ನು ಹಿಡಿದು, ತಬ್ಬಿಕೊಂಡು, ತನ್ನ ತಲೆಯಲ್ಲಿ ಧರಿಸಿ, ೩೭. ನಮಸ್ಕರಿಸಿದನು. ಪುನಃ ಪುನಃ ಶಿವನನ್ನೇ ನೋಡಿದನು, ಭಯದಿಂದ ನಡುಗಿದನು, ಆನಂದದಿಂದ ಉಬ್ಬಿದನು, ಪ್ರದಕ್ಷಿಣೆ ಮಾಡಿದನು, ಸುತ್ತಿಬಂದು ನಲಿದು ನೆಲದ ಮೇಲೆ ಅಡ್ಡ ಬಿದ್ದನು, ಬೀಗಿದನು, ಒಲೆದಾಡಿದನು, ಪ್ರೇಮದಿಂದ ಹಾಡಿದನು, ಸ್ತುತಿಸಿದನು. ಶಿವನ ಪಾದಕಮಲಗಳನ್ನು ಎಷ್ಟು ಪೂಜಿಸಿದರೂ ಅರ್ಜುನನಿಗೆ ಮಾತ್ರ ತೃಪ್ತಿಯಾಗಲಿಲ್ಲ. ೩೮. "ವಿಷ್ಣು, ಬ್ರಹ್ಮ, ಮನುಗಳು, ವೇದರಾಶಿಗಳು ಎಷ್ಟು ಶ್ರಮಿಸಿದರೂ ಸುಲಭವಾಗಿ ಗೋಚರಿಸದೆ, ಇನ್ನೂ ಹುಡುಕುತ್ತಲೇ ಇರುವ ನಿನ್ನ ಪಾದಕಮಲಗಳನ್ನು ನಾನು ಕಂಡೆನು. ಆಶ್ಚರ್ಯವು ! ನನಗಿಂತಲೂ ಕೃತಾರ್ಥರಾದವರು ಬೇರೆ ಯಾರಿದ್ದಾರೆ ? ೩೯. ಮಹಾದೇವನೇ, ನೀನು ನನಗೆ ಪ್ರಸನ್ನನಾದೆ. ಆದರಿಂದ ನನ್ನ ಈ ಜನ್ಮ ಸಾರ್ಥಕವಾಯಿತು. ನನ್ನ ಕುಲವೆಂಬ ಪುಷ್ಪವು ವಿಕಸಿತವಾದಂತಾಯಿತು. ಏನುತಾನೇ ಹೇಳಲು ಸಾಧ್ಯವಾದೀತು ? ನಿನ್ನ ಕರುಣೆಯಿಂದ ನಾನು ಪರಮಪದದ ದಾರಿಯನ್ನು ಹಿಡಿದೆನು." ವಚನ: ಹೀಗೆ ಪುನಃ ಪುನಃ ಸಂಘಟಿತಾಭಾವದಿಂದ ಕೂಡಿ, ಅರ್ಜುನನು ಸ್ತೋತ್ರ ಮಾಡಿ

---

೧ ದಾರ್ದು (ಜ); ವಾರ್ವ (ಯ) ೨ ಸಾರ್ವ (ಯ) ೩-೩ ನೆರೆದನ್ಯನಾವನನ್ನಿಂ ಧನ್ಯಂ (ಗ)

ಚಂಪಕ ಪದೆವಮರ್ದಪ್ಪಿದಂ ಗುಹಗಜಾಸ್ಯರನಪ್ಪುವ ತೋಳ್ಗಳಿಂದೆ ಮಾ
ಣದೆ ನರನಂ ಮೃಡಂ ಪರಸಿದಂ ನಿಗಮಂಗಳ ಪೆತ್ತ ಬಾಯ್ಗಳಿಂ
ಮುದಮಲರ್ವಂತೆ ಮೆಯ್ದಡವಿದಂ ವರವೀವ ಕರಾಬ್ಜದಿಂದೆ ನೋ
ಡಿದನಖಿಳಾಘಮಂ ತೆಮರ್ವ ಕಣ್ಗಳಿನಾ ನರನೇಂ ಕೃತಾರ್ಥನೋ ೪೦

ವಚನ ಅಂತುಂ ಮನ್ನಿಸಿ ಮತ್ತಮಿರದೆ

ಉತ್ಪಲ ನಿನ್ನ ಕಟೂಕ್ತಿ ಮಂತ್ರಮೆನಗೆಚ್ಚ ಶರಾವಳಿ ಪುಷ್ಪಸಂಚಯಂ
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ
ನಿನ್ನ ಧನುರ್ಲತಾಹತಿಯ ಬಾಸುಳಿ ಪೂಗಳ ಮಾಲೆಯೊಚ್ಚತಂ
ನಿನ್ನಯ ಮುಷ್ಟಿಯುದ್ಧಮದು ಮತ್ಪದಪೂಜೆ ನಿಜಂ ಧನಂಜಯಾ ೪೧

ವಚನ ಎಂದು ಕೃಪಾಪಾಂಗದಿನಭೀಕ್ಷಿಸಿ

ಇದು ನಿನ್ನ ವರಶರಾಸನ
ಮಿದು ಶರಮಿದು ಖಡ್ಗಮಿಂತಿದಂ ಪಿಡಿಯೆಂದಾ
ಮದನರಿಪುವಿತ್ತು ಮುಂಕೊಂ
ಡುದನಾವುದು ನಿನ್ನಭೀಪ್ಸಮದನೊರೆಯೆಂದಂ ೪೨

ದನು. ಅವನ ಉತ್ಕೃಷ್ಟವಾದ ಭಕ್ತಿಗೆ ಗಿರಿಜಾವಲ್ಲಭನು ಮೆಚ್ಚಿ, ೪೦. ಶಿವನು ಷಣ್ಮುಖ, ಗಣಪತಿಗಳನ್ನು ಅಪ್ಪುವ ತನ್ನ ತೋಳುಗಳಿಂದ ಅರ್ಜುನನನ್ನು ಪ್ರೀತಿಯಿಂದ ಆಲಿಂಗಿಸಿದನು. ವೇದಗಳನ್ನು ಸೃಜಿಸಿದ ತನ್ನ ಬಾಯಿಗಳಿಂದ ಆಶೀರ್ವದಿಸಿದನು. ಅರ್ಜುನನು ಆನಂದದಿಂದ ಉಬ್ಬಿಹೋಗುವಂತೆ, ತನ್ನ ವರದ ಹಸ್ತಕಮಲಗಳಿಂದ ಮೈದಡವಿದನು. ಸಕಲ ಪಾಪಧ್ವಂಸಿಯಾದ ತನ್ನ ಕಟಾಕ್ಷದಿಂದ ಅವನನ್ನು ವೀಕ್ಷಿಸಿದನು–ಎಂದರೆ ಅರ್ಜುನನು ಎಷ್ಟು ಧನ್ಯನಾಗಿರಬೇಕು ? ವಚನ : ಹೀಗೆ ಮನ್ನಿಸಿ ಮತ್ತೆ, ೪೧. ಶಿವನು, “ಧನಂಜಯನೇ, ನಿನ್ನ ನಿಂದೆಗಳೇ ನನಗೆ ವೇದಸ್ತುತಿಗಳು. ನನ್ನ ಮೇಲೆ ಪ್ರಯೋಗಿಸಿದ ಬಾಣಗಳೇ ಅರ್ಚಿಸಿದ ಹೂಗಳು. ಕೋಪದಿಂದ ಕಣ್ಣುಗಳನ್ನು ಕೆಂಪಾಗಿ ಮಾಡಿಕೊಂಡು ನೋಡಿದ ರೀತಿಯೇ ಮಂಗಳಾರತಿಯಂತೆ. ನೀನು ಬಿಲ್ಲಬಳ್ಳಿಯಿಂದ ಬಾರಿಸಿದಾಗ ಕಾಣಿಸಿದ ಬಾಸುಂಡೆಗಳೇ ಪುಷ್ಪಮಾಲೆಗಳು, ವಾಸ್ತವವಾಗಿ ನೀನು ಮಲ್ಲಕಾಳಗದಲ್ಲಿ ನಡೆಸಿದ ಗುದ್ದಾಟಗಳೇ ನನ್ನ ಪಾದಪೂಜೆಯು.” ವಚನ : ಎಂದು ಕೃಪಾದೃಷ್ಟಿಯಿಂದ ನೋಡಿ, ೪೨. “ಇದೋ ನಿನ್ನ ಶ್ರೇಷ್ಠವಾದ ಬಿಲ್ಲು, ತೆಗೆದುಕೋ. ಇವು ನಿನ್ನ ಬಾಣಗಳು, ಇದು ಖಡ್ಗ” ಎನ್ನುತ್ತಾ ತಾನು ಹಿಂದೆ ಅರ್ಜುನನಿಂದ ಕಸಿದುಕೊಂಡ ಆಯುಧಗಳನ್ನು ಹಿಂತಿ

---

೧ ಎಂದು (ಗ) ೨ ನೆರೆ (ಯು)

ವಚನ ಎಂದು ಮತ್ತಮಿರದೆ

ನರನಲ್ತೆ ಪೂರ್ವದೊಳ್ ನೀಂ
ಪರಮರ್ಷಿಗಿಮುಕುಂದನಂಶಸಂಭವನೆಂದುಂ
ಕರಮೆನ್ನ ಭಕ್ತನಂತಜ
ನೆರೆದುದನೆಲೆ ನಿನಗೆ ಕುಡುವುದೆನಗಿದು ಪಿರಿದೇ ೬೩

ವಚನ ಎನೆ ಮಹೋತ್ಸವಂದಳೆದು ಕೆಯ್ದಾವರೆಗಳಂ ಮುಗಿದು

ಕರುಣಿಪುದೆನಗೆಲೆ ಕರುಣಾ
ಕರ ಪಾಶುಪತಾಸ್ತ್ರಮಂ ಮಹಾಬ್ರಹ್ಮಶಿರಃ
ಶರಮಂ ಸಮಸ್ತರಿಪುಸಂ
ಹರಮಂ ದಯೆಯಿಂದೆನುತ್ತೆ ಬೇಡುತ್ತಾಗಳ್ ೬೪

ಮತ್ತೇಭ ಸರದೊಳ್ ಮಿಂದೆಸಗುತ್ತುಮಾಚಮನಮಂ ಸದ್ಭಕ್ತಿಯಿಂ ಪಾದಪಂ
ಕರುಹಕ್ಕೊಲ್ದೆರಗಿರ್ದ ಗಾಂಡಿವಿಗೆ ತತ್ಸನ್ಮಂತ್ರಪೂರ್ವಂ ಕೃಪಾ
ಭರಿತಂ ಬ್ರಹ್ಮಶಿರೋಸ್ತ್ರಮಂ ಕರುಣಿಸುತ್ತುಂ ಮತ್ತಮಿತ್ತಂ ಗುಣಾ
ಭರಣಂ ಪಾಶುಪತಾಸ್ತ್ರಮಂ ಪದೆಪಿನಿಂ ಕೊಂಡಾಡೆ ದೇವವ್ರಜಂ ೬೫

ರುಗಿಸಿ, ನಿನ್ನ ಮನಸ್ಸಿನ ಬಯಕೆ ಏನುಂಟೋ ತಿಳಿಸು", ವಚನ : ಎನ್ನುತ್ತಾ ಮತ್ತೂ ಮುಂದುವರಿದು ೬೩. ಪೂರ್ವದಲ್ಲಿ ನೀನು ವಿಷ್ಣುವಿನ ಅಂಶಸಂಭವನೇ ಆದ ನರನೆಂಬ ಮಹರ್ಷಿಯೇ ಅಲ್ಲವೆ ? ನನ್ನ ಭಕ್ತನೇ ನೀನು. ಹೀಗಿರುವಾಗ ನಿನ್ನ ಇಷ್ಟಾರ್ಥಗಳನ್ನು ಸಲ್ಲಿಸುವುದು ನನಗೆ ಏನು ಮಹಾ ದೊಡ್ಡ ವಿಷಯ." ಎನ್ನಲು, ವಚನ : ಅರ್ಜುನನು ಪರಮೋತ್ಸಾಹದಿಂದ ಕರಕಮಲಗಳನ್ನು ಜೋಡಿಸಿ ನಮಸ್ಕರಿಸುತ್ತಾ ೬೪. "ದಯಾಮಯನಾದ ಪರಶಿವನೇ, ಸಕಲ ಶತ್ರುಸಂಹಾರಕವಾದ ಪಾಶುಪತಾಸ್ತ್ರವನ್ನೂ, ಬ್ರಹ್ಮಶಿರಾಸ್ತ್ರವೆಂಬ ಮಂತ್ರಾಸ್ತ್ರಗಳನ್ನೂ ಅನುಗ್ರಹಿಸು" ಎಂದು ಪ್ರಾರ್ಥಿಸಿದನು. ೬೫. ಕೊಳದಲ್ಲಿ ಸ್ನಾನಮಾಡಿ ಶುಚಿಯಾಗಿ ಆಚಮನಮಾಡಿ ! ಮಹಾಭಕ್ತಿಯಿಂದ ಚರಣಕಮಲಗಳಿಗೆ ನಮಸ್ಕರಿಸಿದ ಅರ್ಜುನನಿಗೆ, ಶಿವನು ಮಂತ್ರಪುರಸ್ಸರವಾಗಿ ಬ್ರಹ್ಮಶಿರೋಸ್ತ್ರವನ್ನು ಕೊಟ್ಟು, ಮತ್ತೆ ಸಕಲ ಸುರಸಮೂಹವು ಕೊಂಡಾಡುತ್ತಿರಲು, ಸುಗುಣಭೂಷಣನಾದ ಶಿವನು ಪಾಶು

೧ ಪರಮಋಷಿ (ಕ, ಜ)

ಒರೆದೇಕಾಂತದೊಳೊಲ್ಪಿನಿಂದ ನಿಜಭಾಸ್ವತ್ತತ್ತ್ವಮಂ ಮೋಕ್ಷದೊ
ದಿರವಂ ನಿನ್ನ ಸಮಸ್ತಕಾರ್ಯಕೆ ಸಹಾಯಂ ಮಾಣದೆನ್ನಂಶಮಾ
ದರವಿಂದಾಂಬಕನಂತಜಂ ನಿನಗೆ ಕುಂದೆಂದುಂ ವಲಂ ತೋಱದಾಂ
ತರಿಯುಂ ಗೆಲ್ದಪೆ ಸೌಖ್ಯಮಕ್ಕುಮೆನುತಂ ಪೇೞ್ದಂ ಭವಾನೀಧವಂ ೪೬

ವಚನ ಆಗಳ್ ನಿಜೇಷ್ಟಲಾಭಮುದಿತಾಂತಃಕರಣಂ ಪುರಂದರನಂದನಂ ಪುರಹರನ ಪೊರೆಯೊಳೆಸೆವ ಕರುಣಾರಸಭರಿತೆಯಂ ಗಿರಿತನುಜೆಯುಂ ಕಂಡು ಸಾಷ್ಟಾಂಗಮೆಱಗಿ ನಿಂದು ಕರಾಂಜಲಿವೆರಸು[1]

ಉತ್ಪಲ ಮಾತೆ ಮಹೀಧ್ರಜಾತೆ ಜಗದಂಬಿಕೆ ಜನ್ಮವಿದೂರೆ ಶಂಭುಸಂ
ಪ್ರೀತೆ ಸದಾಪುನೀತೆ ಶಶಲಕ್ಷ್ಮಕಳಾಧರೆ ಸರ್ವಲೋಕವಿ
ಖ್ಯಾತೆ ಕೃಪಾಸಮೇತೆ ಕರಖಡ್ಗನಿಕೃತ್ತಮದಾಂಧದೈತ್ಯಸಂ
ಘಾತೆ ಭೃತಾಂಗಜಾತೆ ಶರಣಾಗಮರಾರ್ಚಿತಪಾದಪಂಕಜೇ ೪೭

ಮಹಾಸ್ರಗ್ಧರೆ ತರುಣಾದಿತ್ಯಪ್ರಭಾಭಾಸುರೆ ಭವಹರೆ ಭದ್ರಾಂಗಿ ಭಕ್ತೌಘರಕ್ಷಾ
ಕರೆ ಕಾರುಣ್ಯಾರ್ದ್ರನೇತ್ರಾಂಚಲೆ ಕಲಿಕಲುಷಧ್ವಾಂತವಿಧ್ವಂಸನಾಮೋ

ಪತಾಸ್ತ್ರವನ್ನೂ ದಯೆಗೈದನು. ೪೬. ಪಾರ್ವತೀಪತಿಯು ಸಂತೋಷದಿಂದ ಅರ್ಜುನನಿಗೆ ರಹಸ್ಯವಾಗಿ ತನ್ನ ದಿವ್ಯವಾದ ತತ್ತ್ವವನ್ನೂ, ಮುಕ್ತಿಯ ಏಕರೂಪವಾದ ಸ್ಥಿತಿಯನ್ನೂ ತಿಳಿಸಿ, "ನಿನ್ನ ಸಮಸ್ತ ಕಾರ್ಯಗಳಿಗೂ ನನ್ನ ಅಂಶಸ್ವರೂಪನೇ ಆದ ವಿಷ್ಣುವು ಸದಾ ಅನುಕೂಲನಾಗಿರುವನು. ಆದುದರಿಂದ ಯಾವಾಗಲೂ ನಿನಗೆ ಯಾವ ಬಗೆಯ ತೊಂದರೆಯೂ ಕಾಣಲಾರದು. ವಿರೋಧಿಸುವ ಹಗೆಗಳನ್ನು ಜಯಿಸುವೆ. ನಿನಗೆ ಒಳ್ಳೆಯದಾಗುವುದು" ಎಂದನು. ವಚನ : ತನ್ನ ಅಭೀಷ್ಟಸಿದ್ಧಿಯಾದುದರಿಂದ ಅರ್ಜುನನಿಗೆ ಬಹಳ ಸಂತೋಷವಾಯಿತು. ಅರ್ಜುನನು ಶಿವನ ಪಾರ್ಶ್ವದಲ್ಲಿ ಕಂಗೊಳಿಸುತ್ತಿದ್ದ, ದಯಾಮಯಿಯಾದ ಪಾರ್ವತಿಯನ್ನು ನೋಡಿ, ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಕೈಜೋಡಿಸಿಕೊಂಡು ನಿಂದು, ೪೭. "ಅಮ್ಮಾ, ಗಿರಿಜೆಯೇ, ಉತ್ಪತ್ತಿರಹಿತಳೇ, ಶಿವನ ಪ್ರಿಯಳೇ, ನಿತ್ಯಶುದ್ಧಳೇ, ಚಂದ್ರಕಳಾಭೂಷಿತಳೇ, ಸಕಲ ಲೋಕಗಳಲ್ಲಿಯೂ ಪ್ರಖ್ಯಾತಳಾದವಳೇ, ದಯಾಪೂರ್ಣಳೇ, ದರ್ಪದಿಂದ ಮತ್ತರಾದ ರಾಕ್ಷಸರನ್ನು ನಿಶಿತವಾದ ಖಡ್ಗದಿಂದ ಸಂಹರಿಸಿದವಳೇ, ಮನ್ಮಥನಿಗೆ ಅನುಗ್ರಹಿಸಿದವಳೇ, ದೇವತೆಗಳಿಂದ ಪೂಜಿತವಾದ ಪಾದಕಮಲವುಳ್ಳವಳೇ ನನ್ನನ್ನು ಕಾಪಾಡು. ೪೮ ಬಾಲಸೂರ್ಯನ ಕಾಂತಿಯಿಂದ ಶೋಭಿತಳೇ, ಜನನದುಃಖನಿವಾರಕಳೇ, ಮಂಗಳಮೂರ್ತಿಯೇ, ಶರಣಸಮೂಹವನ್ನು ರಕ್ಷಿಸುವವಳೇ, ಕೃಪಾಪೂರ್ಣ ಕಟಾಕ್ಷವುಳ್ಳವಳೇ, ಕಲಿಯ ಪಾಪವೆಂಬ ಅಂಧಕಾರವನ್ನು

---

೧ ವೆರಸಿ (ಯು)

ತ್ಕರೆ ವಿಶ್ವಾರಾಧ್ಯೆ ವಿದ್ಯಾಮಯಿ ವಿವಿಧಮಹಾಭೂತಿಸಂಯುಕ್ತೆ ವಿಶ್ವಂ
ಭರೆ ವೇದಸ್ತುತ್ಯಲೀಲಾಧರೆ ಪೊರೆ ಸತತಂ ಸತ್ಯವಾಣೀ ಮೃಡಾಣೀ ೪೮

ಚಂಪಕ ಕಮಲಭವಾಂಡಕೋಟಿಗಳನೇಕನಿಜಾಂಶದಿಂದೆ ಪೆತ್ತು ಮೇಣವಂ
ಪ್ರಮುದದಿನೋವಿ ಚಿದ್ಗಗನರೂಪದಿನಾಂತರಬಾಹ್ಯದೊಳ್ ಸಮಾ
ಕ್ರಮಿಸಿ ಮುಸುಂಕಿ ಸಂಹರಿಸುತಂತ್ಯದೊಳದ್ವಯಮಾದ ಬೊಮ್ಮದೊಳ್
ಸಮರಸವಾಳ್ದ ನಿನ್ನಿರವನಿನಾರ್ ಸಲೆ ಪೇಳ್ವರೊ೨ ಸರ್ವಮಂಗಳೇ ೪೯

ವಚನ ಎಂದು ಸಂದಣಿಪಾನಂದದಿಂ ಸನ್ನುತಿಗೆಯ್ವ ಕರ್ಣಾರಿಪ್ರವನಪರ್ಣೆ ಪೂರ್ಣ ಕೃಪೆಯಿಂನಭೀಕ್ಷಿಸಿ

ಉತ್ಪಲ ಚಾರೆಲೆ ಪದ್ಮಲೋಚನನ ಮಯ್ದುನ ಪಾಂಡವ ನಿನ್ನ ಭಕ್ತಿವಿ
ಸ್ತಾರಮಿದಿತ್ತುದೆನ್ನ ಬಗೆಗುತ್ಸವಮಂ ಪಿಡಿ ಕೊಟ್ಟಪೆಂ ಭವದ್
ವೈರಿನಿಕಾಯಮಂ ಕ್ಷಣದೊಳರ್ದಿಪ ಬಾಣಮನೆಂದು ಸದ್ಗುಣಾ
ಧಾರೆ ಧರಾಧರೇಂದ್ರಸುತೆಯಿತ್ತಳುದಾರತರಾಂಜನಾಸ್ತ್ರಮಂ ೫೦

ನಾಶಪಡಿಸುವ ಸಹಸ್ರನಾಮಶೋಭಿತಳೇ, ಸಕಲಪೂಜ್ಯಳೇ, ಜ್ಞಾನಸ್ವರೂಪಿಣಿಯೇ, ನಾನಾ ವಿಧವಾದ ಮಹದೈಶ್ವರ್ಯಯುಕ್ತಳೇ, ಲೋಕರಕ್ಷಕಳೇ, ವೇದಗಳಿಂದ ಕೀರ್ತಿಸಲಾದಲೀಲೆಗಳನ್ನು ಮೆರೆದವಳೇ, ಸತ್ಯವಾದ ಮಾತನ್ನೇ ಆಡುವವಳೇ, ಶಿವನ ಪಟ್ಟದ ರಾಣಿಯೇ ಸರ್ವದಾ ನನ್ನನ್ನು ಕಾಪಾಡು, ೪೯. ಸರ್ವಮಂಗಳೆಯೇ, ಅನಂತಕೋಟಿ ಬ್ರಹ್ಮಾಂಡಗಳನ್ನು ನಿನ್ನ ಒಂದು ಕಲೆಯಿಂದ ಸೃಷ್ಟಿಸುತ್ತಲೂ ಮತ್ತು ಅವುಗಳನ್ನು ಸಂತೋಷದಿಂದ ಪಾಲಿಸುತ್ತಲೂ, ಚಿದಾಕಾಶರೂಪದಿಂದ ಅವುಗಳ ಒಳಗೂ, ಹೊರಗೂ ವ್ಯಾಪಿಸುತ್ತಲೂ, ಕೊನೆಗೆ ಬ್ರಹ್ಮಾಂಡಗಳನ್ನು ಲಯಗೊಳಿಸುವ ಪರಬ್ರಹ್ಮಸ್ವರೂಪನಾದ ಶಿವನಲ್ಲಿ ಸೇರಿಹೋಗುವ ನಿನ್ನ ನಿಜಸ್ವರೂಪವನ್ನು ಯಾರುತಾನೇ ಹೊಗಳಲು ಸಮರ್ಥರಾಗುವರು ?" ವಚನ : ಎಂದು ನಿರ್ಭರಾನಂದದಿಂದ ಸ್ತುತಿಮಾಡಿದ ಅರ್ಜುನನನ್ನು ಪಾರ್ವತಿಯು ದಯಾಪೂರ್ಣದೃಷ್ಟಿಯಿಂದ ನೋಡಿ, ೫೦. "ಕೃಷ್ಣನ ಮೈದುನನೇ, ಪಾಂಡುಕುಮಾರನೇ ನನ್ನ ಸಮೀಪ ಬಾ. ನಿನ್ನ ನಿರತಿಶಯವಾದ ಭಕ್ತಿಗೆ ನಾನು ಪ್ರಸನ್ನಳಾಗಿರುವೆನು. ತೆಗೆದುಕೋ, ಈ ಅಸ್ತ್ರವನ್ನು ಕೊಡುವೆನು, ಇದು ಮಹಾಪ್ರಬಲವಾದ ಅಂಜನಾಸ್ತ್ರವು. ನಿನ್ನ ಶತ್ರುಸಮೂಹವನ್ನು ಒಂದು ಕ್ಷಣದಲ್ಲಿ ಧ್ವಂಸ ಮಾಡಬಲ್ಲುದು ಇದು" ಎನ್ನುತ್ತಾ ಪರ್ವತರಾಜಪುತ್ರಿಯು, ಸಕಲ ಸದ್ಗುಣಪೂರ್ಣೆಯೂ

---

೧ ಜಾಂಗ (ಚ) ೨-೨ ನಾನರಿವರ್‌ಸಲೆ (ಯ)

ಚಂಪಕ ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ[1]
ಪದಮಿಡುವಲ್ಲಿ ವೈರಿಶರಸಂಹತಿಯಂ ತಱಿವಲ್ಲಿ ಲಕ್ಷಮು
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮ
ಪ್ಪುದು ರಿಪುವೃಂದಮಂ ತವಿಸಿ ನಿನ್ನೆಡೆಗೆಯ್ದುಗುವೀ ಮಹಾಶರಂ ೫೧

ಎಂದೊರೆದು ಕರುಣಿಸುತೆ ಗಿರಿ
ನಂದನೆ ಭುವನೈಕಮಾತೆ ಜಯಮಂ ಪಡೆ ನೀಂ
ಕಂದ ಸಮರಾಂಗಣದೊಳೆನು
ತಂದಮರರ್ ಪೊಗೞೆ ಪರಸಿದಳ್ ಗಾಂಡಿವಿಯಂ ೫೨

ಉತ್ಪಲ ಅಂಬರದೊಳ್ ಜಯಧ್ವನಿ ವಿಜೃಂಭಿಸಿದತ್ತು ಪೊದಟ್ಟುಘೇಯುಘೇ
ಯೆಂಬ ರವಂ ಸುರಪ್ರಕರದೊಳ್ ನೆಗೞ್ದತ್ತು ಮಹಾನಕಸ್ವನಾ
ಡಂಬರಮೊಪ್ಪೆ ಸೂಸಿದುದು ಪೂಮೞೆ ಶಂಕರನಂಘ್ರಿಯೊಳ್ ಸಹ
ಸ್ರಾಂಬಕಸೂನುಗಾದುದು ಮನೋರಥಸಿದ್ಧಿಭವಂ ಮಹೋತ್ಸವಂ ೫೩

ಮತ್ತೇಭ ಶಿವಪಾದಾಬ್ಜದ ಸೋಂಕಿನಿಂ ವಿಮಳತೇಜಃಸ್ಫೂರ್ತಿ ಮೆಯ್ವೆರ್ಚೆ ಪೊ
ಣ್ಮುವ ಮಂದಸ್ಮಿತಸಾಂದ್ರಚಂದ್ರಿಕೆ ಪೊದೞ್ದಾಸ್ಯೇಂದು ಕಣ್ಗೊಪ್ಪೆ ಕಾಂ
ತಿವಿಶೇಷಸ್ಫುಟಫುಲ್ಲಲೋಚನಯುಗಂ ಚೆಲ್ವಾಗೆ ಸೌಂದರ್ಯಸಾ
ರವಿರಾಜತ್ತನು ಗಾಡಿವೆತ್ತು ಮೆಱೆದಂ ಗಾಂಡೀವಚಾಪಾಯುಧಂ ೫೪

ಆದ ಪಾರ್ವತಿಯು ಅರ್ಜುನನಿಗೆ ಅಂಜನಾಸ್ತ್ರವನ್ನು ಅನುಗ್ರಹಿಸಿದಳು. ೫೧. "ಈ ಮಹಾಸ್ತ್ರವು ಬತ್ತಳಿಕೆಯಿಂದ ತೆಗೆಯುವಾಗ ಒಂದು, ಬಿಲ್ಲಿಗೆ ಹೂಡುವಾಗ ಹತ್ತು, ಪ್ರಯೋಗಿಸುವಾಗ ನೂರು, ಗುರಿಯನ್ನು ಹೊಡೆಯುವಾಗ ಸಾವಿರ, ಶತ್ರುಗಳ ಬಾಣ ಸಮೂಹವನ್ನು ಛೇದಿಸುವಾಗ ಲಕ್ಷ, ವೇಗವಾಗಿ ಹಾರುವಾಗ ಕೋಟಿ, ಯುದ್ಧಭೂಮಿ ಯಲ್ಲಿ ವೈರಿಗಳನ್ನು ಕತ್ತರಿಸುವಾಗ ಅಸಂಖ್ಯವಾಗಿ, ಪುನಃ ನಿನ್ನೆಡೆಗೇ ಬಂದು ನಿನ್ನ ಬತ್ತಳಿಕೆಯನ್ನು ಸೇರುವುದು!" ೫೨. ಎಂದು ಲೋಕಮಾತೆಯಾದ ಪಾರ್ವತಿಯು ಅಸ್ತ್ರವನ್ನು ಪ್ರದಾನ ಮಾಡಿ, "ಮಗು, ಯುದ್ಧರಂಗದಲ್ಲಿ ಜಯವನ್ನು ಪಡೆ," ಎಂದು ಹರಸಿದಳು. ಆಗ ದೇವತೆಗಳು ಪಾರ್ವತಿಯನ್ನು ಹೊಗಳಿದರು. ೫೩. ಆಕಾಶದಲ್ಲಿ ಜಯಕಾರವು ಹೆಚ್ಚಿತು. "ಉಘೇ, ಉಘೇ" ಎಂಬ ದೇವಸಂಘದ ಉದ್ಗಾರಗಳು ಹರಡಿದುವು. ಮಹಾಭೇರಿಗಳ ಶಬ್ದವು ಮೊಳಗಿತು. ಶಿವನ ಪಾದಗಳಲ್ಲಿ ಪುಷ್ಪವೃಷ್ಟಿ ಯಾಯಿತು. ಅರ್ಜುನನಿಗೆ ತನ್ನ ಮನೋರಥಸಿದ್ಧಿಯಿಂದ ಪರಮಾನಂದವುಂಟಾಯಿತು. ೫೪. ಶಿವನ ಪಾದಕಮಲಗಳ ಸೋಂಕಿನಿಂದ ಅರ್ಜುನನ ಶರೀರದಲ್ಲಿ ನಿರ್ಮಲವಾದ ಕಾಂತಿಯು ತುಂಬಿ ಬೆಳಗಿತು. ಮುಖದಲ್ಲಿ ಮುಗುಳನಗೆಯ ಬೆಳದಿಂಗಳು ಚಿಮ್ಮಿ ಮನೋ ಹರವಾಗಿ ಕಂಡಿತು. ವಿಶೇಷ ತೇಜಸ್ಸಿನಿಂದ ಕಣ್ಣುಗಳು ಹೊಳೆದುವು. ಗಾಂಡೀವಿಯು

---

೧ ಸಾವಿರಂ (ಚ)

ವಚನ ಅಂತೆಸೆದಿರ್ಪಿನಮಾಗಳ್

ಮತ್ತೇಭ ಸುರಲೋಕಕ್ಕಿರದೆಯ್ದಿ ನಿರ್ಜರವರಂಗಾನಂದಮಂ ಸಾರ್ಚಿ ಸಾ
ದರಮಲ್ಲಿಂ ಬಟಿಕೆಯ್ದಿ ಧರ್ಮತನಯಂ ಮುಂತಾದ ಭಾಸ್ವತ್ಸಹೋ
ದರರೊಳ್ ನೀಂ ಬೆರೆದಾಂತ ವೈರಿಗಳನೆಮ್ಮೀ ಬಾಣದಿಂ ಗೆಲ್ದು ಭಾ
ಸುರಸಾಮ್ರಾಜ್ಯಮನಾಳ್ವುದೆಂದು ಗಿರಿಶಂ ಬೀಟ್ಕೊಟ್ಟನಾ ಪಾರ್ಥನಂ ೫೫

ವಚನ ಅಂತು ಬೀಟ್ಕೊಡಲೊಡನೆ ಮೃಡನಡಿಗಳ್ಗೆ ಪೊಡವಿಯೊಡಲೊರಸೆ ಪೊಡೆಮಟ್ಟು, ಮೃಡಾಣಿಗೋರಂತೆಱಗಿ, ಗುಹಗಣಪಾದಿಗಳ್ಗೆ ಮಣಿದು, ಗಣವರರ್ಗೆ ಕುಂಬಿಟ್ಟು, ದಿವಿಜೇಂದ್ರರಂ ಬಲವಂದು, ವಿನಯವಿನಮಿತನಾಗಿ ತತ್ಕಾರುಣ್ಯಂಬಡೆದು

ಉತ್ಪಲ ಜಾನಿಸುತದ್ರಿಜಾಪತಿಯ ಪಾದಪಯೋಜಮನತ್ತಲೆಯ್ದಿದಂ
ಭೂನುತಶೌರ್ಯನರ್ಜುನನವಂ ಪ್ರಮಥಾಮರರೊಂದುಗೂಡಿ ದಿ
ವ್ಯಾನಕರಾವಮುಣ್ಮೆ ವೃಷಭೇಂದ್ರನನೇಱಿ ನಿಜಾಂಗಕಾಂತಿಯಿಂ
ಭಾನುಕರೋತ್ಕರಂ ಮಸುಳೆ ಬಾನ್ಗಡರ್ದೆಯ್ದಿದನಿತ್ತಲೀಶ್ವರಂ ೫೬

ಅತಿಶಯ ಸೌಂದರ್ಯದಿಂದ ಕೂಡಿ ಪ್ರಕಾಶಿಸಿದನು. ವಚನ : ಹೀಗೆ ಪ್ರಕಾಶಿಸುತ್ತಿರಲಾಗಿ ೫೫. "ನೀನು ಇಲ್ಲಿಂದ ಸ್ವರ್ಗಲೋಕಕ್ಕೆ ಹೋಗು, ಇಂದ್ರನಿಗೆ ಸಂತೋಷವಾಗುವುದು. ಅನಂತರ ನೀನು ಧರ್ಮರಾಯನೇ ಮೊದಲಾದ ನಿನ್ನ ಸೋದರರಲ್ಲಿಗೆ ಹೋಗಿ ಸೇರು. ನಾವು ಅನುಗ್ರಹಿಸಿದ ಈ ದಿವ್ಯಾಸ್ತ್ರಗಳಿಂದ ನಿನ್ನ ವೈರಿಗಳನ್ನು ಜಯಿಸು. ವೈಭವದಿಂದ ಸಾಮ್ರಾಜ್ಯವನ್ನು ಪಾಲಿಸು" ಎಂದು ಶಿವನು ಹರಸಿ, ಅರ್ಜುನನನ್ನು ಕಳುಹಿಸಿದನು. ವಚನ : ಈ ರೀತಿಯಾಗಿ ಶಿವನು ಅರ್ಜುನನನ್ನು ಬೀಳ್ಕೊಡಲು, ಅರ್ಜುನನು ಕೂಡಲೇ ತನ್ನ ಮೈ ನೆಲವನ್ನೊರಸು ಮತ್ತೆ ಶಿವನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಕ್ರಮವಾಗಿ ಪಾರ್ವತಿಗೂ, ಷಣ್ಮುಖ, ಗಣಪತಿಗೂ, ಪ್ರಮಥ ಗಣಗಳಿಗೂ ನಮಸ್ಕರಿಸಿದನು. ದೇವಮುಖ್ಯರನ್ನು ಪ್ರದಕ್ಷಿಣೆ ಬಂದು ನಮಿಸಿ, ಶಿವನ ಅನುಗ್ರಹವನ್ನು ಪಡೆದು ೫೬. ಲೋಕೋತ್ತರವಾದ ಸಾಹಸವುಳ್ಳ ಅರ್ಜುನನು, ಶಿವನ ಪಾದಕಮಲಗಳನ್ನೇ ಧ್ಯಾನಿಸುತ್ತಾ ಹೊರಟನು. ಇತ್ತಕಡೆ ಶಿವನು ಪ್ರಮಥಗಣಗಳೊಡನೆಯೂ, ದೇವಸಮೂಹದೊಡನೆಯೂ ಕೂಡಿ, ಸುರದುಂದುಭಿಗಳು ಮೊಳಗುತ್ತಿರಲು, ವೃಷಭೇಂದ್ರನನ್ನು ಏರಿ, ತನ್ನ ಶರೀರಕಾಂತಿಯಿಂದ ಸೂರ್ಯಕಿರಣಪ್ರಕಾಶವೂ ಮಂಕೆನಿಸುವಂತೆ ಮಾಡುತ್ತಾ,

ರಂಭೆಯು ಲಾಸ್ಯಮಿಂಬುವಡೆಮೊಪ್ಪಿರೆ ಮುಂಗಡೆಯೊಳ್ ವೃಷಧ್ವಜಂ
ಕುಂಭಿನಿ ನೋಟಪ್ಪಿನಂ ಮಿಳಿರೆ ಕೀರ್ತಿಸುತೆಟ್ಟಿರೆ ಚಂಡಕೀರ್ತಿ ಸಂ
ರಂಭದೆ ವಾಣಿಯುಂ ರಮೆಯುಮಿರ್ದೆಸೆ ಢಾಳಿಸೆ ಚಾಮರಂಗಳಂ
ಶಾಂಭವಿ ಬೆನ್ನನೆಟ್ಟಿರೆ ವಿಲಾಸದೆ ಬಂದನಹೀಂದ್ರಭೂಷಣಂ . ೫೭

ವ ಚ ನ ಅಂತೆಟ್ಟೀದು ಪರಮಸಂಭ್ರಮದಿನಗಣಿತಮಣಿಗಣಗ್ರಥಿತ ಮುಕುರಮಕರ ತೋರಣದಿನೋರಣಂಬಡೆದೆತ್ತಿದ ಕನಕಕೇತನಂಗಳಿಂ ಕತ್ತುರಿಯ ಸಾರಣೆಯಿಂ ಕುಂಕುಮದ ಕಾರಣೆಯಿಂ ಬಿಸುಮುತ್ತಿನ ರಂಗವಲ್ಲಿಗಳಿಂ ಕೆದರ್ದ ಸುರಕುಜದಲರ ಪೂವಲಿಗಳಿಂ ಸಿಂಗರಂಬೆತ್ತ ರಾಜವೀಥಿಗಳಿಂ ಮಂಗಳತರಮಾಗಿ ಕಣ್ಗೊಳಿಪ ನಿಜರಾಜಧಾನಿಯೆನಿಪ ಕೈಲಾಸಗಿಪ್ಪುರವರಮಂ೧ ಪೊಕ್ಕು, ರತಿ ಪಲರೂಪಾಂತಂತೆಸೆವ ಸುರಸುದತಿಯರ್ ಕಳಸಕನ್ನಡಿವಿಡಿದಿದಿರೆಟ್ಟಿರೆ ಮನ್ನಣೆಯ ರುದ್ರಕನ್ಯೆಯರ್ ಶುಭರವದಿಂ ಪೊಂಬರಿಯಮಿಣಂಗಳಂ ಪಿಡಿದು ತೊಳತೊಳಪ ರನ್ನದಾರತಿಗಳಂ ಬೆಳಗೆಯುಂ ಮುರಾಂತಕಂ ಮುಂಬರಿದು ಕೆಯ್ಗುಡೆ ವೃಷಭೇಂದ್ರನಿಂದವತರಿಸಿ, ಕುಬೇರಂ ಸಾರ್ಚಿದ ರನ್ನಪಾವುಗೆಯುಂ

ಗಗನಮಾರ್ಗದಲ್ಲಿ ಹೊರಟುಹೋದನು. ೫೭. ರಂಭಾದಿ ದೇವಗಣಿಕೆಯರು ನರ್ತನ ಮಾಡುತ್ತಿದ್ದರು. ಮುಂದೆ ನಂದಿಧ್ವಜವು ಜಗತ್ತಿಗೆಲ್ಲಾ ಗೋಚರಿಸುವಂತೆ ಚಲಿಸುತ್ತಿದ್ದಿತು. ಚಂಡಕೀರ್ತಿಯೆಂಬ ಹೊಗಳುಭಟನು ಶಿವನನ್ನು ಕೊಂಡಾಡುತ್ತಾ ಬರುತ್ತಿದ್ದನು. ಸರಸ್ವತಿಯೂ, ಲಕ್ಷ್ಮಿಯೂ ಎರಡು ಪಕ್ಕಗಳಲ್ಲಿಯೂ ಶಿವನಿಗೆ ಚಾಮರವನ್ನು ಬೀಸುತ್ತಿದ್ದರು. ಹಿಂದೆಯೇ ಪಾರ್ವತಿಯು ಬರುತ್ತಿರಲು, ನಾಗೇಂದ್ರಭೂಷಣನಾದ ಪರಮೇಶ್ವರನು ವಿಲಾಸದಿಂದ ಕೈಲಾಸಕ್ಕೆ ಆಗಮಿಸಿದನು. ವಚನ : ಶಿವನ ರಾಜಧಾನಿಯಾದ ಕೈಲಾಸವು ನಾನಾ ರತ್ನಖಚಿತವಾದ ಕನ್ನಡಿಗಳಿಂದ ರಚಿತವಾದ ಮಕರತೋರಣಗಳಿಂದಲೂ, ಅನುವಾಗಿ ಏರಿಸಿದ್ದ ಕನಕಧ್ವಜಗಳಿಂದಲೂ ಅಲಂಕೃತವಾಗಿದ್ದಿತು. ಕಸ್ತೂರಿಯಿಂದ ಸಾರಿಸಿ, ಕುಂಕುಮ ಕಾರಣೆಗಳನ್ನಿಟ್ಟಿದ್ದರು. ಶುಭ್ರವಾದ ಮುತ್ತುಗಳ ರಂಗವಲ್ಲಿಯನ್ನಿಟ್ಟಿದ್ದರು. ಕಲ್ಪವೃಕ್ಷದ ಪುಷ್ಪಗಳನ್ನು ಚೆಲ್ಲಿದ್ದರು. ಪಟ್ಟಣವು ಸಿಂಗಾರವಾಗಿ, ಉತ್ಸವಕ್ಕೆ ಸಿದ್ಧವಾಗಿ ಮಂಗಳಮಯವಾಗಿತ್ತು. ರತಿದೇವಿಯು ನಾನಾ ರೂಪವನ್ನು ತಾಳಿದಂತೆ ಕಂಗೊಳಿಸುತ್ತಿದ್ದ ದೇವತಾರಮಣಿಯರು ಕನ್ನಡಿಯನ್ನು ಹಿಡಿದು ಬರುತ್ತಿದ್ದರು. ಅಚ್ಚುಮೆಚ್ಚಿನ ರುದ್ರಕನ್ಯೆಯರು ಶೋಭನದ ಹಾಡುಗಳನ್ನು ಹೇಳುತ್ತಾ ಬಂಗಾರದ ಹರಿವಾಣಗಳನ್ನು ಹಿಡಿದು ಶಿವನಿಗೆ ರತ್ನದಾರತಿಯನ್ನು ಬೆಳಗಿದರು. ವಿಷ್ಣುವು ಮುಂದೆ ಬಂದು ಹಸ್ತಲಾಘವವನ್ನಿತ್ತನು. ಶಿವನು ನಂದಿವಾಹನದಿಂದಿಳಿದು, ಕುಬೇರನು

---

೧-೧ ಪುರವಂ (ಯ) ೨ ಬರಿಯಾ (ಚ)

ಮೆಟ್ಟಿ, ತೊಟ್ಟನೆ ಕಟ್ಟಿದಿರೊಳ್ ಜಯರವಮುಖರಮುಖಿಂ ಚತುರ್ಮುಖಿಂ ನಿಜಕೀರ್ತಿಯನುಗ್ಘಡಿಸಿ ಪೊಗಟೆ ಸಡಗರಂ ಮಿಗೆ ಮಡದಿಯೊಡನೆಟ್ಟೆಂದು ಸಭಾಮಂಟಪಮಧ್ಯಸ್ಥಿತ ಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿಗೊಂಡು, ಸಮಸ್ತ ಸುರವಿಸರಂ ಪರಿವಿಡಿಯಿಂ ನೆರೆದುಚಿತಸ್ಥಾನದೊಳ್ ನಿಂದೋಲಗಿಸೆ, ಲೀಲೆ ಮಿಗೆ ಸರ್ವರ್ಗೆ ಸಕಲವರಪ್ರದನೆನಿಸಿ ಪೆರ್ಮೆವೆತ್ತು

ಮತ್ತೇಭ ಪರಮಾನಂದಗಿಮಯಿಂ ಪ್ರಸನ್ನವದನಂ ಪದ್ಮಾಪ್ತಕೋಟಿಪ್ರಭಾ
ವರಣಂ ಪನ್ನಗಭೂಷಣಂ ತ್ರಿಭುವನಾಧೀಶಂ ತ್ರಿತತ್ವಾತ್ಮಕಂ
ನಿರಘಂ ನಿಶ್ಚಲನಪ್ರತರ್ಕ್ಯಮಹಿಮಂ ಗೌರೀಶನೊಪ್ಪಿರ್ದನ
ಚ್ಚರಿವೀಉತ್ತಮಿಳರ್ಗೆ ಸಂತತಕೃಪಾರತ್ನಾಕರಂ ಶಂಕರಂ ೫೮

ಪದಿನಯ್ದನೆಯದಿದೆನಿಸುವ
ಮದನಾರಿಯ ಶಬರಲೀಲೆಯಂ ವಸ್ತುಕಮಾ
ರ್ಗದೊಳೊರೆದೆಂ ಕೆಯ್ಕೊಳ್ವುದು
ಸದಮಳ ಮೃಡಭಕ್ತರೆನಿಪ ವಿಬುಧರ್ ಧರೆಯೊಳ್ ೫೯

ತಂದು ಅಣಿಮಾಡಿದ ರತ್ನದ ಪಾದುಕಗಳನ್ನು ಮೆಟ್ಟಿಕೊಂಡು, ಕೂಡಲೇ ಸಮ್ಮುಖದಲ್ಲಿ ಚತುರ್ಮುಖ ಬ್ರಹ್ಮನು ಜಯಕಾರವನ್ನು ಮಾಡುತ್ತಾ, ಶಿವನ ಕೀರ್ತಿಯನ್ನು ಕೊಂಡಾಡು ತ್ತಿರಲು, ಸಂಭ್ರಮದಿಂದ ಗೌರೀಸಮೇತನಾಗಿ, ಸಭಾಮಂಟಪಕ್ಕೆ ದಯಮಾಡಿಸಿ, ಮಧ್ಯದಲ್ಲಿ ವಿರಾಜಮಾನವಾಗಿದ್ದ ರತ್ನದ ಪೀಠವನ್ನು ಅಲಂಕರಿಸಿದನು. ಸಮಸ್ತ ದೇವಸಮೂಹವೂ ತಮ್ಮ ತಮ್ಮ ಉಚಿತ ಸ್ಥಾನಗಳಲ್ಲಿ ನಿಂತು ಶಿವನನ್ನು ಓಲಗಿಸು ತ್ತಿದ್ದರು. ಈ ರೀತಿಯಾಗಿ ಮಹಾವಿಲಾಸದಿಂದ ಕೂಡಿ, ಶಿವನು ಸಕಲರಿಗೂ ಅವರವರ ಇಷ್ಟಾರ್ಥಗಳನ್ನು ಅನುಗ್ರಹಿಸಿ, ಘನತೆಯಿಂದ ಶೋಭಿಸುತ್ತಾ, ೫೮. ಪರಮಾನಂದ ಮಯನೂ, ಪ್ರಸನ್ನವದನನೂ, ಸೂರ್ಯಕೋಟಿಪ್ರಕಾಶದಿಂದ ಬೆಳಗುತ್ತಲಿದ್ದ ಶಂಕರನೂ, ಮೂರುಲೋಕಗಳ ಒಡೆಯನೂ, ಪಶು, ಪಾಶ, ಪತಿಗಳೆಂಬ ಮೂರು ತತ್ತ್ವ ಗಳಿಗೂ ಆತ್ಮಸ್ವರೂಪನೂ, ಪಾಪದೂರನೂ, ನಿಶ್ಚಲನೂ, ಊಹೆಗೆ ಮೀರಿದಂತಹ ಮಹಿಮೆಗಳಿಂದ ಕೂಡಿದವನೂ, ಗಿರಿಜಾರಮಣನೂ,. ಸದಾಕಾಲದಲ್ಲಿಯೂ ದಯಾ ಸಾಗರನೂ ಆದ ಪರಮೇಶ್ವರನು ಸಕಲರಿಗೂ ಆಶ್ಚರ್ಯವನ್ನುಂಟುಮಾಡುತ್ತಾ, ಶೋಭಿಸುತ್ತಿದ್ದನು. ೫೯. ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಹದಿನೈದನೆಯದಾದ, ಈ ಕಾಮಹರನ ಕಿರಾತಲೀಲೆಯನ್ನು ಕಾವ್ಯಸರಣಿಯಿಂದ ಹೇಳಿದೆನು. ಲೋಕದಲ್ಲಿ ಸತ್ಪುರುಷರೂ, ನಿರ್ಮಳಾಂತಃಕರಣರೂ, ಶಿವಭಕ್ತರೂ ಆದ ವಿದ್ವಾಂಸರು ಸ್ವೀಕರಿಸಲಿ.

---

೧-೧ ಮಯಪ್ರಸ (ಚ)

ನೆರೆದೇಕಾದಶವರ್ಷದ
ಹರಯ(೧)ದೊಳಭವಪ್ರಸಾದಬಲದಿಂ ಕವಿತಾ
ತರುಣಿ ಷಡಕ್ಷರಿದೇವನ
ನೆರವಿಲ್ಲದೆ ವರಯಿಸಿರ್ದಳರಿದೆನೆ ವಿಬುಧರ್ ೬೦

ಚಂಪಕ ಬಹುತರಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇಟ್ಗಿಯಿಂ
ಮಹಿಯೊಳೆ ಸತ್ಕವಿತ್ವದಿವಿಪನ್ಮಣಿ ಸಾರ್ಗುಮದೀಗುಮದ್ಭುತಾ
ವಹಸುಖಮಂ ಲಸತ್ಕವಿಗೆ ಸಾರ್ಚುಗುಮುಜ್ಜ್ವಲಕೀರ್ತಿಯಂ ಸದಾ
ಮಹಿತಪದಾರ್ಥಮಂ ಕುಡುಗುಮೀಶ್ವರನೊಲ್ಮೆಯನುಂಟುಮಾಡುಗುಂ ೬೧

ಉತ್ಪಲ ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್
ಚೆಕ್ಕಸಮುತ್ತು ಮಚ್ಚಿ ಪೊಗಟುತ್ತಿರೆ ಶಂಭುಕೃಪಾವಶೇಷದಿಂ
ಮೊಕ್ಕಳಮಾಗ ಸರ್ವರಸಮೊಪ್ಪಿರೆ ಪೇಟ್ದನಶೇಷಕಾವ್ಯಬೃಂ
ದಕ್ಕಿದು ಸಾರಮೆಂದೆನೆ ಷಡಕ್ಷರಿದೇವನದೇಂ ಪ್ರಗಲ್ಭನೋ ೬೨

ಚಂಪಕ ಪ್ರವಿಮಳ ರಾಜಶೇಖರವಿಳಾಸಮಹಾಕೃತಿಯಂ ವೃಷಾಧಿರಾ
ಜವಿಜಯಸತ್ಪ್ರಬಂಧಮುಮನೊಪ್ಪುವ ಕನ್ನಡದಿಂ ನಿಮಿರ್ಚಿದಂ
ಭುವನವಿನುತ್ಯಮಾಗೆ ಕವಿಕರ್ಣರಸಾಯನಮೆಂಬ ಕಬ್ಬಮು
ಪ್ರವಿತತ ಸಂಸ್ಕೃತೋಕ್ತಿಯೊಳೊಡರ್ಚಿದನಲ್ತೆ ಷಡಕ್ಷರಾಹ್ವಯಂ ೬೩

೬೦. ಷಡಕ್ಷರ ಕವಿಯು ಹನ್ನೊಂದು ವರುಷಗಳ ಬಾಲಕನಾಗಿರುವಾಗಲೇ ವಿದ್ವಾಂಸರೆಲ್ಲರೂ ಆಶ್ಚರ್ಯಚಕಿತರಾಗುವಂತೆ, ಪರಮೇಶ್ವರನ ಅನುಗ್ರಹಬಲದಿಂದ ಕವಿತೆಯೆಂಬ ರಮಣಿಯು ತನ್ನಿಚ್ಛೆಯಿಂದಲೇ ಅವನನ್ನು ವರಿಸಿದಳು. ೬೧. ಲೋಕದಲ್ಲಿ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದ ಫಲವಾಗಿ ಉತ್ತಮ ಕವಿತ್ವವೆಂಬ ಚಿಂತಾಮಣಿಯು ಲಭಿಸುವುದು. ಅದು ಪರಮಾಶ್ಚರ್ಯಕರವಾದ ಸಂತೋಷವನ್ನೂ, ಉಜ್ಜ್ವಲ ಕೀರ್ತಿಯನ್ನೂ ಕವಿಗೆ ದೊರಕಿಸಿಕೊಡುವುದು. ಸದಾಕಾಲವು ಉತ್ಕೃಷ್ಟವಾದ ವಸ್ತುಗಳನ್ನು ಅಥವಾ ಪ್ರಶಂಸಾರ್ಹವಾದ ಪದಗಳ ಅರ್ಥವನ್ನು ಸ್ಫುರಣಗೊಳಿಸುವುದು. ಅದರಿಂದ ಪರಮೇಶ್ವರನ ಅನುಗ್ರಹವೂ ಸಹ ಲಭ್ಯವಾಗುವುದು. ೬೨. ಮಹಾಪ್ರೌಢ ವಿದ್ವಾಂಸನಾದ ಷಡಕ್ಷರದೇವನು ಶಿವನ ಕರುಣಾವಿಶೇಷದಿಂದ ನವರಸಭರಿತವೂ, ಕಾವ್ಯಗಳಲ್ಲೆಲ್ಲಾ ಶ್ರೇಷ್ಠವೂ ಎನಿಸಿದ ಸಂಸ್ಕೃತ ಕಾವ್ಯಗಳನ್ನೂ, ಉಜ್ಜ್ವಲವಾದ ಕನ್ನಡ ಕಾವ್ಯಗಳನ್ನೂ ರಚಿಸಿದನು. ವಿದ್ವಾಂಸರು ಅವುಗಳನ್ನು ಮೆಚ್ಚಿಕೊಂಡು, ಆಶ್ಚರ್ಯದಿಂದ ಕೂಡಿ ಪ್ರಶಂಸಿಸಿದರು. ೬೩. ಷಡಕ್ಷರದೇವನೇ, ನಿರ್ದುಷ್ಟವಾದ ರಾಜಶೇಖರ ವಿಳಾಸವೆಂಬ ಮಹಾಕಾವ್ಯವನ್ನೂ, ವೃಷಭೇಂದ್ರ ವಿಜಯವೆಂಬ ಶ್ರೇಷ್ಠಕೃತಿಯನ್ನೂ ಕನ್ನಡ ಭಾಷೆಯಲ್ಲಿ ರಚಿಸಿದನು. ಲೋಕಪ್ರಸಿದ್ಧವಾದ ಕವಿಕರ್ಣರಸಾಯನವೆಂಬ ವಿಸ್ತಾರವಾದ

೧ ಪರಯ (ಚ); ಪರೆಯ (ಯ)

ಗದ್ಯ ಇದು ನಿಖಿಲ೧ಭುವನೈಕವಲ್ಲಭ, ಸುರಾಸುರೇಂದ್ರ ವರದಕರುಣಾವರಣ ಪರಮಶಿವಲಿಂಗ ತರುಣಪತಂಗಸಂಗತ ಮಂಗಳಹೃದಯಾರವಿಂದಬಂಧುರ ಸರಸಸಜ್ಜನ೨ಮಾನಿತೋಭಯ ಕವಿತಾ ವಿಚಕ್ಷಣ೩ ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳಪ್ರಬಂಧದೊಳ್ ಶಂಕರ ೪ಪ್ರಸನ್ನತಾವರ್ಣನಂ೪ ಪಂಚಮಾಶ್ವಾಸಂ ಪರಿಸಮಾಪ್ತಂ

ಶಬರಶಂಕರ ವಿಳಾಸಂ ಸಮಾಪ್ತಂ
ಮಂಗಳಮಹಾ ಶ್ರೀಶ್ರೀಶ್ರೀ

ಕಾವ್ಯವನ್ನು ಸಂಸ್ಕೃತ ಭಾಷೆಯಲ್ಲಿ ಬರೆದವನು ಷಡಕ್ಷರದೇವ ಕವಿಯೇ. ಗದ್ಯ : ಈ ಗದ್ಯ ಪದ್ಯಾತ್ಮಕವಾದ ಚಂಪೂಪ್ರಬಂಧವು ಸಮಸ್ತ ಲೋಕಗಳಿಗೂ ಏಕಮಾತ್ರ ಪ್ರಭುವೂ, ದೇವದಾನವೇಂದ್ರರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸುವವನೂ, ದಯಾ ಕವಚನೂ, ಶ್ರೇಷ್ಠನೂ, ಶುಭಚಿಹ್ನನೂ ಆದ ಮಹಾದೇವನೆಂಬ ತರುಣಭಾಸ್ಕರನೊಡ ಗೂಡಿದ ನಿರ್ಮಲಚಿತ್ತವೆಂಬ ತಾವರೆಯಿಂದ ಶೋಭಿತನೂ, ರಸಜ್ಞರಾದ ವಿದ್ವಾಂಸರಿಂದ ಪುರಸ್ಕೃತನೂ, ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಕವಿತಾಕೌಶಲವುಳ್ಳವನೂ ಆದ ಷಡಕ್ಷರದೇವನೆಂಬ ಕವಿಯಿಂದ ರಚಿತವಾದ ಕಿರಾತರುದ್ರ ಲೀಲಾಕಥನ ಮಹಾಕೃತಿಯಲ್ಲಿ ಶಂಕರಪ್ರಸನ್ನತಾವರ್ಣನೆಯೆಂಬ ಐದನೆಯ ಆಶ್ವಾಸವು ಸಮಾಪ್ತವಾದುದು.

ಶಬರಶಂಕರ ವಿಳಾಸವು ಸಮಾಪ್ತವಾದುದು
ಮಂಗಳಮಹಾ ಶ್ರೀ ಶ್ರೀ ಶ್ರೀ

---

೧ ಸಮಸ್ತ (ಚ, ಜ,) ೨ ಸರಸಜನ (ಯ) ೩ ವಿಶಾರದ (ಯ) ೪-೪ ಪ್ರಸನ್ನವರ್ಣನಂ (ಗ, ಚ, ತ, ಜ)

# ಅರ್ಥಕೋಶ

[ಸೂಚನೆ: ಪ್ರತಿ ಶಬ್ದಾರ್ಥದ ಕೊನೆಗೆ ಕೊಟ್ಟಿರುವ ಅಂಕಿಗಳು ಆಶ್ವಾಸ ಮತ್ತು ಪದ್ಯ–ಇವುಗಳನ್ನು ಕ್ರಮವಾಗಿ ಸೂಚಿಸುತ್ತವೆ. ಅಂಕಿಯ ಮುಂದೆ ಬರುವ "ವ"-ವಚನವನ್ನು ಸೂಚಿಸುತ್ತದೆ.]

## ಅ

ಅಕ್ಷರ–ನಾಶರಹಿತವಾದ ೧–೪

ಅಖರ್ವ-ಬಹಳ ೪–೨

ಅಗಾಹಿತರತ್ನ–ಇಂದ್ರನೀಲಮಣಿ ೩–೧೧ (ಅಗ+ಅಹಿತ=ಪರ್ವತವೈರಿಯಾದ ಇಂದ್ರ)

ಅಗಿ–ಬಿದಿರು ೧–೩೩

ಅಗುರ್ವಿಸು–ಭಯವನ್ನುಂಟುಮಾಡು ೪–೯

ಅಗ್ಗಿವೊಗ (ಸಂ. ಅಗ್ನಿಮುಖ)-ದೇವತೆ ೫–೯

ಅಚ್ಚಿಗ–ವಿಸ್ಮಯ ೪–೧೭

ಅಜಸ್ರಂ–ಯಾವಾಗಲು ೧–೭

ಅಟ್ಟೆ–ತಲೆಹರಿದ ದೇಹ, ರುಂಡ ೪–೧೬

ಅಡಗು–ಮಾಂಸ ೩-೩೯–ಯೋಗ್ಯತೆ ೪–೪೫

ಅಡರ್ಪು–ನೆಲೆ, ಆಶ್ರಯ ೧-೮೧ ವ

ಅಣಿಯರಂ-ಅತಿಶಯವಾಗಿ ೧–೨೫

ಅಂಡಲೆ-ಕಾಟ ೧–೫೨

ಅಂಡುಗೊಳ್-ಸಮೀಪಿಸು ೪–೬ ವ

ಅಣ್ಪು-ಲೇಪನ ೩–೧೬

ಅಣ್ಮು-ಪೌರುಷದೋರು ೪–೩೯

ಅಧಿಜ್ಯ–ಹೆದೆಯೇರಿಸಿದ ೪–೨೪

ಅಧ್ವರಿ-ಹೋಮಮಾಡುವವ ೨–೪೮

ಅನಂತರತ್ನ (ಅನಂತ-ಆಕಾಶ)ಸೂರ್ಯ ೧-೧೩

ಅನವದ್ಯ–ದೋಷರಹಿತ ೪–೧೧೮

ಅನಾಮಯ–ಶುದ್ಧ ೨–೯೮

ಅನಿಶಂ–ಯಾವಾಗಲೂ ೧–೩೭

ಅನೋಕಹ–ಮರ ೧–೫೧

ಅಪಾಂಗ-ಕಡೆಗಣ್ಣು ೨–೩

ಅಭಿಷಂಗ-ಅಪಜಯ, ಸೋಲು ೪–೧೭ ವ

ಅಭ್ಯರ್ಹಿತ–ಪೂಜ್ಯ ೪–೧೧೮

ಅಮರ್ದು–ಅಮೃತ ೧–೧೦

ಅಮರ್ದಾಗು–ಸರಿಯಾಗು ೧–೧೦

ಅಮರ್ದುಗೆಯ್ಯ–ಅಮೃತಕಿರಣಗಳುಳ್ಳವ, ಚಂದ್ರ ೨–೩೪

ಅರಿದು–ಅಶಕ್ಯ ೪–೫೩

ಅರ್ಗಳ–ದೊಡ್ಡ ೩-೬೧

ಅರ್ದಿತ–ಸೋಲಿಸಲ್ಪಟ್ಟ ೧–೫

ಅರ್ದಿಸು–ಕಡೆ, ಸೋಲಿಸು ೨-೯೦

ಅಲಂಪು-ಸೊಗಸು, ವಿಭವ ೧–೨೮

ಅವಗಾಹಂ-ಮುಳುಗಿ ೨-೧೦೦

ಅವ್ವಳಿಸು–ಅಡರು ೪–೮

ಅಸವಸ–ಅವಸರ ೧–೪೦

ಅಹೀನ-ಶ್ರೇಷ್ಠವಾದ; ಹಾವಿನ ಸಂಬಂಧವಾದ ೧–೧

ಅಹೀಂದ್ರ–ದೊಡ್ಡಹಾವು ೨–೫೫

ಅಳಜು–ಅಂಜು ೨–೮

ಅಳವಾಜು-ಶಕ್ತಿಗುಂದು ೧–೬೪

ಅಳವಿಗಳಿದ–ಅಳತೆಮೀರಿದ ೧–೨೯ ವ

ಅಳಿಕ–ಹಣೆ ೧–೮೧ ವ

ಅಳುಂಬ–ಅತಿಶಯ ೪–೧೨
ಅಳುರ್–ಆವರಿಸು, ತುಂಬು ೫–೧೦
ಅಳುರ್ಕೆ–ಹೆಚ್ಚಳ, ಆಧಿಕ್ಯ ೧–೬
ಅಳ್ಳಿಱ್–ನಡುಗಿಸು ೪–೯೦
ಅಟ್ಕಱ್–ಪ್ರೀತಿ ೨–೮೪

ಆ

ಆದಂ–ಅಧಿಕವಾಗಿ, ಹೆಚ್ಚಾಗಿ ೪–೭೦
ಆಭೀಳ–ಕಠಿಣ, ಭಯಂಕರ ೨–೮೬
ಆಮ್ನಾಯ–ವೇದ ೨–೮೫
ಆಂಪ–ಎದುರಿಸುವ ೪–೩೪
ಆರ್-ಗಟ್ಟಿಯಾಗಿ ಒದರು ೪–೧೪
ಆರಯ್–ಪರೀಕ್ಷಿಸು, ವಿಚಾರಿಸು ೪–೨೪ ವ
ಆರ್ಪು–ಪರಾಕ್ರಮ ೪–೧೦
ಆಲವಾಲ-ಗಿಡದ ಸುತ್ತಲೂ ನೀರು ನಿಲ್ಲಲಿಕ್ಕೆ ಮಾಡಿದ ಕಟ್ಟೆ ೧–೩೫
ಆವಿಲ–ಮಲಿನ ೫–೧೮
ಆಶುಗಮಿತ್ರ–ಬೆಂಕಿ ೨–೯
ಆಶ್ರಯಾಶ–ಬೆಂಕಿ ೫–೧೬
ಆಳ್ವರಿ–ಅಗಳ್ತೆಯ ಮೇಲಿನ ಗೋಡೆ ೧–೫೪

ಇ

ಇಟ್ಟೆಡೆ–ಇಕ್ಕಟ್ಟಾದ ಸ್ಥಳ ೪–೨೩
ಇಡಿಕಿಱ್–ತುಂಬು, ತೀವು ೪–೧೧೨
ಇಂದ್ರಗೋಪ–ಹೊನ್ನೆಯ ಹುಳು ೨–೪೨ ವ
ಇಂಬು-ಶೋಭಿಸುವ ೨–೪೨ ವ

ಈ

ಈಡಿಱ್-ಕೊಂಬಿನಿಂದ ತಿವಿ ೧–೩೩
ಈಂಟು-ಕುಡಿ ೧–೭

ಉ

ಉಚ್ಚಳಿಸು–ಒಳಹೊಕ್ಕು ಪಾರಾಗು ೪–೧೭
ಉಟಜ–ಪರ್ಣಶಾಲೆ ೨–೭೪
ಉತ್ಕರ-ಸಮೂಹ ೧–೩೫
ಉತ್ಸಂಗ-ತೊಡೆ ೧–೧
ಉದ್ಗಮ-ಹೂ ೨–೪೧
ಉಪಾಯನ-ಕಾಣಿಕೆ ೨–೪೨ ವ
ಉರರೀಕರಿಸು-ಸ್ವೀಕರಿಸು ೧–೧೪
ಉರ್ಬಟೆ-ಶೌರ್ಯಾತಿರೇಕ ೪–೬೫
ಉರ್ವಿ-ಹೆಚ್ಚಾಗಿ ೪–೬೭
ಉಲ್ಬಣ-ಬಲವಾದ ೧–೨೧
ಉಳ್ಕು-ಮಿಂಚು, ಹೊಳೆ, ಉರಿಹತ್ತು ೪–೭೧
ಉಳ್ಳಲರ್-ಅರೆಬಿರಿದ ಹೂ ೧–೫೧

ಋ

ಋಕ್ಷ-(೧) ಕರಡಿ (೨) ನಕ್ಷತ್ರ ೩–೨೯

ಎ

ಎಕ್ಕಲ-ಕಾಡುಹಂದಿ ೪–೫
ಎಟ್ಟು-ನಿಲುಕು ೪–೩೫
ಎಡ್ಡಮಾಗು-ಶೋಭಿಸು ೩–೭
ಎಂಟಡಿ-ಶರಭ ೨–೬೫
ಎರೆ–ಬೇಡು ೫–೪೩
ಎಱಕ-ಬೀಳುವಿಕೆ, ಅವಮಾನ ೪–೮೯
ಎಸಕ-ಕಾರ್ಯ ೪–೭೬
ಎಳವಿ-ಸರಿಗೊಳಿಸಿ ೨–೫೦
ಎಳಸು-ಆಸೆಪಡು ೪–೬೯

ಏ

ಏಳಿದಂಗೆಯ್-ನಿಂದಿಸು, ತಿರಸ್ಕರಿಸು ೪–೩೦ ವ

ಒ

ಒಚ್ಚತಂ-(೧) ಸಂಪೂರ್ಣವಾಗಿ (೨) ಸಂತೋಷದಿಂದ ೨–೮೯
ಒಟ್ಟಜೆ-ಶೌರ್ಯ, ಪರಾಕ್ರಮ ೪–೬ ವ
ಒಱಲ್ದು-ಮೆಚ್ಚಿ ೨–೯೬
ಒಲ್-ಪ್ರೀತಿಸು, ಇಚ್ಛಿಸು ೫–೧೮
ಒಸಗೆ-ಉತ್ಸವ, ಸಂತೋಷ ೨–೪೨ ವ

ಒಳಜು-ಆರ್ಭಟಿಸು, ಗರ್ಜಿಸು ೨-೧೫, ೪-೬೦
ಒಳ್ಳರಿಜು-(ಒಳ್+ಪರಿಜು)
ಸುಂದರಕಾಯ ೫-೯

ಓ

ಓಲ (ಓಲಾಡುವಿಕೆ)-ತೂಗಾಟ, ಸಂತೋಷ ೧-೪೩
ಓವು-ರಕ್ಷಿಸು, ಕಾಪಾಡು ೧-೨೫
ಓಸರಿಸು-ಹಿಂದೆಗೆ, ಓರೆಯಾಗು ೪-೫೯

ಔ

ಔರ್ವ-ಬಡಬಾಗ್ನಿ ೧-೩೦

ಕ

ಕಂಕೇಲ್ಲಿ-ಅಶೋಕೆ ೨-೪೨ ವ
ಕಜ್ಜಲ-ಕಾಡಿಗೆ ೩-೧೧
ಕಟ-ಹಣೆಯ ಮುಂಭಾಗ ೨-೫೯
ಕಟಕ-(೧) ಕಡಗ (೨)ಬೆಟ್ಟದ ತಪ್ಪಲು ೧-೧
ಹೆದೆ ೩-೫೨
ಕುಂಡಲ, ಕಡಗ ೪-೧
ಕಟಕಿ-ಅಪಹಾಸ್ಯ ೪-೩೩
ಕಟ್ಟಬಿಃಕೆಯ-ಸುಪ್ರಸಿದ್ಧವಾದ ೫-೧೫
ಕಟ್ಟುವಗ್ಗ-ಕಟ್ಟುವ ಹಗ್ಗ ೪-೧೩೫
ಕಡಂಗಿ-ರಭಸದಿಂದ ನಿಲ್ಲಿಸಿ ೧-೨೯
ಕಡಂಗು-ಪ್ರಯತ್ನಿಸು, ಉತ್ಸಾಹಪಡು ೧-೨೯
ಕಡವರ-ನಿಧಿ, ಚಿನ್ನ ೫, ೧೪ ವ
ಕಡೆಗಣ್ಣು-ಅಲಕ್ಷ್ಯಮಾಡು ೧-೨೯
ಕಣ್ಬೊಲಂದಪ್ಪು-ಕಣ್ಣಿಗೆ ಕಾಣದಂತಾಗು ೩-೩೫ ವ
ಕತ-ಕಾರಣ, ನೆವ ೪-೬೯
ಕದಿರ್-ಕಿರಣ, ಕಾಂತಿ ೧-೪೫
ಕನಲ್-ಸಿಟ್ಟಾಗು ೨-೪೨ ವ
ಕಬಂಧ-(೧) ನೀರಿನಿಂದ ಕೂಡಿದ್ದು ೨-೫೨
(೨) ರುಂಡ

ಕಮಲಾಕರ ಹಿಮಕರ-ಸರೋವರವೆಂಬ ಚಂದ್ರ ೨-೪೨ ವ
ಕಂಬಲಾಶ್ವತರ-ಕಂಬಲ-ಅಶ್ವತರ ಎಂಬ ಇಬ್ಬರು ನಾಗ (ಸರ್ಪ)ರು (ಇವರು ಕುಂಡಲರೂಪದಿಂದ ಶಿವನ ಕಿವಿಯಲ್ಲಿ ಸದಾ ಹಾಡುತ್ತಿರುವರಂತೆ) ೧-೨೯
ಕಂಬು-ಶಂಖ ೨-೫
ಕರುತ್ತು-ಗುರಿಯಿಟ್ಟು ೪-೬
ಕಱುಂಕೆ-ಗರಿಕೆ ೧-೩೮
ಕರೇಣು-ಹೆಣ್ಣಾನೆ ೩-೪೨
ಕರ್ಣಿಕಾರ-ಬೆಟ್ಟದಾವರೆ ೧-೩೫
ಕರ್ದಮ-ಕೆಸರು ೨-೮೧
ಕರ್ಪೋಪಲ-ಒರೆಗಲ್ಲು ೨-೪೨ ವ
ಕಲಾಪ-ಒಡ್ಯಾಣ ೩-೧೫
ಚಂದ್ರ ೫-೨೦
ಆಭರಣ ೫-೨೭
ಕಲಾಪಿ-ನವಿಲು ೨-೫
ಕವರ್-ಸುಲಿ, ಅಪಹರಿಸು ೧-೩೨
ಕಳಧೌತ-(೧) ಬಂಗಾರ (೨) ಬೆಳ್ಳಿ ೧-೫೪
ಕಳಂಬ-ಬಾಣ ೪-೫೨
ಕಳಿಂದಜಾ-ಕಾಳಿಂದಿ, ಯಮುನಾ ನದಿ ೧-೨
ಕಳೇವರ-ಮೈ, ದೇಹ ೧-೪೨
ಕಱಿಲೆ-ಎಳೆಬಿದುರು ೩-೩೭
ಕಾಂಡ-ಬಾಣ ೪-೨೪ ವ
ಕಾಯ್ದು-ಕಾಯಿಬಿಟ್ಟು ೨-೪೩
ಕಾದಲೆ-ಪ್ರಿಯತಮೆ ೪-೬೭
ಕಾಯ್ಪು-ಸಿಟ್ಟು ೪-೭
ಕಾಲಕ್ಷೇಳ-ಹಾಲಾಹಲ ೨-೧೦
ಕಾಲಾಧ್ವ-ಆಗ್ನೇಯ ? ೧-೫೮
ಕಾವ್ಯ-ಶುಕ್ರಾಚಾರ್ಯ ೨-೧೬
ಕಾಹಳಿಕಾ-ಕಹಳೆ ೨-೪೨ ವ

ಕಾಪ್ಪುರಂ–ಚಿಕ್ಕ ನದಿ ೧–೯೦
ಕಿಂಜಲ್ಕ–ಹೂವಿನ ಕೇಸರ ೫–೬
ಕಿಟಿ–ಹಂದಿ ೪–೫ ವ
ಕಿತವ–ಮೋಸಗಾರ ೨–೧೧೧
ಕಿತ್ತಡಿ–ಋಷಿ ೨–೮೩
ಕಿಂನರಿ–(೧) ವಾದ್ಯವಿಶೇಷ
(೨) ಕಿಂನರಸ್ತ್ರೀ ೨–೪೦
ಕಿಬ್ಬರಿ–ಕೆೞಗಿನ ಭಾಗ ೩–೫೧
ಕಿಂಶುಕ–ಮುತ್ತುಗದಮರ ೩–೩೫ ವ
ಕೀಲಾಕ್ಷ–ಅಗ್ನಿನೇತ್ರ ೧–೮೦ ವ
ಕುಡು–ಕೊಂಕಾದ ೪–೧೬
ಕುತ್ತುೞು–ಹೊದರು ೪–೨೩
ಕುನುಂಗು–ಮೈ ಕುಗ್ಗಿಸು, ಜಪ್ಪಿಸು ೪–೭೩
ಕುಂಬೆಡು–ಪೊಡಮಡು ೫–೫೪
ಕುಂಭಿ–ಆನೆ ೨–೫
ಕುರುಜು–ಬಿದಿರಿನ ಮಂಟಪ ೨–೪೨ ವ
ಕುವಾರಿ–(೧) ಭೂಮಿಯ ಮೇಲಿನ ನೀರು
(೨) ಕೆಟ್ಟ ನೀರು ೧–೨೨
ಕುಶ–ದರ್ಭೆ ೨–೧೦೮
ಕುಶೇಶಯ–ಕಮಲ ೨–೪
ಕೂವಕಂಬ (ಸಂ. ಕೂಪಸ್ತಂಭ) ಹಡಗಿನ
ಪಟಸ್ತಂಭ ೨–೪೪
ಕೃಚ್ಛ್ರ–ಕಠಿಣ ತಪಸ್ಸು ೪–೧೩೬
ಕೃತ್ತ–ಕತ್ತರಿಸಲ್ಪಟ್ಟ ೫–೨೦
ಕೆಂಗಣ್ವಕ್ಕಿ–ಕೋಗಿಲೆ ೨–೪೨ ವ
ಕೆಂಗಲಿಪ–ಕೆಂಪೇರುವ ೪–೧೨
ಕೆಣಕು–ಸೆಣಸು, ಸಿಟ್ಟಿಗೆಬ್ಬಿಸು ೪–೧೧
ಕೆನ್ನೀರ್–ರಕ್ತ ೪–೨೨
ಕೆಯ್ಗಣ್ಮು–ಉಂಟಾಗು ೧–೪೮
ಕೆರ್ಪು–ಚಪ್ಪಲಿ ೩–೨೭
ಕೇಣ–ಮತ್ಸರ ೪–೧೦
ಕೇಣಂಬಡೆದು–ಸಾವಕಾಶವಾಗಿ ೪–೮೭
ಕೇಳಿಕೆ (೧) ಪ್ರಸಿದ್ಧಿ (೨) (ಸಂ. ಕೇಲಿಕಾ)
ನುಡಿಸುವಿಕೆ ೧–೭೯ ವ
ಕೊಕ್ಕರಿಸು–ಬೆದರಿಸು ೪–೧೩
ಕೊಡಂಕೆ–ಕಿವಿ ೨–೪೦
ಕೊಣಕಿಡು–ಜಿಗಿ, ಹಾರು ೩–೫೧
ಕೊಣಸು–ಜಿಂಕೆಮರಿ ೨–೪೦
ಕೊನರ್–ಚಿಗುರು ೨–೪೩
ಕೊಪ್ಪು–ಬಿಲ್ಲಿನ ಕೊನೆ, ಕೋಟಿ ೪–೨೪ ವ
ಕೊಳುಗುಳ–ರಣಭೂಮಿ ೨–೫೨
ಕೋದಂಡಕೋಟಿ-ಬಿಲ್ಲಿನ ತುದಿ ೪–೧೭ ವ
ಕೋದು-ದಾರಪ್ಪೋಣಿಸಿ ೨–೬೪
ಕೌಶಿಕ-ಗೂಗೆ ೧–೨೦
ಕೌಸುಂಭ-ಕುಸುಬೆಯ ಹೂವಿನ ೧–೭೨ ವ
ಕ್ಷಣರುಚಿ-ಮಿಂಚು ೧–೭೮ ವ
ಕ್ಷ್ಮಾಧರ-ಪರ್ವತ ೧–೭

## ಖ

ಖಲೀನ-ಕಡಿವಾಣ ೨–೩೮
ಖೇಟಕ-ಢಾಲು ೧–೬೭

## ಗ

ಗಂಡಿಕೆ-ಪರಾಕ್ರಮ, ಶಕ್ತಿ ೩–೫೪
ಗಂಧರರು-ಗಂಧರ್ವರು ೧–೨೯
ಗಜಿವೂ-ಕೇದಗೆ ೩–೩
ಗಾಂಗ-ಗಂಗಾನದಿಯ ೨–೨೬
ಗಾಡಿ-ಸೊಬಗು ೫–೫೪
ಗಾಂಪ-ಹೆಡ್ಡ, ಎಗ್ಗ ೧–೨೪
ಗಾರುತ್ಮರತ್ನ-ಗರುಡಮಣಿ ೫–೩೩
ಗಾವರಿಪ-ಝೇಂಕರಿಸುವ ೨–೫೮
ಗಿರಿಕಾ-ಇಲಿ ೧–೬೪
ಗುಣ-(೧) ಸದ್ಗುಣ (೨) ದಾರ ೧–೧೭
ಗುಣಿ-(೧) ಬಟ್ಟೆ (೨) ಸದ್ಗುಣ ೧–೧೬

ಗೇಟು-ದೂರ ೨-೧೨೭
ಗೇಣ್-ಕತ್ತಿ ೩-೧೭
ಗೈರಿಕಾ-'ಜಾಜು' ಎಂಬ ಕೆಂಪು ಮಣ್ಣು ೩-೪
ಗೋಕರ್ಣ-ಸರ್ಪ ೪-೧

ಘ

ಘನರಸ-(೧) ಮೇಘಜಲ (೨) ಶ್ರೇಷ್ಠವಾದ ರಸ ೧-೨೨
ಘೃಣಿ-ತೇಜಸ್ಸು ೧-೭೦

ಚ

ಚಕ್ರಾನಿಲ-ಸುಂಟರಗಾಳಿ ೨-೪೨ ವ
ಚಂಚರೀಕ-ತುಂಬಿ ೫-೧೧
ಚಂದ್ರಕಿ-ನವಿಲು ೧-೫೯
ಚುರ್ಚು-ಸುಡು ೨-೯
ಚೊಲ್ಲೆಯ-ತುರುಬಿನ ಕೊನೆ ೩-೧೧
ಚೌದಂತ-ಐರಾವತ ೩-೪೪

ಜ

ಜಡ-(೧) ನೀರು (೨) ಮಾಂದ್ಯ ೧-೪೨
ಜನ್ಯ-ಯುದ್ಧ ೪-೧೨೭
ಜಾತರೂಪ-ಬಂಗಾರ ೧-೭೮ ವ
ಜಾಯಿಲ-ಬೇಟೆನಾಯಿ ೪-೧೦
ಜೀಮೂತವಾಹ-ಇಂದ್ರ ೨-೪೨ ವ
ಜೇವಣಶಾಲೆ-ಭೋಜನಶಾಲೆ ೨-೪೨ ವ
ಜೊನ್ನ-(ಸಂ)ಜ್ಯೋತ್ಸ್ನಾ-ಬೆಳ್ದಿಂಗಳು ೧-೨೪

ಟ

ಟಂಕ-ಒಂದು ಆಯುಧ ೫-೨
ಟೊಣೆ-ತಪ್ಪಿಸಿಕೊಳ್ಳು, ಮೋಸಮಾಡು ೪-೧೦

ಡ

ಡಗೆ-ಮೋಸ ೪-೭೭
ಡವಕೆ-ಪೀಕದಾನಿ, ಕಾಳಂಜಿ ೧-೭೮
ಡಿಂಡೀರ-ನೊರೆ ೧-೩೦
ಡೊಕ್ಕರ-ಗುದ್ದು ೪-೭೫

ತ

ತಂಗದಿರ್ಗಲ್-ಚಂದ್ರಕಾಂತಶಿಲೆ ೧-೫೦
ತಟಿದಂಗನೆ-ಮಿಂಚೆಂಬ ಸ್ತ್ರೀ ೧-೪೨
ತನು-ಸಣ್ಣ ೨-೮೭
ತರಕ್ಷು-ಹುಲಿ ೩-೨೮
ತರದಿಂ-ಕ್ರಮವಾಗಿ ೧-೪೮
ತರಿಸಂದು-ನಿಶ್ಚಯಿಸಿ ೪-೯೮
ತವಿಸು-ಕಡಿಮೆಮಾಡು, ನಾಶಮಾಡು ೪-೨೪ ವ
ತಳರ್-ಹೋಗು ೨-೪೨ ವ
ತಳವೆಳಗಾಗು-ತಳಮಳಿಸು, ಬೆರಗಾಗು ೪-೧೧೪
ತಳ್ವದೆ-ತಡಮಾಡದೆ ೧-೪೭
ತಳ್ಳಂಕ-ತಲ್ಲಣ, ಭೀತಿ ೨-೨ ವ
ತಿಬ್ಬಂ-ತೀವ್ರವಾಗಿ ೪-೪೦
ತಿರುವಾಯ್-ಹೆದೆ ೪-೧೯ ವ
ತುಂಗಭದ್ರ-(೧) ಅತ್ಯಂತ ಮಂಗಲಸ್ವರೂಪ (೨) ನದಿಯ ಹೆಸರು ೧-೩
ತುಂಡ-ಬಾಯಿ ೪-೧೭
ತುರೀಯ-ಪರಬ್ರಹ್ಮಸ್ಥಿತಿಯಲ್ಲಿರುವಂತಹ ೨-೯೮
ತುಱುಗಿ-ಗುಂಪಾಗಿ ೪-೧೭ ವ
ತುಱಿಲ್-ಪರಾಕ್ರಮ ೫-೯
ತೆಗಟು-ನಿಂದಿಸು ೧-೧೫
ತೆಮಳ್ಚ-ನಾಶಗೊಳಿಸುವ ೫-೪೦
ತೊಂಡುಗೆಡೆ-ಚಪ್ಪರಿಸು ೧-೫೨
ತೋಡಿಲ್ಲದ-ಅಪಮಾನವಾದ ೪-೨೪ ವ
ತ್ವಿಟ್-ಪ್ರಕಾಶ ೨-೨೩

ದ

ದಂಡೆ-ಹೂಮಾಲೆ ೪-೫೯
ದಾರವಟ್ಟ-ಹೆಬ್ಬಾಗಿಲು (ಸಂ. ದ್ವಾರಪಟ್ಟ) ೧-೬೯
ದಿವಿಷನ್ಮಣಿ-ಚಿಂತಾಮಣಿ ೫-೬೧

ಪದೆದು-ಪ್ರೀತಿಪಟ್ಟು ೧-೨೨
ಪನ್ನತಿಕೆ-ಪರಾಕ್ರಮ ೪-೧೦೪
ಪಯಿಶ್ಚರ-ಮೀನು ೪-೧೧೦
ಪಯ್ಸರಿಸು-ಜಾರು ೪-೭೩
ಪರದ ವ್ಯಾಪಾರಿ ೨-೪೨ ವ
ಪರಾಭೂತಿ-ಸೋಲು ೪-೯೫
ಪರಿಕಲಿಸು-ವಿಸ್ತಾರವಾಗು ೨-೪೨ ವ
ಪರಿಜು-ರೂಪು, ಆಕಾರ ೧-೭೧ ವ
ಪಱಿಮುಱಿ-ಆನಂದ, ಸಂತೋಷ ೩-೩೫ ವ
ಪರಿಸ-(ಸಂ.) ಪರುಷ ೩.೩೦
ಪರಿಸರ-ಸಮೀಪ ೨-೭೮ ವ
ಪರುಟವಿಸು-ಬಿತ್ತರಿಸು ೪-೨೯
ಪಲ್ಲಮಱಿ-ಆನೆ ೩-೪೩
ಪಳಂಚು-ತಾಕು ೧-೪೭
ಪಱವಾತು-ವೇದ ೨-೧೨
ಪಱಿಕಿಯ್-ಕೀಳುಮಾಡು, ನಿಂದಿಸು ೧-೧೯
ಪಾಂಡು-ಬಿಳಿಯ ೧-೩೦
ಪಾರ್-ಸಮಯ ನಿರೀಕ್ಷಣೆಮಾಡು ೧-೬೫
ಪಾರುಗೆಯ್ತ್ತ-ಚಂಚಲವೃತ್ತಿ ೧-೩೧
ಪಾಱುಂಬಳೆ-ಚಕ್ರ ೨-೫೯
ಪಾಸಱೆ-ಹಾಸುಗಲ್ಲು ೨-೩೨
ಪಿಂಗಚಕ್ಷು-ದುರ್ಯೋಧನ ೩-೨೯
ಪಿಡಿ-ಹೆಣ್ಣಾನೆ ೩-೪೩
ಪಿಸುಣಾಡು-ಚಾಡಿಹೇಳು ೧-೫೦
ಪಿಹಿತ-ಮುಚ್ಚಲ್ಪಟ್ಟ ೨-೫೭
ಪೀಲಿ-ನವಿಲುಗರಿ ೩-೯
ಪೆಳರ್ದು-ಹೆದರಿ ೧-೩೯
ಪುಂಖ-ಬಾಣದ ಹಿಂಭಾಗ, ಕೆಯ್ಪೊಡೆ ೪ ೪೨
ಪುಂಗವ-ವೃಷಭ ೫-೨೭
ಪುರುಡಿಸು-ಸ್ಪರ್ಧಿಸು ೪-೪೧
ಪುಷ್ಕರ-ಆಕಾಶ ೫-೨೯
ಪುಳಿಂದ-ಬೇಡ ೩-೬೩ ವ
ಪುಟಿಲ್ (ಸಂ.) ಪುಳಿನ-ಉಸುಕು ೧-೩೪
ಪುಟುವಕ್ಕಿ-ಹಾಲುವಿನ ಹಸುರುಬಣ್ಣದ ರೆಕ್ಕೆ ೩-೯
ಪೂಣ್-ಪ್ರತಿಜ್ಞೆಮಾಡು ೧-೯೧ ವ
ಪೃಥು (೪)-ಬಹಳ, ದೊಡ್ಡ ೨-೮೫
ಪೆಳಱ್-ಹೆದರು ೧-೩೯
ಪೆಂಪು-ಅತಿಶಯ ೧-೨೮
ಪೇರಡಿ-ನಾಯಿ, ಸೊಣಗ ೩-೨೩
ಪೈಸರಿಸು-ಮೇಲಕ್ಕೆ ಜಗಿಯುವುದು ೪-೭೩
ಪೊಗರ್-ಪ್ರಕಾಶ ೪-೧೯
ಪೊಂಗು-(ಮೆಯ್) ಹಿಗ್ಗಿಸು ೪-೧೨
ಪೊಡರ್-ಶೋಭಿಸು, ಸ್ಫುರಿಸು ೩-೧೩
ಪೊಡರ್ಪು-ಪ್ರಸಿದ್ಧಿ, ಶಕ್ತಿ ೨-೯೪
ಪೊಡೆ-ಹೊಟ್ಟೆ ೬-೭೯
ಪೊಣರ್ಕೆ-ಹೋರಾಟ ೪-೮೬
ಪೊದಳ್ಕೆ-ಪೊದೆ, ಹೊದರು ೧-೩೪
ಪೊದಱ್-ಪ್ರಕಟವಾಗು, ಹುಟ್ಟು ೧-೧೦
ಪೊರೆ (ಹೊರೆ)-ಸಮೀಪ ೫-೧೨
ಪೊರೆಯೇಱು-ಆನಂದದಿಂದ ಉಬ್ಬು ೧-೭೯ವ
ಪ್ರಕೃತಿ-ಸ್ವಭಾವ ೧-೪೪
ಪ್ರಣಿಧಿ-ಗೂಢಚರ ೩-೩೭
ಪ್ರತಿಮಾನ-ಆನೆಯ ದಂತವೆರಡರ ನಡುವಿನ ಭಾಗ ೩-೪೨
ಪ್ರಪತ್ತಿಯಿಂ-ಶರಣಾಗತನಾಗಿ ೨-೧೧೭
ಪ್ರಭಂಜನ-ಬಿರುಗಾಳಿ ೨-೪
ಪ್ರಸ್ಫುರಿತ-ಚೆದುರಿಸಿದ ೪-೨೯
ಪ್ರಾಂಚತ್-ಶೋಭಿಸುವ ೪-೧೧೯

ಬ

ಬಗ್ಗಣೆ-ಚಿಗುರುಗಳನ್ನು ಸವಿಯುವ ಧ್ವನಿ ೨-೪೫

ಬಂಕ-ಮೂಲೆ ೧-೬೭
ಬಂಚರ-ವೀಣೆ, ತಂಬೂರಿ ೨-೪೨ ವ
ಬರಿ-ಪಕ್ಕೆ ೪-೧೫
ಬಱಿ-ಬತ್ತು, ಹಿಂಗು ೪-೮೯
ಬರ್ಹ-ನವಿಲುಗರಿ ೨-೬೫
ಬಲಾಹಕ-ಮೇಘ ೪-೨೯
ಬವರಿವರಿ-ಸುತ್ತುವರಿ ೪-೧೭ ವ
ಬೞಲ್-ಜೋಲು, ಸಡಿಲು ೩-೭
ಬೞಲ್ಚು-ಸೋಲಿಸು, ಹಿಂಡು ೫-೩
ಬಾಗಿಲ್ವಾಡ-ಪುರದ್ವಾರ, ಗೋಪುರ ೧-೬೧
ಬಾಯ್ದೆರೆ-ತುಟಿ ೨-೪೨ ವ
ಬಾಳೆ-ಮೀನು ೨-೫೧
ಬಿದಿರ್ಚು-ಬಿಚ್ಚು, ತಪ್ಪಿಸು ೪-೯೦
ಬಿನ್ನಣ-ಜಾಣತನ ೪-೧೦
ಬಿಸಕಾಂಡ-ತಾವರೆಯ ದಂಟು ೩-೪೪
ಬಿತ್ತು-ಬೀಜ ೨-೪೨ ವ
ಬಿಡೆವಿರಿ-ಬಿರಿ ೨-೪೨ ವ
ಬೂತಾಟ-ಮೋಸ ೪-೯೭
ಬೆಕ್ಕಸಮುತ್ತು-ಅತ್ಯಾಶ್ಚರ್ಯಪಟ್ಟು ೫-೬೨
ಬೆಚ್ಚ-ಬೆಸೆದ ೨-೧೦೨
ಬೆಸನ-ಆಜ್ಞೆ ೨-೪೨ ವ
ವ್ಯಸನ ೨-೯೦
ಬೆಳ್ಪಳಿಸು-ಕಳವಳಿಸು ೪-೧೧೩
ಬೆಳ್ಮಾರ-ಬಲೆ ೩-೨೫
ಬೇ-ತೀರು, ಒಣಗು ೪-೮೯
ಬೇವಸ-ಚಿಂತೆ, ದುಮ್ಮಾನ ೪-೯೧

ಭ

ಭಂಗ-(೧) ಕೇಡು, ಅವಮಾನ (೨) ಸಮುದ್ರದ ತೆರೆ ೧-೩೨
ಭರಿಕೆಯ್-ಸೊಂಡಿಲು ೩-೫೮
ಭರ್ಮ-ಬಂಗಾರ ೧-೫೫
ಭವಾಮಯ-ಸಂಸಾರವೆಂಬ ರೋಗ ೫-೨೨
ಭಾಜನ-ಪಾತ್ರ ೪-೧೨೫
ಭುಜಂಗ-ವಿಟ ೨-೪೨ ವ
ಭೃಂಗಾರ-ಕಲಶ ೧-೮೯ ವ
ಭೃತ-ಧರಿಸಿದ ೧-೫೮
ರಕ್ಷಿಸಿದ ೫-೪೭
ಭೇಕ-ಕಪ್ಪೆ ೧-೧೩
ಭೋಗಿ-(ಹೆಡೆಯುಳ್ಳದ್ದು) ಸರ್ಪ ೧-೮೨
ಭ್ರಾಜಿಷ್ಣು-ಪ್ರಕಾಶವುಳ್ಳ ೧-೧
ಭ್ರುಕುಟಿ-ಹುಬ್ಬುಗಂಟು ೯-೨೧

ಮ

ಮಡಲ್-ಪಸರಿಸು, ಹಬ್ಬು ೪-೧೦೨
ಮನೋಗದ-ಚಿಂತೆ, ದುಃಖ ೪-೧೧೩
ಮರಂದರಸ-ಮಕರಂದರಸ ೨-೩೯
ಮರಲ್-ಮರಳು, ಹಿಂದಿರುಗು ೪-೧೨
ಮರುತ್-ದೇವತೆಗಳು ೨-೪೩
ಮರೆ-ಚಿಗರೆ ೩-೨೮
ಮುಜುಜವಣಿ-ಸಂಜೀವನ ವನಸ್ಪತಿ ೩-೩೦
ಮರ್ಚು-ಮೆಚ್ಚು ೨-೪೭
ಮಲ್ಲಱಿಗೊಳ್-ತಳಮಳಿಸು ೨-೨ ವ
ಮಶಕ-ನೊರಜು, ಸೊಳ್ಳೆ ೪-೪೫
ಮಸಕ-ಪ್ರಭಾವ, ಪ್ರಬಲತೆ ೨-೨ ವ
ಸಿಟ್ಟು ೪-೩೮
ಮಹಿತ-ಯೋಗ್ಯವಾದ ೨-೨೬
ಮಾಣಿಸು-ನಿಲ್ಲಿಸು ೧-೨೯
ಮಾಧವ-ವಸಂತ, ವಿಷ್ಣು ೧-೨೮
ಮಾಮಸಕ-ಸಂಭ್ರಮ ೩-೫೫
ಮಾರ್ಗಣ-ಬಾಣ ೪-೧೯
ಮಿಗದೇರ-ವಾಯು ೧-೩೯
ಮಿಗಬೇರ-ವ್ಯಾಘ್ರ ೫-೯
ಮಿದಿ-ಹಿಮ್ಮಡ ೪-೧೭ ವ

ಮಿಹಿರ-ಸೂರ್ಯ ೨-೬
ಮಿಳಿರ್-ತೂಗಾಡು ೩-೪೨
ಮಿಳ್ಳಿಜಿ-ಚಲಿಸು ೩-೬೨
ಮುಡುಪು-ಭುಜದ ಮೇಲ್ಭಾಗ ೮-೭೯
ಮೂಡಿಗೆ-ಬತ್ತಳಿಕೆ ೪-೨೪ ವ
ಮೃಗಮದ-ಕಸ್ತೂರಿ ೨-೮೧
ಮೇಚಕಿತ-ಕಪ್ಪಾದ ೨-೫೧
ಮೊಕ್ಕಳ-ಬಹಳ, ವೆಗ್ಗಳ ೪-೧೧
ಮೊರಡಿ-ದಿಣ್ಣೆ ೩-೩೦

ಯ

ಯಮಿ-ತಪಸ್ವಿ ೪-೧೦೩

ರ

ರಜನೀ-ಅರಸಿಣ ೨-೪೨ ವ
ರತ್ನಗರ್ಭೆ-ಭೂದೇವಿ ೨-೪೨ ವ
ರಥಂತರ-ವೇದದೊಳಗಿನ ಶಿವಸ್ತವನ ಮಂತ್ರ ೧-೭೯ ವ
ರಥಾಂಗ-ಚಕ್ರವಾಕ, ಚಕ್ರ ೧-೫೩, ೫-೨೬
ರಸನೆ-ನಾಲಗೆ ೧-೨೧
ರಸಾರುಹ-ಮರ ೨-೪೨ ವ
ರಸಾಲ-ಮಾವು ೨-೪೨ ವ
ರಾಕಾ-ಪೂರ್ಣಿ ೧-೪
ರಿಂಗಣ-ನೃತ್ಯ ೫-೩೭
ರುಕ್-ಪ್ರಕಾಶ ೫-೨೬
ರುರು-(೧) ಜಿಗುರೆ (೨) ಋಷಿಯ ಹೆಸರು ೩-೨೯
ರೇಶ-ಕುಬೇರ ೫-೨೭
ರೊಂಕಿಡು-ಆರ್ಭಟಿಸು, ಗರ್ಜಿಸು ೩-೫೬
ರೋಮಶ-ಬಹಳ ಕೂದಲುಳ್ಳ ೧-೬೬
ರೋಲಂಬ-ತುಂಬಿ ೨-೫

ಱ

ಱೊಪ್ಪು-ಗರ್ಜಿಸು ೪-೧೨

ಲ

ಲತಾಂತ-ಹೂ ೨-೬೩
ಲಾಸ್ಯ-ನರ್ತನ ೨-೪೬
ಲುಬ್ಧಕ-ಬೇಡ ೪-೧೪
ಲುಲಾಯ-ಕೋಣ ೧-೪೯, ೩-೪೬
ಲುಳಿ-ಚಳಕ ೪-೬೦

ವ

ವಪ್ರ-ಪರ್ವತದ ತಪ್ಪಲು ೧-೭
ವಪ್ರಕ್ರೀಡೆ-ಆನೆ, ಹೋರಿ ಮುಂತಾದುವುಗಳ ತಲೆಯಿಂದ ಹಾಯುವ ಆಟ ೧-೭
ವಲ್ಲಕಿ-ವೀಣೆ ೧-೭೯ ವ
ವಸ್ತುಕ-ಚಂಪು ರಚನೆ ೫-೫೯
ವಹಿತ್ರ-ಹಡಗು ೫-೩೨
ವಳಕ್ಷ-ಬಿಳಿಯ ಬಣ್ಣ ೧-೬೫
ವಾರ-ಸಮೂಹ ೫-೨೦
ವಾರ್ಧರ-ಮೋಡ ೧-೩೫
ವಾಸಿ-ಪಂತ, ಪಣ ೪-೩೬
ವಿಕಚ-ಅರಳಿದ ೨-೪೨
ವಿತತ-ವಿಸ್ತಾರ ೧-೧
ವಿತರ್ದಿ-ಕಟ್ಟೆ, ಜಗಲಿ ೧-೬೦
ವಿದ್ರುಮಲತಾಂಭ-ಹವಳದ ಬಳ್ಳಿಯಂತೆ ಶೋಭಿಸುವ ೫-೨೯
ವಿಧುಂತುದ-ರಾಹು ೩-೩೯
ವಿಶಿಖ-ಬಾಣ ೪-೧೨೮
ವಿಶಾಣ-ಕೊಂಬು ೧-೩೬
ವಿಸಟಂಬರಿ-ಯಥೇಷ್ಟವಾಗಿ ಹರಿ ೧-೭೭
ವಿಸರ-ಸಮೂಹ ೪-೪೨ ವ
ವೃಂತ-ಬೀಸಣಿಕೆ ೩-೬೪
ವೈಶ್ವಾನರ-ಅಗ್ನಿದೇವತೆ ೫-೩೫

ಶ

ಶಣ-ಸಣಬು ೩-೨೫

ಶಂಬ-ವಜ್ರ ೫-೧೭
ಶಂಬರವಿಪಕ್ಷ-ಮದನ ೨-೫
ಶರಭಂಗ-(೧) ಬಾಣದ ತುಣುಕು (೨) ನೀರಿನ ತೆರೆ ೨-೫೨
ಶಾಖಾಚರ-ಕಪಿ ೪-೭೫
ಶಾಖಾಮೃಗ-ಕಪಿ ೧-೧೫
ಶಾಲ-ಕೋಟೆಯ ಗೋಡೆ ೧-೫೪
ಶಿಖಾವಹ-ಬೆಂಕಿ ೨-೪೨ ವ
ಶಿಲೀಮುಖ-(೧) ಬಾಣ (೨) ತುಂಬಿ ೨-೫೨
ಶುಕ್ತಿಜ-ಮುತ್ತು ೧-೩೪
ಶೃಂಗಾಟಕ-ಭ್ರೂಮಧ್ಯಸ್ಥಾನ ೨-೧೦೩
ಶೈಲಾದಿ-ನಂದೀಶ್ವರ ೨-೨ ವ
ಶೈವಲ-ಹಾವಸೆ ೩-೪೨
ಶ್ಮಶ್ರು-ಮೀಸೆ, ಗಡ್ಡ ೪-೩೯

ಷ

ಷಂಡ-ಸಮೂಹ ೧-೮೧

ಸ

ಸಂರಂಭ (ಸೌರಂಭ)-ಸಂಭ್ರಮ, ರೋಷ ೪-೧೫ ವ
ಸಂವರ್ತ-ಪ್ರಳಯ ೪-೧೭ ವ
ಸಂಶ್ರಯ-ಆಶ್ರಯ ೫-೧೬
ಸಂಕ್ರಂದನ (=ಇಂದ್ರ) ವೈರಿ-ರಾಕ್ಷಸ ೪-೨೦
ಸಂಗಳಿಸಿದ-ಕೂಡಿಕೊಂಡ ೨-೪೨ ವ
ಸಂಚುವೆತ್ತ-ಕಲಾಪೂರ್ಣವಾದ ೩-೩೫ ವ
ಸತ್ತ್ವ-ಪ್ರಾಣ ೪-೭
ಸದರ-ಸುಲಭ ೪-೬೧
ಸದ್ವೃತ್ತ-(೧) ದುಂಡಾದ (೨) ಒಳ್ಳೆಯ ವರ್ತನವುಳ್ಳ ೧-೨೮
ಸಂದೃಪ್ತ-ಮತ್ತ ೩-೫೭
ಸಪತ್ನ-ಹಗೆ ೪-೭೯
ಸಬ್ಬವಕಾರ-ಮೇಳದವ ೩-೨
ಸಮದಂಡಿಯೊಳ್-ಸರಿಜೋಡಿಯಾಗಿ ೪-೬೬
ಸರವಿ-ಹಗ್ಗ ೨-೮೧
ಸರಳಿಸು-ಜಗಿ, ಹಾರು ೩-೪೮
ಸರಿ-ಮಳೆ ೪-೬೨
ಸವಗ-ಕವಚ ೨-೧೦೮
ಸವಿಧ-ಸಮೀಪದ ೪-೬೬
ಸಾಮಜ-ಆನೆ ೨-೪೬
ಸಾರಮೇಯ-ನಾಯಿ ೩-೨೫
ಸಾರಸಾರಸ-ಕಮಲ ೫-೨೭
ಸಾರ್ಕೆ-ಸಮೀಪ ೨-೧೪
ಸಿಡುಂಬು-ಮುಳ್ಳುಕಂಟಿ ೪-೨೩
ಸಿತಗ-ಕ್ಷುಲ್ಲಕ ೨-೮೬
ಸುಂಟಿಡು-ಸುತ್ತು ೨-೬೮
ಸುತ್ರಾಮ-ಇಂದ್ರ ೫-೨೫
ಸುಪರ್ವ-ದೇವತೆ ೪-೨
ಸುಭಗ-ಸುಂದರ ೧-೨೬
ಸುಮನ-(ಸ್) (೧) ದೇವತೆಗಳು (೨) ಹೂ ೧-೨೮
ಸುರಾಧ್ವ-ಆಕಾಶ ೨-೩೮
ಸುಸಿಲಾಸೆ-ಕಾಮೇಚ್ಛೆ ೧-೨೭
ಸೂಡು-ತಲೆಮೇಲೆ ಹಾಕು ೪-೬೨
ಸೂಳ್-ಸರದಿ, ಸಮಯ ೧-೭೯ ವ
ಸೆಡೆ-ಅಳ್ಕು, ಭಯಪಡು ೪-೪೫
ಸೆಲಂದಿ-ಜೇಡರ ಹುಳ ೨-೭೩
ಸೈರಿಭ-ಕೋಣ ೩-೨೮
ಸ್ಫುಟಿ-ಹೆಡೆ ೪-೭೮
ಸ್ವರ್ಧುನೀ-ದೇವಗಂಗೆ ೫-೨

ಹ

ಹಮ್ಮದ-ಮೂರ್ಛೆ ೨-೧೦
ಹರಿ-ಇಂದ್ರ, ವಿಷ್ಣು ೩-೪೦
ಹರಿನ್ಮಣಿ-ಪಚ್ಚೆ ೧-೩೮
ಹಾಲಾಹಲ-ವಿಷ ೧-೩೧
ಹೃಷೀಕ-ಇಂದ್ರಿಯ ೨-೯೦

